# ಮಳವಳ್ಳಿ ಕನ್ನಡ ನುಡಿರಚನೆಯ ಸ್ವರೂಪ

(ಪ್ರಾದೇಶಿಕ-ಸಾಮಾಜಿಕ ಒಳನುಡಿಗಳ ಅಧ್ಯಯನ)

(ಪಿಎಚ್.ಡಿ ಪದವಿಗಾಗಿಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾದ ಸಂಶೋಧನ ಮಹಾಪ್ರಬಂಧ)


ಸಂಶೋಧಕ

ಶಿವಣ್ಣ

ಮಾರ್ಗದರ್ಶಕರು

ಡಾ.ಪಿ.ಮಹಾದೇವಯ್ಯ

ಪ್ರಾಧ್ಯಾಪಕರು

ಕನ್ನಡ ಭಾಷಾಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ






ಕನ್ನಡ ಭಾಷಾಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ-೫೮೩೨೭೬

೨೦೧೯-೨೦೨೦

# ಮಳವಳ್ಳಿ ಕನ್ನಡ ನುಡಿರಚನೆಯ ಸ್ವರೂಪ

## (ಪ್ರಾದೇಶಿಕ-ಸಾಮಾಜಿಕ ಒಳನುಡಿಗಳ ಅಧ್ಯಯನ)

(ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾದ ಸಂಶೋಧನ ಮಹಾಪ್ರಬಂಧ)


**ಸಂಶೋಧಕ**

**ಶಿವಣ್ಣ**

**ಮಾರ್ಗದರ್ಶಕರು**

**ಡಾ.ಪಿ.ಮಹಾದೇವಯ್ಯ**

ಪ್ರಾಧ್ಯಾಪಕರು

ಕನ್ನಡ ಭಾಷಾಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ






**ಕನ್ನಡ ಭಾಷಾಧ್ಯಯನ ವಿಭಾಗ**

**ಭಾಷಾ ನಿಕಾಯ**

**ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ-೫೮೩೨೭೬**

**೨೦೧೯-೨೦೨೦**

# ದೃಢೀಕರಣ ಪತ್ರ

ಶಿವಣ್ಣ ಅವರು **"ಮಳವಳ್ಳಿ ಕನ್ನಡ ನುಡಿರಚನೆಯ ಸ್ವರೂಪ (ಪ್ರಾದೇಶಿಕ–ಸಾಮಾಜಿಕ ಒಳನುಡಿಗಳ ಅಧ್ಯಯನ)"** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. **ಪಿಎಚ್.ಡಿ** ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

(ಡಾ.ಪಿ.ಮಹಾದೇವಯ್ಯ)

ಮಾರ್ಗದರ್ಶಕರು
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

**ದಿನಾಂಕ:** ೬.೦೯.೨೦೧೯
**ಸ್ಥಳ:**ವಿದ್ಯಾರಣ್ಯ

# ಪ್ರಮಾಣ ಪತ್ರ

"ಮಳವಳ್ಳಿ ಕನ್ನಡ ನುಡಿ ರಚನೆಯ ಸ್ವರೂಪ (ಪ್ರಾದೇಶಿಕ-ಸಾಮಾಜಿಕ ಒಳನುಡಿಗಳ ಅಧ್ಯಯನ)" ಎಂಬ ಮಹಾಪ್ರಬಂಧವನ್ನು **ಡಾ.ಪಿ.ಮಹಾದೇವಯ್ಯ** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಾಗಲಿ ಸಲ್ಲಿಸಲಾಗಿರುವುದಿಲ್ಲ ಎಂದು ಪ್ರಮಾಣೀಕರಿಸುತ್ತೇನೆ.

(ಶಿವಣ್ಣ)
ಸಂಶೋಧಕ
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ: 06/09/2019
ಸ್ಥಳ:ವಿದ್ಯಾರಣ್ಯ

# ಪರಿವಿಡಿ

## ಪ್ರಸ್ತಾವನೆ

ಮಾನವನ ಸಿದ್ಧಿ ಸಾಧನೆಗಳಲ್ಲಿ ಭಾಷಾಸಿದ್ಧಿ ಅಪೂರ್ವ ಹಾಗೂ ಮಹತ್ವವಾದುದು. ಭಾಷೆಯ ಪಾತ್ರ ಆತನ ದೈನಂದಿನ ವ್ಯವಹಾರದಲ್ಲಿ ಹಿರಿದಾಗಿದ್ದು ಉಸಿರಿನಷ್ಟೆ ಸಹಜವಾಗಿದೆ. ಇದರೊಂದರಿಂದಲೆ ಆತನು ಪ್ರಾಣಿಗಿಂತ ಭಿನ್ನವಲ್ಲದೆ ಅದ್ವಿತೀಯನೂ ಹೌದು. ಭಾಷೆ ಬೌದ್ಧಿಕ ಹಾಗೂ ಸಾಮಾಜಿಕ ಕ್ರಿಯೆ. ಅವನ ಅನಿಸಿಕೆ, ಅನುಭವ, ಭಾವೋದ್ವೇಗಗಳನ್ನು ಸಮರ್ಥ, ಸಾರ್ಥಕ ರೀತಿಯಲ್ಲಿ ಸಂವಹಿಸುವುದು ಭಾಷಾ ಮಾಧ್ಯಮ. ವ್ಯಕ್ತಿಯ ಸಾಮಾಜಿಕ, ಸಾಂಸ್ಕೃತಿಕ, ಪ್ರಾಂತೀಯ, ವೈಯಕ್ತಿಕ ವೈಶಿಷ್ಟ್ಯಗಳನ್ನು ಆತನ ನುಡಿಯಲ್ಲೇ ನಿರೂಪಿಸುವುದು ರೂಢಿ ಹಾಗೂ ಅನಿವಾರ್ಯ. ಸಮಾಜದ ದೈನಂದಿನ ಕ್ರಿಯೆಗಳು ಮೌಖಿಕ ಸಂವಹನದಲ್ಲಿ ಪ್ರಾಧಾನ್ಯತೆಯನ್ನು ಗಿಟ್ಟಿಸಿಕೊಂಡಿರುವುದರಿಂದಲೇ ಇಂದು ಭಾಷಾ ವೈಜ್ಞಾನಿಕ ಅಧ್ಯಯನ ಅರ್ಥಪೂರ್ಣ ಹಾಗೂ ಅವಶ್ಯ.

ಭಾಷೆ ಸಂಸ್ಕೃತಿಯ ಒಂದು ಮುಖ್ಯ ಅಂಗ, ಸಂಸ್ಕೃತಿಗೆ ಸಂಬಂಧಿಸಿದ ಸರ್ವಾಂಗೀಣ ಚಟುವಟಿಕೆಯ ಬುನಾದಿ. ಸಮಾಜದ ಸಮಸ್ತ ಚಟುವಟಿಕೆಯ ಕೇಂದ್ರ ಭಾಷೆ. ಸಂಸ್ಕೃತಿ ಭಾಷೆಯೊಂದಿಗೆ ಮಿಳಿತಗೊಂಡು ಭಾಷೆಯನ್ನು ಬೆಳಸುತ್ತದೆ. ಮಾನವ ತನ್ನ ಭಾವನೆಗಳನ್ನು ಸುತ್ತಿನವರಿಗೆ ಅರಿಯುವಂತೆ ಅಭಿವ್ಯಕ್ತಿಸುವ ಧ್ವನಿ ಸಂಕೇತಗಳ ಕ್ರಮಬದ್ಧ ವ್ಯವಸ್ಥೆಯೇ ಭಾಷೆ. ಒಂದು ಸಮಾಜದ ಜನ ತಮ್ಮ ಭಾವನೆ ಹಾಗೂ ಆಲೋಚನೆಗಳ ಕೊಡುಕೊಳ್ಳುವಿಕೆಗಾಗಿ ಧ್ವನ್ಯಂಗಗಳಲ್ಲಿ ಉಚ್ಚರಿಸಿದ ಯೋಗ್ಯ ಯಾದೃಚ್ಛಿಕ ಧ್ವನಿ ಸಂಕೇತಗಳ ಮೊತ್ತ. ಹಾಗೂ ಜನಾಂಗದ ಸಂಸ್ಕೃತಿ, ಪ್ರಾದೇಶಿಕತೆ ಮತ್ತು ಜನರ ಬದುಕಿನ ನವಿರಾದ ಭಾವನೆಗಳನ್ನು ಚಿತ್ರಿಸುವ ಸಂವಹನಗಳ ಮಾಧ್ಯಮ.

ಒಂದು ಭಾಷೆಯ ಧ್ವನ್ಯಾತ್ಮಕ, ವ್ಯಾಕರಣಾತ್ಮಕ ಹಾಗೂ ಅರ್ಥಾತ್ಮಕ ರಚನೆಗಳ ವೈಜ್ಞಾನಿಕ ವಿಶ್ಲೇಷಣೆಯೇ "ಭಾಷಿಕ ವಿಶ್ಲೇಷಣೆ" ಮುಖ್ಯವಾಗಿ ಇದು ಭಾಷೆಯ ವಿವಿಧ ಸ್ಥರಗಳನ್ನು, ಮಾತಿನ ಸಹಜ ಸ್ವರೂಪದ ಸವಿವರ ವಿಶ್ಲೇಷಣೆ. ಆಧುನಿಕ ಭಾಷಾ ಅಧ್ಯಯನದಲ್ಲಿ ಆಡು ನುಡಿಯ ಅಧ್ಯಯನಕ್ಕೆ ಹೆಚ್ಚಿನ ಮಹತ್ವ ಹಾಗೂ ಪ್ರಾಧಾನ್ಯತೆ ಇದೆ. ಆಡು ನುಡಿಗಳು ಯಾವುದೇ ನಿರ್ಧಿಷ್ಟ ಭಾಷೆಯ ಪ್ರಬೇಧ ಇಲ್ಲವೆ ಉಪಭಾಷಾ ರೂಪಗಳಾಗಿರಬಹುದು. ಇಂತಹ ಉಪಭಾಷೆ ಅಥವಾ ಪ್ರಭೇದಗಳಿಗೆ ತನ್ನದೆ ಆದ ಲಿಪಿ ಸೌಕರ್ಯವಿದೆ. ಅವು ಸಮಷ್ಟಿಯ ಧ್ವನಿಯಾಗಿರುತ್ತವೆ. ಅವು ಸಾಮಾಜಿಕ, ಭಾಷಿಕೇತರ ವೈಶಿಷ್ಟ್ಯತೆಯನ್ನು ಸಾದರಪಡಿಸುವುದರ ಜೊತೆಗೆ ಭಾಷಿಕ ಸತ್ವ ಹಾಗೂ ಮೌಲ್ಯ ಅರ್ಥವಂತಿಕೆಯನ್ನು ಕಾಯ್ದುಕೊಂಡಿರುತ್ತವೆ. "ಕನ್ನಡ" ದಕ್ಷಿಣ ದ್ರಾವಿಡ ಭಾಷೆಗಳಲ್ಲಿ ಒಂದು ಪ್ರಧಾನ ಭಾಷೆಯಾಗಿದ್ದು ೬.೫ ಕೋಟಿ ಕನ್ನಡಿಗರ ಮಾತೃ ಭಾಷೆ ಹಾಗೂ ಲಿಖಿತ ಸಾಹಿತ್ಯ ಪರಂಪರೆಯನ್ನು ಹೊಂದಿರುವ ಭಾಷೆ. ಕನ್ನಡ ಭಾಷೆಯೂ ಭಾರತದ ಸಂವಿಧಾನ ಮಾನ್ಯ ಮಾಡಿರುವ ೨೨ ಭಾಷೆಗಳಲ್ಲಿ ಒಂದು.

ಭಾರತದಲ್ಲಿನ ಭಾಷೆಗಳಲ್ಲಿ ಪ್ರಾಚೀನತೆ ಮತ್ತು ವಿಮಲ ಸಾಹಿತ್ಯವಿರುವ ಸಂಸ್ಕೃತ ಮೊದಲ ಸ್ಥಾನವನ್ನು, ನಂತರದ ಸ್ಥಾನವನ್ನು ತಮಿಳು ಭಾಷೆಯೂ, ಮೂರನೆಯ ಸ್ಥಾನವನ್ನು ಕನ್ನಡವು ಪಡೆದುಕೊಂಡಿವೆ. ದ್ರಾವಿಡ ಭಾಷಾ ವರ್ಗದಲ್ಲಿ ಪ್ರಾಚೀನತೆಯ ದೃಷ್ಟಿಯಿಂದ ಕನ್ನಡ ಎರಡನೆಯ ಸ್ಥಾನವನ್ನು ಪಡೆದುಕೊಂಡಿದೆ.

ಪ್ರಾಚೀನ ಹಾಗೂ ಆಧುನಿಕ ಅಗಾಧ ಸಾಹಿತ್ಯವನ್ನು ಹೊಂದಿರುವ ಕನ್ನಡ ಭಾಷೆ ತನ್ನದೆ ಆದ ಕೆಲವು ಪ್ರಾದೇಶಿಕ ಹಾಗೂ ಸಾಮಾಜಿಕ ಉಪಭಾಷೆಗಳನ್ನು ಪಡೆದುಕೊಂಡಿದೆ. ಕನ್ನಡ ಭಾಷಾ ಪ್ರದೇಶವನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಅದರಲ್ಲಿ ಅನೇಕ ಬಗೆಯ ಭಾಷಾ ಪ್ರಭೇದಗಳನ್ನು ಕಾಣಬಹುದು. ಹೊರನೋಟಕ್ಕೆ ಅವುಗಳಲ್ಲಿ ಪರಸ್ಪರ ಅರಿವಿನ ಸಾಮ್ಯತೆಯನ್ನು ಕಾಣಬಹುದು. ಆದರೆ ಆಯಾ ಪ್ರಾದೇಶಿಕ, ಸಾಂಸ್ಕೃತಿಕ ಹಿನ್ನೆಲೆಗೆ ತಕ್ಕ ಹಾಗೆ ಭಿನ್ನ ವೈಶಿಷ್ಟ್ಯತೆಯನ್ನು ಪಡೆದುಕೊಂಡಿವೆ. ಮೈಸೂರು ಕನ್ನಡ, ಕರಾವಳಿ ಕನ್ನಡ, ಧಾರವಾಡ ಕನ್ನಡ ಮತ್ತು ಗಲ್ಬರ್ಗ ಕನ್ನಡ ಇವು ಕನ್ನಡದ ಪ್ರಧಾನ ಉಪಭಾಷೆಗಳು. ಪ್ರಾದೇಶಿಕ ಸೊಬಗು ಮತ್ತು ಭಾಷಾ ರಚನೆಯ ವೈಶಿಷ್ಟ್ಯವನ್ನು ಇವುಗಳಿಗೆ ಪರಸ್ಪರ ಹೋಲಿಸಿದಾಗ ಎದ್ದು ಕಾಣುವ ಗುಣಗಳು. ಜೊತೆಗೆ ಸೂಕ್ಷ್ಮವಾಗಿರುವ ಭಿನ್ನತೆಯನ್ನು, ರಚನಾ ವಿನ್ಯಾಸವನ್ನು ಅರಿಯಬಹುದು.

# ಅಧ್ಯಾಯ ಒಂದು

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

### ೧.೧. ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಈಚಿನ ದಿನಗಳಲ್ಲಿ ಒಳನುಡಿಗಳ ಬಗೆಗೆ ನಡೆಯುತ್ತಿರುವ ಚರ್ಚೆ ಹೊಸ ತಿರುವನ್ನು ಪಡೆದಿದೆ. ಒಳನುಡಿಗಳೇ ನುಡಿಯ ನಿಜರೂಪ ಎಂಬಂತೆ ವಿವರಿಸಿಕೊಳ್ಳಲಾಗುತ್ತಿದೆ. ಅದು ಸತ್ಯವೂ ಕೂಡ. ಆದರೆ ಪಠ್ಯ ಪುಸ್ತಕಗಳ ಭಾಷೆಯೇ ನಿಜವಾದ ನುಡಿ ಎಂಬಂತೆ ತಿಳಿಯಲಾಗುತ್ತಿದೆ. ಅದನ್ನು ಹೊರತುಪಡಿಸಿ ಬೇರೆ ನುಡಿ ಮಹತ್ವದ್ದಲ್ಲ ಎಂಬ ತಿಳುವಳಿಕೆಯಿದೆ. ಆದರೆ ಒಳನುಡಿಗೆ ತನ್ನದೇ ಆದ ಮಹತ್ವ ಇದೆ. ಇಲ್ಲವಾದರೆ ಅದಕ್ಕೆ ಯಾವುದೇ ವೈಶಿಷ್ಟ್ಯವಾಗಲಿ, ಮನ್ನಣೆಯಾಗಲಿ ಸಿಗುವುದಿಲ್ಲ ಇದಕ್ಕೆ ಉದಾಹರಣೆ ನಾವು ಮಾತನಾಡುವ ಕನ್ನಡ ನುಡಿಗಳು ಸರಿಯಾಗಿವೆಯೇ? ಇಲ್ಲವೇ? ಎಂಬ ಅನುಮಾನ ನನ್ನಲ್ಲೇ ಹುಟ್ಟಿತು.

ಮಳವಳ್ಳಿ ಪ್ರಾಂತ್ಯದವನಾದ ನನಗೆ, ಈ ಪ್ರದೇಶದ ಜನರು ಮಾತನಾಡುವ ರೀತಿಗೂ, ಬೇರೆ ಪ್ರದೇಶದವರು ಮಾತನಾಡುವ ರೀತಿಗೂ ಹೋಲಿಸಿದಾಗ ವ್ಯತ್ಯಾಸ ಇರುವುದು ಕಂಡುಬಂದಿತು. ಹಾಗೆ ಪಠ್ಯಗಳ ನುಡಿಗೆ ಹೋಲಿಸಿದಾಗ ನನ್ನನ್ನು ಗೊಂದಲಗೊಳಿಸಿದ ಅನೇಕ ಪ್ರಸಂಗಗಳು ಕಾಡುತ್ತಿವೆ. ಅದೆಂದರೆ 'ನಾವು' ಎನ್ನುವುದಕ್ಕೆ 'ನಾಮು' ಎಂದು ಕರೆಯುತ್ತೇವೆ. ಅದೇ ರೀತಿ 'ಯಾಕ್ಜ, ಏನ್ಜ' ಇತ್ಯಾದಿ ಪದಗಳನ್ನು ಬಳಸಿದಾಗ ನನ್ನ ಗೆಳಯರು ನನ್ನನ್ನು ನೋಡೊ ರೀತಿ ಬೇರೆಯ ತರವಾಗಿತ್ತು.

ಯಾಕೆಂದರೆ ನನ್ನ ನುಡಿಯಲ್ಲೇನಾದರೂ ತಪ್ಪಿರಬಹುದೇ? ಎಂದು ನನ್ನನ್ನು ಕಾಡುತ್ತಿತ್ತು. ಅದೇ ಗೆಳೆಯರು ನನ್ನನ್ನು 'ಅಜೋ' ಎಂದು ರೇಗಿಸುತ್ತಿದ್ದುದು ಇವತ್ತಿಗೂ ನನ್ನನ್ನು ಬೇರೆಯಾಗಿಯೇ ಇಟ್ಟಂತಿದೆ ಎನಿಸುತ್ತದೆ. **'ಶ, ಷ, ಹ'** ಈ ಅಕ್ಷರಗಳ ವ್ಯತ್ಯಾಸವನ್ನು ಬಹಳಮುಖ್ಯವಾಗಿ ಗೆಳೆಯರು ನನ್ನ ಮಾತಿನಲ್ಲಿ ಗುರುತಿಸುತ್ತಿದ್ದರು. **ಶ, ಷ** ಕಾರಗಳು–ಸ ಕಾರವಾಗಿಯೂ, **ಹ** ಕಾರವು–ಅ ಕಾರವಾಗಿಯು ಬಳಸುತ್ತಿರುವುದನ್ನು ಕಂಡ ಗೆಳೆಯರು ಈ ಕ್ರಮ ಸರಿಯಲ್ಲದು, ಅದನ್ನು ಸರಿಯಾದ ಕ್ರಮದಲ್ಲಿ ಉಚ್ಚರಿಸಬೇಕೆಂದು ನನ್ನನ್ನು ಎಷ್ಟೆ ತಿದ್ದಿದರೂ ನನ್ನೊಳಗಿನ ಭಾಷೆ ಸರಿಯಾಗದೆ ನನ್ನ ನುಡಿಯಲ್ಲಿ ತಪ್ಪಿದೆ ಎನ್ನುವ ಆತಂಕ ಕಾಡುತ್ತಿತ್ತು. ಆನಂತರ ನನ್ನ ನುಡಿಯಲ್ಲಿನ ವಿಶಿಷ್ಟತೆ ತಿಳಿದದ್ದೆ ಭಾಷೆಯ ಬಗೆಗೆ ಅಧ್ಯಯನ ಮಾಡಲು ತೊಡಗಿದಾಗ.

ಈ ರೀತಿಯ ತೊಡಕು ಅನೇಕ ಜನರನ್ನು ಇವತ್ತಿಗೂ ಕಾಡುತ್ತಿರುವ ಪ್ರಶ್ನೆ. ಪಠ್ಯ ಹೇಳುವ ಕ್ರಮವೇ ಅಂತಿಮ ಎಂದು ತಿಳಿದುಕೊಂಡಿದ್ದ ನನ್ನಂತ ಅದೆಷ್ಟೋ ಜನರು ಇವತ್ತಿಗೂ ಇದ್ದಾರೆ. ಆದರೆ ನಿಜವಾದ ಕ್ರಮ ಭಾಷೆಯಲ್ಲಿನ 'ಒಳನುಡಿಯೆ' ಎಂಬುದನ್ನು ಅರ್ಥಮಾಡಿಕೊಳ್ಳತೊಡಗಿದಾಗ ಹೊಸಬಗೆಯ ಅನುಭವವಾಗತೊಡಗಿತು. ನನ್ನಲ್ಲಿನ ಕೀಳರಿಮೆಯೂ ಇಲ್ಲವಾಗತೊಡಗಿತು. ಪಠ್ಯ ಹೇಳಿಕೊಡುವುದೇ ಅಂತಿಮ ಸತ್ಯ ಎಂದು ಭಾವಿಸಿಕೊಂಡಿರುವವರಿಗೆ ಮಳವಳ್ಳಿ ಒಳನುಡಿಯಲ್ಲಿನ ಭಾಷಾ ಬಳಕೆಯ ಕ್ರಮದ ವಿಶೇಷತೆ ಕಾಣದೇ ಹೋಗುವುದು. ಇಂತಹ ವಿಶಿಷ್ಟವಾದ ಒಳನುಡಿ ಕನ್ನಡ ನುಡಿಯ ಒಳಗೆ ಜಾಗಪಡೆಯಬೇಕಿರುವ ಅಗತ್ಯವಿದೆ. ಅದರ ಬಗೆಗೆ ಇರುವ ತಪ್ಪು ನಿರ್ಧಾರಗಳೂ ಕಡಿಮೆಯಾಗಬೇಕಿದೆ. ಇಲ್ಲವಾದರೆ ಈ ರೀತಿಯ ತಪ್ಪು ನಿರ್ಧಾರಗಳು ಭಾಷಾ ಬಳಕೆಯ ಕ್ರಮದ ಮೇಲೆ ಅಂದರೆ ಅಂತಹ ಒಳನುಡಿಯನ್ನು ಬಳಸುವವರ ಮನಸ್ಸಿನ ಮೇಲೆ ಕೆಟ್ಟ ಪರಿಣಾಮ ಬೀರುವ ಅಪಾಯವೇ ಹೆಚ್ಚು.

ಆದ್ದರಿಂದ ಪಠ್ಯಗಳಲ್ಲಿನ ಭಾಷೆ ಮತ್ತು ವ್ಯಾಕರಣವೇ ಅಂತಿಮವಲ್ಲ ಎಂಬ ಗ್ರಹಿಕೆಯ ಹಿನ್ನಲೆಯಲ್ಲಿ ಒಳನುಡಿಯ ಮಹತ್ವದ ಬಗೆಗೆ ತಿಳಿಯಪಡಿಸುವುದೆ ಈ ಅಧ್ಯಯನದ ಉದ್ದೇಶವಾಗಿದೆ. ಅದೇ ರೀತಿ ಪಠ್ಯ ಪುಸ್ತಕಗಳಲ್ಲಿನ ನುಡಿಗಿಂತಲೂ ಮಳವಳ್ಳಿ ನುಡಿಯೂ ಹೇಗೆ ಭಿನ್ನ ನೆಲೆಯಲ್ಲಿ ನಿಲ್ಲುತ್ತದೆ ಎಂಬುದನ್ನು ತೋರಿಸಿಕೊಡುವ ಅಗತ್ಯವಿದೆ. ಮಳವಳ್ಳಿ ಪರಿಸರದ ನುಡಿ, ರಚನೆ ಮತ್ತು ಭಾಷಾ ಬಳಕೆಯಲ್ಲಿ ಮಳವಳ್ಳಿ ಜನಭಾಷೆಯ ಮಹತ್ವವನ್ನು ತಿಳಿಯಪಡಿಸುವ ಒಂದು ಪ್ರಯತ್ನವಾಗಿದೆ.

ಮಳವಳ್ಳಿ ಕನ್ನಡದ ಭಾಷಿಕ ರಚನೆಯನ್ನು ವೈಜ್ಞಾನಿಕ ವಿಧಿವಿಧಾನಗಳ ಮೂಲಕ ವಿಶ್ಲೇಷಿಸಿ ವಿವರಿಸುವುದೇ ಪ್ರಸ್ತುತ ಅಧ್ಯಯನದ ಉದ್ದೇಶ. ಇಲ್ಲಿ ಮಳವಳ್ಳಿ ಕನ್ನಡದ ಧ್ವನ್ಯಾತ್ಮಕ ಹಾಗೂ ಆಕೃತಿಮಾ ರಚನೆಗಳನ್ನು ವಿಶ್ಲೇಷಿಸಿ ಸಾದರಪಡಿಸಿದೆ. ವಿವರಣಾತ್ಮಕ ತತ್ವಗಳ ಅನ್ವಯ ಅದರ ರಚನಾ ಭಿನ್ನತೆಯನ್ನು ಅಧ್ಯಯನ ಮಾಡುವುದರಿಂದ ಭಾಷೆಯ ಒಟ್ಟು ವ್ಯವಸ್ಥೆ ಹಾಗೂ ರಚನೆಯನ್ನು ವಿಷದವಾಗಿ ವಿವರಿಸಿದಂತಾಗುತ್ತದೆ. ಆ ದೃಷ್ಟಿಯಲ್ಲಿ ಕನ್ನಡ ಭಾಷೆಯ ಸಮಗ್ರ ರಚನಾ ವಿನ್ಯಾಸವನ್ನು ವಿವರಿಸಲು ಮಳವಳ್ಳಿ ಕನ್ನಡ ನುಡಿ ರಚನೆಯ ಅಧ್ಯಯನ ಒಂದು ಸಾಕ್ಷಿ.

ದಿನನಿತ್ಯ ನಡೆಯುವ ಆಂತರಿಕ ಮತ್ತು ಬಾಹ್ಯ ವ್ಯತ್ಯಯದಿಂದಾಗಿ ಭಾಷೆ ನಿತ್ಯ ಪರಿವರ್ತನಾಶೀಲ ಎನಿಸಿದೆ. ಇದು ಭಾಷೆಯ ಜೀವಂತ ಲಕ್ಷಣ. ಆಯಾ ಪ್ರದೇಶ ಅಥವಾ

ಪರಿಸರಕ್ಕೆ ತಕ್ಕಂತೆ ಭಾಷೆ ತನ್ನ ಸಹಜ ರೂಪವನ್ನು ಪಡೆಯುವುದು. ಎಲ್ಲರಿಗೂ, ಎಲ್ಲಾ ಪರಿಸರಕ್ಕೂ ಒಂದೇ ಭಾಷೆ ಇರುವುದಿಲ್ಲ. ನಿರಂತರ ಬದಲಾಗುವುದೇ ಭಾಷೆಯ ಪ್ರಮುಖ ಲಕ್ಷಣ.

ಅಧ್ಯಯನದ ಶೀರ್ಷಿಕೆಯೇ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿಯನ್ನು ತಿಳಿಸುತ್ತದೆ. ಪ್ರಸ್ತುತ ಅಧ್ಯಯನಕ್ಕೆ ಮಳವಳ್ಳಿ ತಾಲೋಕಿನ ಜನರಾಡುವ ಕನ್ನಡವನ್ನು ಆರಿಸಿಕೊಳ್ಳಲಾಗಿದೆ. ಸುಮಾರು ೧೮೬ ಹಳ್ಳಿಗಳನ್ನು ಹೊಂದಿರುವ ಮಳವಳ್ಳಿ ತಾಲೋಕಿನ ಕನ್ನಡ ಭಾಷೆಯ ವೈಶಿಷ್ಟ್ಯತೆಯನ್ನು ವಿಶ್ಲೇಷಣಾ ನಿದರ್ಶನಗಳೊಂದಿಗೆ ನಿರೂಪಿಸುವುದೆ ಈ ಅಧ್ಯಯನದ ಉದ್ದೇಶ.

ಮಳವಳ್ಳಿ ತಾಲೋಕಿನಲ್ಲಿ ೧೮೬ ಹಳ್ಳಿಗಳು ಇದ್ದು, ಈ ಎಲ್ಲಾ ಹಳ್ಳಿಗಳನ್ನು ಅಧ್ಯಯನದ ಕ್ಷೇತ್ರ ಕಾರ್ಯಕ್ಕೆ ಆಯ್ಕೆ ಮಾಡಿಕೊಂಡಿಲ್ಲ. ಅಧ್ಯಯನದ ವ್ಯಾಪ್ತಿಯನ್ನು ಆಯ್ದ ೩೦ ಹಳ್ಳಿಗಳನ್ನು ಆಯ್ಕೆಮಾಡಿಕೊಂಡು ಆ ಊರುಗಳ ವಿವಿಧ ಜಾತಿಯ, ವೃತ್ತಿಯ, ಲಿಂಗದ, ವಯಸ್ಸಿನ ಜನರನ್ನು ಸಂದರ್ಶನ ಮಾಡುವ ಮೂಲಕ ದತ್ತಾಂಶವನ್ನು ಸಂಗ್ರಹಿಸಲಾಗಿದೆ. ಸಂಗ್ರಹಿಸಿದ ದತ್ತಾಂಶಗಳನ್ನು ಭಾಷಿಕ ವಿವರಣೆಗಳೊಂದಿಗೆ ವಿವರಿಸಲಾಗಿದೆ. ಕೇವಲ ೩೦ ಹಳ್ಳಿಗಳನ್ನು ಸಂಶೋಧನ ಅಧ್ಯಯನಕ್ಕೆ ಆಯ್ಕೆಮಾಡಿ ಉಳಿದ ಹಳ್ಳಿಗಳನ್ನು ಬಿಟ್ಟಿರುವುದು ಈ ಅಧ್ಯಯನದ ಮಿತಿಯೂ ಕೂಡ.

## ೧.೨. ಪ್ರಾದೇಶಿಕ ಮತ್ತು ಸಾಮಾಜಿಕ ಭಾಷಾ ಅಧ್ಯಯನದ ಮಹತ್ವ

ಕನ್ನಡ ಭಾಷೆಯ ರಚನೆ ಮತ್ತು ಬೆಳವಣಿಗೆಯನ್ನು ಕುರಿತು ಸಾಕಷ್ಟು ಮೌಲಿಕ ಭಾಷಾ ವೈಜ್ಞಾನಿಕ ಅಧ್ಯಯನಗಳು ನಡೆದಿರುವುದು ಸರಿ ಅಷ್ಟೆ ಮೊದ ಮೊದಲು ಸಾಂಪ್ರದಾಯಕ ವ್ಯಾಕರಣಗಳು ಕನ್ನಡದ ರಚನೆಯನ್ನಷ್ಟೆ ಸವಿಸ್ತಾರವಾಗಿ ಚರ್ಚಿಸಿ ನಿರೂಪಿಸಿದ ಅಧ್ಯಯನಗಳಾದರೆ, ಇತ್ತೀಚಿನ ಭಾಷಾ ವಿಜ್ಞಾನದ ನೆಲೆಯಲ್ಲಿ ಭಾಷೆಯ ರಚನೆ, ಬೆಳವಣಿಗೆ ಮತ್ತು ಬಳಕೆಯನ್ನು ಕುರಿತಂತೆ ಪ್ರಕಟವಾಗಿರುವ ವೈಜ್ಞಾನಿಕ ವಿಶ್ಲೇಷಣಾತ್ಮಕ ವ್ಯಾಕರಣಗಳು ಗಮನಾರ್ಹವಾದುವುಗಳು. ವ್ಯಾಕರಣಗಳು ಭಾಷೆಯನ್ನು ಸಾಂಪ್ರದಾಯಕ ದೃಷ್ಟಿಯಿಂದ ಒಂದು ಕಾಲಾವಧಿಯಲ್ಲಿ ದೊರೆಯುವ ಗ್ರಾಂಥಿಕ ಭಾಷಾ ರೂಪದ ವಿವರವನ್ನು ಒದಗಿಸಿವೆ. ಸಾಹಿತ್ಯಿಕವಲ್ಲದ ಆಡು ಮಾತಿನ ಸಾಂಸ್ಕೃತಿಕ, ಪ್ರಾದೇಶಿಕ, ಜನಾಂಗ, ಕುಲಕಸುಬು, ವೈಯಕ್ತಿಕ ಹಿನ್ನೆಲೆಯಲ್ಲಿ ಭಾಷೆಯ ಕುಸುರಿ ಕೆಲಸವೇ ಆಧುನಿಕ ಭಾಷಾ ಅಧ್ಯಯನ. ಇಲ್ಲಿ ಕನ್ನಡ ಭಾಷೆಯ ವೈಜ್ಞಾನಿಕ ಅಧ್ಯಯನದ ಸ್ಥೂಲ ವಿವರವನ್ನು ನಿರೂಪಿಸಲು ಯತ್ನಿಸಿದೆ.

ಭಾಷೆಯ ಒಳ ರಚನೆಗೆ ಸಂಬಂಧಿಸಿದ ಮುಖ್ಯಾಂಶಗಳನ್ನು ಹೊಸ ಹೊಸ ತಂತ್ರ ಹಾಗೂ ಸಿದ್ಧಾಂತಗಳ ಮೂಲಕ ವಿಶ್ಲೇಷಿಸಿ ವಿವರಿಸಿದ ನಿದರ್ಶನಗಳು ಹಲವಿವೆ. ಶಾಸನ ಮತ್ತು ಗ್ರಂಥಸ್ಥ ಭಾಷೆಯ ಅಧ್ಯಯನದಲ್ಲಿ ೧೯೪೧ ರಲ್ಲಿ ಮೈಸೂರು ವಿಶ್ವವಿದ್ಯಾಲಯ ಪ್ರಕಟಿಸಿದ ಎ.ಎನ್.ನರಸಿಂಹಯ್ಯ ಅವರ A Grammar of the oldest Kanarise Inscriptions ಪಿಎಚ್.ಡಿ ಪ್ರಬಂಧ, ೧೯೪೯ ರಲ್ಲಿ ಡೆಕನ್ ಕಾಲೇಜು, ಪೂನ ಪ್ರಕಟಿಸಿದ ಜಿ.ಎಸ್.ಗಾಯ್ ಅವರ Historical Grammar of old Kannada, ೧೯೭೨ ರಲ್ಲಿ ಅಣ್ಣಾಮಲೈ ವಿಶ್ವವಿದ್ಯಾಲಯ ಹೊರತಂದ ಕೆ.ಕುಶಾಲಪ್ಪಗೌಡ ಅವರ A Grammar of Kannada ಮುಖ್ಯವಾದವು. ಹಾಗೆಯೇ ಬಿ. ರಾಮಚಂದ್ರರಾವ್ ಅವರ ಪಂಪಭಾರತ ವಿವರಣಾತ್ಮಕ ವ್ಯಾಕರಣ, ಸಿ.ಓಂಕಾರಪ್ಪ ಅವರ ಕುಮಾರವ್ಯಾಸ ಭಾರತದ ವರ್ಣನಾತ್ಮಕ ವ್ಯಾಕರಣ, ಬಿ.ಬಿ.ರಾಜಪುರೋಹಿತ ಅವರ ವಚನಗಳ ವ್ಯಾಕರಣ ಇತ್ಯಾದಿ ಗ್ರಾಂಥಿಕ ಭಾಷಾವಿಶ್ಲೇಷಣೆಗೆ ಸಾಕ್ಷಿ. ಸಾಂಪ್ರದಾಯಿಕ ಜಾಡಿನಲ್ಲೇ ಅಧ್ಯಯನಗಳು ಮುಂದುವರಿದರೂ ಪಾಶ್ಚಾತ್ಯ ದೇಶಗಳ ಭಾಷಾವಿಜ್ಞಾನದ ವ್ಯಾಸಂಗದ ಹೊಸ ಅಧ್ಯಯನ ಮಾರ್ಗವನ್ನು ಹಿಡಿದಿವೆ.

ಆಧುನಿಕ ಭಾಷಾವಿಜ್ಞಾನದ ಅಧ್ಯಯನದ ವ್ಯಾಪ್ತಿ, ಗಣನೀಯ ಜನಪ್ರೀಯತೆಯನ್ನು ಪಡೆದು ಶಿಷ್ಟಭಾಷೆಯಂತೆಯೇ ಆಡುಮಾತಿಗೂ ಮೌಲ್ಯತೆ ಇದೆ ಎಂಬುದನ್ನು ವಿಶ್ಲೇಷಣೆಗಳು ದೃಢಪಡಿಸಿವೆ. ಆ ಹಿನ್ನೆಲೆಯಲ್ಲಿ ಆರ್.ಸಿ.ಹೀರೆಮಠ ಅವರ The Structure of Kannada, William Bright ಅವರ An outline of Colloquial Kannada, ಎಂ.ಎಸ್.ಆಂಡ್ರನೋವ್ ಅವರ Kannada Language, ಮ್ಯಾಕ್ರೊಮ್ಯಾಕ್ ಅವರ Kannada- A Cultural Introducation To The Spoken Styles of The Language, ಹಾ.ಮಾ.ನಾಯಕ ಅವರ Kannada-Literary And Colloquial ವಿಶ್ಲೇಷಣೆಗಳು ಕನ್ನಡ ಭಾಷೆಯ ಆಡುಮಾತಿನ ಅಧ್ಯಯನಗಳಾಗಿವೆ. ಪ್ರಾದೇಶಿಕ ಇಲ್ಲವೇ ಸಾಂಸ್ಕೃತಿಕ ಭಿನ್ನತೆಯನ್ನು ಭಾಷೆಯ ಮೂಲಕ ವಿವೇಚಿಸುವ ದೃಷ್ಟಿಯಿಂದ ಪ್ರಾರಂಭಗೊಂಡಿದ್ದೇ ಪ್ರಾದೇಶಿಕ ಅಧ್ಯಯನಗಳು. ಭಾಷೆಯು ವಿವಿಧ ಪ್ರದೇಶಗಳ ಸಂಪರ್ಕ ಹೊಂದಿದಂತೆ ಅದರಲ್ಲಿ ಭಿನ್ನತೆಯನ್ನು ಕಾಣಲು ಸಾಧ್ಯ ಎಂಬುದನ್ನು ಭಾಷಿಕರೆಲ್ಲರೂ ಗಮನಿಸಬಹುದಾದ ವ್ಯತ್ಯಾಸಗಳು, ಹಲವು ಕಾರಣಗಳಿಂದಾಗಿ ಭಾಷೆಯಲ್ಲಿ ಭಿನ್ನತೆ ಕಂಡುಬರುವುದು. ವ್ಯಕ್ತಿಯಿಂದ ವ್ಯಕ್ತಿಗೆ, ವೃತ್ತಿಯಿಂದ ವೃತ್ತಿಗೆ, ಪ್ರದೇಶದಿಂದ ಪ್ರದೇಶಕ್ಕೆ ಅಥವಾ ಜಾತಿಯಿಂದ ಜಾತಿಗೆ ನಿಮಿತ್ತದಿಂದಾಗಿ ಸನ್ನಿವೇಶ, ರಚನೆ, ಅರ್ಥ ಭಿನ್ನವಾಗುವುದು. ಇಂತಹ ಸೂಕ್ಷ್ಮ ಭೇದಗಳನ್ನು ಕುರಿತು ನಡೆಯುತ್ತಿರುವ ಅಧ್ಯಯನಗಳೇ ಪ್ರಾದೇಶಿಕ ಮತ್ತು ಸಾಮಾಜಿಕ ಭಾಷಾ ಅಧ್ಯಯನಗಳು.

ಕರ್ನಾಟಕದ ಪ್ರಮುಖ ಭಾಷೆಗಳನ್ನು ಕುರಿತು ಸಾಕಷ್ಟು ಅಧ್ಯಯನಗಳು ಈಗಾಗಲೇ ನಡೆದಿವೆ. ಪ್ರಾದೇಶಿಕ ಭಾಷೆಯನ್ನು ಕುರಿತು ಪೂನಾದ ಡೆಕ್ಕನ್ ಕಾಲೇಜು ಗಮನಾರ್ಹ ಯೋಜನಾ ವರದಿಗಳನ್ನು ಪ್ರಕಟಿಸಿದೆ. ವ್ಯವಹಾರಿಕ ಭಾಷೆಯ ವಿವರಣಾತ್ಮಕ ವಿವರಣೆಯನ್ನು ಸಾದರಪಡಿಸುವ ಉದ್ದೇಶದಿಂದ ಪ್ರಕಟಿಸಿದವುಗಳು. ಎ. ರಮಣ ಆಚಾರ್ಯ ಅವರ ಹಾಲಕ್ಕಿ ಕನ್ನಡ (೧೯೬೭), ಬಾರ್ಕೂರ್ ಕನ್ನಡ(೧೯೭೧), ಯು.ಪಿ.ಉಪಾಧ್ಯಾಯ ಅವರ ನಂಜನಗೂಡು ಕನ್ನಡ (೧೯೬೮), ಕೂರ್ಗ್ ಕನ್ನಡ (ಜೇನು ಕುರುಬರ ಉಪಭಾಷೆ ೧೯೭೧) ಮತ್ತು ಆರ್. ಮಹದೇವನ್ ಅವರ ಗುಲ್ಬರ್ಗ ಕನ್ನಡ (೧೯೬೮) ಪ್ರಾದೇಶಿಕ ಉಪಭಾಷಾ ಅಧ್ಯಯನಗಳು. ಅಂತೆಯೇ ಕರ್ನಾಟಕದ ವಿವಿಧ ವಿಶ್ವವಿದ್ಯಾಲಯಗಳಲ್ಲಿ ಪ್ರಾದೇಶಿಕ ಭಾಷೆಗಳನ್ನು ಕುರಿತು ಅಧ್ಯಯನಗಳು ಬಹು ವ್ಯಾಪಕವಾಗಿ ನಡೆದಿದ್ದು ಇನ್ನೂ ನಡೆಯುತ್ತಿವೆ. ಆ ನಿಟ್ಟಿನಲ್ಲಿ ಎ.ಮುರುಗಪ್ಪ ಅವರ Linguistic Analysis of Colloquial Kananda in Beedar District (೧೯೭೮), ಎಮ್.ಆರ್.ರಂಗನಾಥ್ ಅವರ Mysore and Dharvad Kannada-A Comparative Linguistics Study (೧೯೬೪), ಎಲ್.ಮಂಜುಳಾಕ್ಷಿ ಅವರ Mysore District Kannada Dialects: A Comparative Study (೧೯೯೬), ಯು.ಪಿ.ಉಪಾಧ್ಯಾಯ ಅವರ A Comparative Study of Kannada Dialects (೧೯೭೬) ಮುಖ್ಯವಾದವು. ಇದನ್ನು ಗಮನಿಸಿದರೆ ಒಂದು ನಿರ್ದಿಷ್ಟ ಪ್ರದೇಶದಲ್ಲಿರುವವರ ಭಾಷಾಮೊತ್ತ ಆ ನಿರ್ದಿಷ್ಟ ನೆಲೆಯ ಸತ್ವವನ್ನು ಉಳಿಸಿಕೊಂಡಿರುತ್ತದೆ ಎನ್ನುವುದರಲ್ಲಿ ಸಂದೇಹವಿಲ್ಲ.

### ೧.೩. ಪ್ರಸ್ತುತ ಭಾಷಾವೈಜ್ಞಾನಿಕ ಅಧ್ಯಯನ

ಇಲ್ಲಿ ಮುಖ್ಯವಾಗಿ ಮಳವಳ್ಳಿ ಕನ್ನಡದ ಪ್ರಾದೇಶಿಕ ಮತ್ತು ಸಾಮಾಜಿಕ ಭಾಷಾ ಅಧ್ಯಯನದ ಬಗ್ಗೆ ವಿವರಿಸಲಾಗುತ್ತದೆ. ಧ್ವನಿಗಳ ಉಚ್ಚಾರ ಹಂತದಲ್ಲೂ ಮತ್ತು ಅವುಗಳ ರಚನಾವಿನ್ಯಾಸವನ್ನು ಆಕೃತಿಮಾತ್ಮಕ ಹಂತದಲ್ಲೂ ಪರಿಗಣಿಸಿದೆ. ಪ್ರಸ್ತುತ ಭಾಷಾವೈಜ್ಞಾನಿಕ ಅಧ್ಯಯನದ ರೂಪುರೇಷೆ ಇಂತಿದೆ. ಉಚ್ಚಾರಣ ಹಂತ, ಬರಹ ಕನ್ನಡ ಮತ್ತು ಮಳವಳ್ಳಿ ಕನ್ನಡ, ಹಳೆಗನ್ನಡ ಮತ್ತು ಮಳವಳ್ಳಿ ಕನ್ನಡ ಹಾಗೂ ವಿವಿಧ ಜಾತಿಯ, ಕುಲಕಸುಬುಗಳು, ಗಾದೆ, ಸ್ಥಳನಾಮ, ಬಯ್ಗಳ ಇವುಗಳಲ್ಲಿ ಮಳವಳ್ಳಿ ಕನ್ನಡ ಹೇಗೆ ತನ್ನ ಭಾಷಿಕ ರಚನೆಯನ್ನು ಉಳಿಸಿಕೊಂಡಿದೆ ಅಥವಾ ಬದಲಾಯಿಸಿಕೊಂಡಿದೆ ಎಂಬುದನ್ನು ವಿವರಿಸಲಾಗಿದೆ.

ಕ್ರಿಯಾಪದ ರಚನೆ, ಭಾಷಾರಚನೆಯಲ್ಲಿ ಪ್ರಧಾನ ಅಂಗ. ಮಳವಳ್ಳಿ ಕನ್ನಡದ ಕ್ರಿಯಾಪದ ರಚನೆಗಳನ್ನು ಎರಡು ನೆಲೆಗಳಲ್ಲಿ ಪ್ರತ್ಯೇಕಿಸಿದೆ. ಒಂದು ಧಾತು-ನಿರ್ಣಯ ವರ್ಗೀಕರಣ ಹಾಗೂ ವಿವರಣೆ, ಎರಡು ಕ್ರಿಯಾ ಪ್ರತ್ಯಯಗಳು ವಿವರಣೆ ಹಾಗೂ ಪ್ರಸಾರ ಎಂಬುವುದಾಗಿ ವಿಂಗಡಿಸಿಕೊಂಡು ಇವುಗಳಲ್ಲಿ ಮಳವಳ್ಳಿ ಕನ್ನಡ ಹೇಗೆ ಕ್ರಿಯೆ ಮತ್ತು ಧಾತು ರೂಪಗಳು ಹೇಗೆ ಬಳಕೆಗೊಳ್ಳುತ್ತವೆ ಎಂಬ ಅಂಶಗಳನ್ನು ವಿವರಿಸಲಾಗಿದೆ.

ಧಾತುವಿನ ರಚನೆ, ವಾಕ್ಯದಲ್ಲಿನ ಅರ್ಥ ಮತ್ತು ಆಕೃತಿಮಾತ್ಮಕ ಕ್ರಿಯಾರಚನೆಯನ್ನು ಗಮನಿಸಿ ವಿವರಿಸಲಾಗಿದೆ. ಅಂತೆಯೇ ಕ್ರಿಯಾ ಪ್ರತ್ಯಯಗಳಲ್ಲಿ ಕಾಲಸೂಚಕ, ನಾಮಪ್ರತ್ಯಗಳು, ವಿಶೇಷಣ ರೂಪ, ಪುರುಷಾರ್ಥ ಪ್ರತ್ಯಯಗಳನ್ನು ರಚನಾಪೂರ್ಣ ಪ್ರತ್ಯಯಗಳೆಂದು ಪರಿಗಣಿಸಿ ವಿಶ್ಲೇಷಿಸಿದೆ. ಕ್ರಿಯಾ ಪದ ರಚನೆಯ ಮಹತ್ವವನ್ನು ಭಾಷಿಕ ವಿವಿಧ ರಚನೆಗಳ ಮೂಲಕ ದೃಢೀಕರಿಸಿದೆ. ಅಲ್ಲದೆ ಅಪೂರ್ಣ ಕ್ರಿಯಾಪದ ರಚನೆಯ ಬಹುರೂಪಗಳನ್ನು ವಿವರಿಸಿದೆ.

ವಿವರಣಾತ್ಮಕ ಭಾಷಾವೈಜ್ಞಾನಿಕ ಸೂತ್ರಾನ್ವಯ ಮಳವಳ್ಳಿ ಕನ್ನಡದ ಭಾಷಿಕರಚನೆಯನ್ನು ವಿಶ್ಲೇಷಿಸಿರುವುದಲ್ಲದೇ, ಪ್ರಾದೇಶಿಕ ಭಾಷಾ ಮೌಲಿಕಾಂಶಗಳನ್ನು ವಿಶ್ಲೇಷಿಸಿರುವುದು ಮಹಾಪ್ರಬಂಧದ ಪ್ರಮುಖ ಫಲಿತಗಳು ಹಾಗೂ ಅನುಬಂಧ ಭಾಷಿಕ ವಿಶ್ಲೇಷಣೆಯಿಂದ ಕಂಡುಬಂದ ಮಳವಳ್ಳಿ ಕನ್ನಡದ ಪ್ರಮುಖ ಭಾಷಾಂಶಗಳನ್ನು ನಿರೂಪಿಸಿ ಅದರ ಸ್ಥಾನ ಹಾಗೂ ರಚನಾ ವಿಶ್ಲೇಷಣೆಯನ್ನು ಆಧರಿಸಿ ಅದನ್ನು ಕನ್ನಡದ ಒಂದು ಪ್ರಮುಖ ಪ್ರಾದೇಶಿಕ ಉಪಭಾಷೆ ಎಂಬುದನ್ನು ವಿವರಿಸಲಾಗಿದೆ.

ಮಳವಳ್ಳಿ ತಾಲೋಕಿನ ಪ್ರಾಂತ್ಯಕ್ಕೆ ಸೀಮಿತವೆನಿಸುವ ಭಾಷಿಕಾಂಶಗಳನ್ನು ಶಿಷ್ಟಕನ್ನಡದೊಂದಿಗೆ ಹೋಲಿಸಿ ನಿಖರವಾದ ಮಾಹಿತಿಗಳನ್ನು ಅನುಬಂಧದ ವಿಶಿಷ್ಟ ಪದಗಳಲ್ಲಿ ಧ್ವನಿಮಾ ಕ್ರಮಾನುಸಾರ ಪಟ್ಟಿಮಾಡಿದೆ. ಕೇವಲ ಪ್ರಾದೇಶಿಕತೆಯಲ್ಲದೆ ಸಾಂಸ್ಕೃತಿಕ, ಜನಪದೀಯ, ಸಾಮಾಜಿಕ ಮಹತ್ವಾಂಶಗಳನ್ನು ವಿವರಿಸುವಲ್ಲಿ ಅದು ಸಹಾಯಕವಾಗಿದೆ. ಅನುಬಂಧದ ಪಾರಿಭಾಷಿಕ ಪದಕೋಶ ಅಧ್ಯಯನಕ್ಕೆ ಬಳಸಿಕೊಂಡ ಮಳವಳ್ಳಿ ಕನ್ನಡದ ಆಯ್ದ ಪದಗಳ ಪಟ್ಟಿ, ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಅಧ್ಯಯನಕ್ಕೆಂದು ಸಂಗ್ರಹಿಸಿ ಬಳಸಿಕೊಂಡ ಪದಗಳಿವೆ. ಈ ಪದ ಪಟ್ಟಿಗಳನ್ನು ಮಳವಳ್ಳಿ ಪ್ರದೇಶದ ಹೊಲೆಯರು, ಮಾದಿಗರು, ಬೆಸ್ತರು ಈ ಮೂರು ಜನಾಂಗಗಳಿಗೆ ಹೋಲಿಸಿ ಭಿನ್ನತೆಯನ್ನು ಗುರುತಿಸಲಾಗಿದೆ. ಅವುಗಳ ಉಪಯುಕ್ತ ವ್ಯಾಕರಣ ವರ್ಗಗಳನ್ನೂ, ಅರ್ಥವನ್ನೂ ಕೊಟ್ಟಿದೆ. ಇದು ಉಪಭಾಷೆಯ ಭಿನ್ನತೆಯನ್ನು ತಿಳಿಯಲು ಅನುವಾಗುವುದು.

ಅಂತರಾಷ್ಟ್ರೀಯ ಧ್ವನಿಮಾ ಮಾಲೆಯನ್ವಯ ಭಾಷಿಕ ದತ್ತವನ್ನು ಸಂಗ್ರಹಿಸಿಕೊಂಡಿದೆ. ಉಚ್ಚರಿತ ಧ್ವನಿಗಳನ್ನು ಉಚ್ಚರಿಸಿದ ಹಾಗೆ ಬರೆದಿಡುವ ವಿಧಾನವೇ ಧ್ವನ್ಯಾತ್ಮಕ ಪ್ರತಿಲೇಖ. ಭಾಷೆಯ ಉಚ್ಚರಿತ ಧ್ವನಿಗಳಿಗೆ ಕೆಲವು ಸಂಕೇತಗಳನ್ನು ನೀಡಿ ಅವುಗಳ ಸಹಾಯದಿಂದ ಧ್ವನ್ಯಾತ್ಮಕ ಪ್ರತಿಲೇಖವನ್ನು ರೂಪಿಸಿದೆ. ಧ್ವನಿಗಳನ್ನು ಆಧರಿಸಿ ಭಾಷಿಕದತ್ತಗಳನ್ನು ಸಂಗ್ರಹಿಸಿ ವಿಶ್ಲೇಷಣೆಗೆ ಬಳಸಿಕೊಂಡಿದೆ. ಅಂತರಾಷ್ಟ್ರೀಯ ಧ್ವನಿಕೋಷ್ಟಕದಲ್ಲಿನ ಧ್ವನಿಸಂಕೇತಗಳನ್ನೇ ಬಳಸಿ ಮಳವಳ್ಳಿ ಕನ್ನಡದ ಭಾಷಿಕ ದತ್ತವನ್ನು, ಅದರ ಅರ್ಥವನ್ನು ಕನ್ನಡದಲ್ಲಿ ನೀಡಿದೆ. ಈ ಅಧ್ಯಯನ ಕ್ರಮದಲ್ಲಿ ಕೆಲವು ಧ್ವನಿಗಳಿಗೆ ಕನ್ನಡವಲ್ಲಿ ಸೂಕ್ತ ಸಂಕೇತವನ್ನು ಸೂಚಿಸಲು ಸಾಧ್ಯವಿಲ್ಲದ್ದರಿಂದ, ಭಾಷಾವೈಜ್ಞಾನಿಕ ಧ್ವನ್ಯಾತ್ಮಕ ಸಹಜತೆಯನ್ನು ಕಾಯ್ದಂತಾಗಿದೆ.

ಪ್ರಸ್ತುತ ಅಧ್ಯಯನದ ವಿಶ್ಲೇಷಣೆಗೆ ಭಾಷಿಕ ದತ್ತಾಂಶವನ್ನು ಪ್ರತ್ಯಕ್ಷ ಮತ್ತು ವೀಕ್ಷಣ ವಿಧಾನದಿಂದ ಸಂಗ್ರಹಕಾರ್ಯ ನಡೆಸಿದೆ. ಪ್ರತ್ಯಕ್ಷವಾಗಿ ಸಂಭಾಷಿಸುವುದರ ಮೂಲಕ ಅಗತ್ಯ ದತ್ತವನ್ನು ಸಂಗ್ರಹಿಸಿದರೆ, ನಿರ್ದಿಷ್ಟ ಸನ್ನಿವೇಶದಲ್ಲಿ ಆಲಿಸುವಿಕೆಯಿಂದಲೇ ದತ್ತಾಂಶದ ಆಯ್ಕೆಯನ್ನು ಮಾಡಿಕೊಂಡಿದೆ. ಪ್ರತ್ಯಕ್ಷ ಮಾತುಕತೆಯಿಂದ ನೇರವಾಗಿ ದತ್ತಾಂಶದ ಸಂಗ್ರಹವಾದರೆ, ವೀಕ್ಷಿಸಿದಾಗ ದತ್ತ ಸಂಗ್ರಹ ಅಪ್ರತ್ಯಕ್ಷವಾಗಿರುವುದು. ಮಳವಳ್ಳಿ ತಾಲೋಕಿನ ಸುಮಾರು ಮೂವತ್ತು ಕ್ಷೇತ್ರ ಕೇಂದ್ರಗಳನ್ನು ನಿರ್ಧರಿಸಿ, ಭಿನ್ನ ಭೌಗೋಳಿಕ ಎಲ್ಲೆಗಳನ್ನು ಆಧರಿಸಿ ಗುರ್ತಿಸಿಕೊಂಡಿದೆ. ಸಾಮಾಜಿಕ, ವೃತ್ತಿ ಆಧರಿತ, ಸಾಂಸ್ಕೃತಿಕ, ಪ್ರಾದೇಶಿಕ ಹಿನ್ನೆಲೆಗಳನ್ನು ಪ್ರಧಾನವಾಗಿಸಿದೆ. ಹಾಗೆಯೇ ವಿದ್ಯಾವಂತ, ಅವಿದ್ಯಾವಂತ, ಪುರುಷ, ಸ್ತ್ರೀ ಹಾಗೂ ವಯಸ್ಸಿನ ಭೇದವನ್ನು ಮಾಡದೆ ಮಳವಳ್ಳಿ ತಾಲೋಕಿನಲ್ಲಿ ದೊರೆತಿರುವ ಭಾಷಿಕ ದತ್ತವನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ಸಾಮಾನ್ಯವಾಗಿ ಯಾವುದೇ ಒಂದು ಭಾಷಿಕ ಕ್ಷೇತ್ರ ಸಂಪೂರ್ಣವಾಗಿ ಮುಕ್ತವಾಗಿರುವುದಿಲ್ಲ. ಆ ಕ್ಷೇತ್ರದ ನೆರೆಹೊರೆಯ ಭಾಷಾ ಸಂಬಂಧ, ಪ್ರಭಾವ, ಕೊಡುಕೊಳುವಿಕೆ ಇದ್ದೇ ಇರುತ್ತದೆ. ಅಂತಹ ಸನ್ನಿವೇಶದಲ್ಲಿ ಆ ನೆಲೆಯ ದೇಶಿ ನುಡಿಯ ಪ್ರಭಾವ ಹೆಚ್ಚಿದ್ದು ಅನ್ಯ ಭಾಷೆಯ ಪ್ರಭಾವವನ್ನು ದೂರಹಿಡದೆ ಅಲ್ಪಸ್ವಲ್ಪ ಬದಲಾವಣೆಗಳೊಂದಿಗೆ ಪ್ರಾದೇಶಿಕ ಹಾಗೂ ಅನ್ಯದೇಶಿತನವನ್ನು ಸಮೀಕರಿಸಿಕೊಂಡಿರುವುದ್ನು ಕಾಣಬಹುದು. ಅಂತಹ ಭಾಷಾ ಸಮೀಕರಣ ತೌಲನಿಕ ಅಧ್ಯಯನದಿಂದಲ್ಲದೆ ವಿವರಣಾತ್ಮಕ ಅಧ್ಯಯನದಿಂದ ಸಾಧ್ಯವಾಗಲಾರದು. ಆದರೂ ಭಾಷಾ ಸಹಜತೆಯನ್ನು ವಿವರಣೆಯ ಮೂಲಕ ನಿರೂಪಿಸಬಹುದು.

ಮಳವಳ್ಳಿ ಕನ್ನಡದ ರಚನಾತ್ಮಕ ವ್ಯವಸ್ಥೆಯನ್ನು ವಿಶ್ಲೇಷಿಸಿ ವಿವರಿಸುವ ಕಾರಣಕ್ಕಾಗಿ ಮಳವಳ್ಳಿ ತಾಲೋಕಿನ ೨೫ ರಿಂದ ೩೦ ಗ್ರಾಮಗಳನ್ನು ಕ್ಷೇತ್ರಕೇಂದ್ರಗಳಾಗಿ ನಿರ್ಧರಿಸಿ ಅಂತರ ನಿಹಿತ ಸಹಜತ್ವವನ್ನು ಆಧರಿಸಿ ಈ ಗ್ರಾಮಗಳನ್ನು ಆಯ್ಕೆ ಮಾಡಿಕೊಂಡಿದೆ. ಇಲ್ಲಿ ಪ್ರಾದೇಶಿಕ ನೈಜ್ಯತೆ ಮಳವಳ್ಳಿ ಕನ್ನಡದ ನೈಜ್ಯತೆಗೆ ಹಿನ್ನೆಲೆಯಾಗಿದೆ.

## ೧.೪. ಮಳವಳ್ಳಿ ಪ್ರಾದೇಶಿಕ ಹಿನ್ನೆಲೆ

ಮಳವಳ್ಳಿ ತಾಲೋಕು ಕರ್ನಾಟಕ ರಾಜ್ಯದ ಮಂಡ್ಯ ಜಿಲ್ಲೆಗೆ ಸೇರಿದ ಪ್ರದೇಶ. ಈ ಪ್ರದೇಶವು ಮೊದಲು ಮೈಸೂರು ಪ್ರಾಂತ್ಯಕ್ಕೆ ಸೇರಿದ ಪ್ರದೇಶವಾಗಿತ್ತು. ೧೯೩೯ರ ಜುಲೈ ೧ನೆಯ ತಾರೀಕಿನ ನಂತರ ಮಂಡ್ಯ ಜಿಲ್ಲೆಯ ತಾಲೋಕು ಕೇಂದ್ರವಾಗಿ ಪರಿವರ್ತನೆಯಾಯಿತು. ಮಳವಳ್ಳಿ ತಾಲೋಕನ್ನು ಆಡಳಿತದ ದೃಷ್ಟಿಯಿಂದ ಹಲಗೂರು, ಕಿರುಗಾವಲು, ಬಿ.ಜಿ.ಪುರ, ಕಸಬಾ ಎಂದು ನಾಲ್ಕು ಹೋಬಳಿಗಳನ್ನಾಗಿ ಮಾಡಿಕೊಳ್ಳಲಾಗಿದೆ. ಈ ತಾಲೋಕಿನಲ್ಲಿ ಎಲ್ಲಾ ಜಾತಿಯ, ಎಲ್ಲಾ ಧರ್ಮದ ಜನಾಂಗ ವಾಸವಾಗಿರುವುದನ್ನು ಕಾಣಬಹುದು. ಈ ಪ್ರದೇಶದ ಜನರು ಹೆಚ್ಚು ವ್ಯವಸಾಯವನ್ನೆ ಇಂದಿಗೂ ನಂಬಿಕೊಂಡು ಬದುಕು ಸಾಗಿಸುತ್ತಿರುವುದನ್ನು ಕಾಣಬಹುದು. ಈ ಪ್ರದೇಶದ ಜನರು ಭತ್ತ, ರಾಗಿ, ಕಬ್ಬು, ಜೋಳ, ರೇಷ್ಮೆ, ಕಡಲೆಕಾಯಿ, ಎಳ್ಳು ಇನ್ನೂ ಮೊದಲಾದ ಬೆಳೆಗಳನ್ನು ಬೆಳೆಯುತ್ತಾರೆ.

ಮಂಡ್ಯ ಜಿಲ್ಲೆಯ ಪ್ರಮುಖ ತಾಲೋಕುಗಳಲ್ಲಿ ಮಳವಳ್ಳಿಯೂ ಒಂದು. ಜಿಲ್ಲೆಯ ಆಗ್ನೇಯ ಭಾಗದಲ್ಲಿರುವ ಈ ತಾಲೋಕನ್ನು ಪಶ್ಚಿಮ ಮತ್ತು ದಕ್ಷಿಣದಲ್ಲಿ ಟಿ.ನರಸೀಪುರ, ಪೂರ್ವದಲ್ಲಿ ಕನಕಪುರ, ಆಗ್ನೇಯದಲ್ಲಿ ಕೊಳ್ಳೇಗಾಲ, ವಾಯುವ್ಯದಲ್ಲಿ ಮಂಡ್ಯ, ಉತ್ತರದಲ್ಲಿ ಮದ್ದೂರು ಮತ್ತು ಚನ್ನಪಟ್ಟಣ-ಈ ತಾಲೋಕುಗಳು ಸುತ್ತುವರಿದಿವೆ. ೮೦೪ ಚ.ಕಿ.ಮೀ ವಿಸ್ತೀರ್ಣವನ್ನು ಈ ತಾಲೋಕು ಹೊಂದಿದೆ. ಕಾವೇರಿ ನದಿಯ ಕಣಿವೆಯಲ್ಲಿ ಸಮುದ್ರಮಟ್ಟದಿಂದ ಸುಮಾರು ೭೬೨ ಮೀಟರ್‌ನಿಂದ ೯೧೪ ಮೀಟರ್ ಇದೆ. ಬಿಳಿಗಿರಿರಂಗನ ಬೆಟ್ಟದಿಂದ ಮುಂದುವರೆದ ಕಣಶಿಲೆಯ ಬೆಟ್ಟಗಳು ಕಂಡುಬರುತ್ತವೆ. ಮಳವಳ್ಳಿಯು ಮಂಡ್ಯದಿಂದ ಸುಮಾರು ೩೦ ಕಿ.ಮೀ ದೂರದಲ್ಲಿದೆ, ಮೈಸೂರಿನಿಂದ ೪೨ ಕಿ.ಮೀ ಮತ್ತು ಬೆಂಗಳೂರಿನಿಂದ ೧೦೦ ಕಿ.ಮೀ ದೂರದಲ್ಲಿದೆ.

ಪ್ರಾದೇಶಿಕ ಎಂಬ ಪದಕ್ಕೆ ಅದರದೇ ಆದಂತಹ ಮಹತ್ವ ಪ್ರತಿಯೊಂದು ಪ್ರದೇಶಕ್ಕೂ ಇರುವುದನ್ನು ಕಾಣಬಹುದು. ಪ್ರಾದೇಶಿಕ ಹಿನ್ನೆಲೆ ಎಂದರೆ ಆ ಪ್ರದೇಶದ ಭೌಗೋಳಿಕ

ಎಂಬ ಅರ್ಥದಿಂದ ವಿವರಿಸಿಕೊಳ್ಳಬಹುದಾಗಿದೆ. ಚಾರಿತ್ರಿಕ ಮತ್ತು ಭೌಗೋಳಿಕ ಎಂಬ ಪದಕ್ಕೆ ಅದರದೇ ಆದಂತಹ ವಿಸ್ತಾರವಾದ ವ್ಯಾಪ್ತಿಯಿದ್ದು, ಇದು ವೈವಿಧ್ಯಮಯವೂ, ಮಾನವನ ವಾಸಸ್ಥಳವೂ ಆದ ಭೂಮಿಯ ಅಧ್ಯಯನವಾಗಿದೆ. ಅದೇ ರೀತಿ ಮಳವಳ್ಳಿ ಪ್ರದೇಶಕ್ಕೂ ಅದರದ್ದೆ ಆದ ವೈವಿಧ್ಯಮಯವೂ, ಮಾನವನ ವಾಸಸ್ಥಳವೂ ಆದ ಭೂಮಿಯ ಅಧ್ಯಯನವಾಗಿದೆ. ಪ್ರಾದೇಶಿಕತೆ ಎಂದರೆ ಕೇವಲ ಸ್ಥಳವಾಗಿರದೆ, ಕಲ್ಲು, ಮಣ್ಣು, ಗಿಡ, ಮರ, ಬೆಟ್ಟ, ಗುಡ್ಡ ಇತ್ಯಾದಿ ಆಗಿರದೆ ಆ ಪ್ರದೇಶದಲ್ಲಿ ವಾಸಿಸುವ ಜನಾಂಗವೂ ಸಹ ಆಗಿರುತ್ತದೆ. ಆ ಜನಾಂಗದ ಮಾತು, ಆಚರಣೆ, ಅಭಿರುಚಿ, ಪ್ರಾಚೀನತೆ, ಆ ಪ್ರದೇಶಕ್ಕೂ ಜನಾಂಗಕ್ಕೂ ಇರುವ ಸಂಬಂಧ ಇತ್ಯಾದಿ ವಿಚಾರಗಳ ಚರ್ಚೆಯೆ ಪ್ರಾದೇಶಿಕತೆಯ ಮಹತ್ವವಾಗಿರುತ್ತದೆ.

ಮಂಡ್ಯ ಜಿಲ್ಲೆಯಲ್ಲಿರುವ ಮಳವಳ್ಳಿ ತಾಲೋಕಿನ ಕೆಲವು ಭಾಗವು ಹಚ್ಚ ಹಸಿರಿಂದ ಕೂಡಿದ ಪ್ರದೇಶವಾಗಿದೆ. ಉಳಿದಂತೆ ಮಳೆ ಆಶ್ರಯಿತ ಒಣ ಭೂಮಿ ಪ್ರದೇಶ. ೨೦ನೆಯ ಶತಮಾನದ ಆರಂಭದವರೆಗೂ ಇಡೀ ತಾಲೋಕು ಒಣ ಭೂಮಿಯಾಗಿದ್ದು, ಮಳೆ ಆಶ್ರಯಿತ ಕೃಷಿಯನ್ನು ಮಾಡುತ್ತಿದ ಪ್ರದೇಶವಾಗಿತ್ತು. ಕೆ.ಆರ್.ಎಸ್ ಅಣೆಕಟ್ಟೆ ನಿರ್ಮಾಣವಾದ ನಂತರ ನೀರಾವರಿ ಸೌಲಭ್ಯ ಪಡೆದು ಕೃಷಿ ಮಾಡುವ ಪ್ರದೇಶವಾಗಿ ಕೆಲವು ಪ್ರದೇಶ ಪರಿವರ್ತಿತವಾಗಿರುವುದನ್ನು ಕಾಣಬಹುದು. ಈ ನಿಟ್ಟಿನಲ್ಲಿ ಈ ತಾಲೋಕು ಆರ್ಥಿಕ ಪ್ರಗತಿಯತ್ತ ಸಾಗುತ್ತ ಬಂದಿದೆ.

ಈ ತಾಲೋಕಿನ ವಿಶಿಷ್ಟತೆ ಎಂದರೆ ೧೯೦೨ರಲ್ಲಿ ಶಿವನಸಮುದ್ರದಲ್ಲಿ ಪ್ರಾರಂಭವಾದ ಜಲವಿದ್ಯುತ್ ಯೋಜನೆ ಏಷ್ಯಾದಲ್ಲೇ ಮೊದಲ ವಿದ್ಯುತ್ ಉತ್ಪಾದನಾ ಕೇಂದ್ರ ಎಂಬ ಹೆಮ್ಮೆಗೆ ಪಾತ್ರವಾಗಿದೆ. ರಾಷ್ಟ್ರಿಯ ಹೆದ್ದಾರಿಯಾದ(೨೦೯) ಬೆಂಗಳೂರು-ದಿಂಡಿಗಲ್ ರಸ್ತೆ ಮಾರ್ಗವು ಹಲಗೂರು ಹೋಬಳಿಯಿಂದ ಪ್ರಾರಂಭವಾಗಿ ಮಳವಳ್ಳಿ ಪಟ್ಟಣದ ಮೂಲಕ ಹಾದು ಹೋಗುತ್ತದೆ. ಈ ತಾಲೋಕು ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಿಂದಲೂ ಶೈಕ್ಷಣಿಕ ಸೌಲಭ್ಯವನ್ನು ಪಡೆದು ಪ್ರಗತಿಯತ್ತ ಸಾಗುತ್ತಿರುವುದು ಪ್ರಮುಖವಾದ ಸಂಗತಿ. ವ್ಯವಸಾಯೋತ್ಪನ್ನ ಕ್ಷೇತ್ರದಲ್ಲಿ ತಾಲೋಕು ಪ್ರಾಮುಖ್ಯತೆ ಹೊಂದಿದೆ. ಬೆಲ್ಲ ತಯಾರಿಕ ಕೇಂದ್ರಗಳು, ಹಾಲು ಸಂಸ್ಕರಣ ಕೇಂದ್ರಗಳು ಇವೆ. ಹೈನುಗಾರಿಕೆ ಸಂಬಂಧಿಸಿದಂತೆ ರೇಷ್ಮೆ ಹುಳು ಕೇಂದ್ರ, ಕುರಿ ತಳಿಯ ಅಭಿವೃದ್ಧಿ ಕೇಂದ್ರ ಇತ್ಯಾದಿ ಕೇಂದ್ರಗಳನ್ನು ಕಾಣಬಹುದು.

ಕರ್ನಾಟಕ ರಾಜ್ಯದ ಕಾವೇರಿ ಜಲಾನಯನ ಪ್ರದೇಶ ಅಭಿವೃದ್ಧಿ ವ್ಯಾಪ್ತಿಗೆ ಮಳವಳ್ಳಿ ತಾಲೋಕು ಸೇರಿದೆ. ಪ್ರಮುಖವಾಗಿ ಪ್ರಾಧಿಕಾರವು ಭೂ ಅಭಿವೃದ್ಧಿ, ಕಾಲುವೆ ನಿರ್ಮಾಣ, ರಸ್ತೆ ನಿರ್ಮಾಣ, ತೋಟಗಾರಿಕೆ, ಮೀನುಗಾರಿಕೆ ಮುಂತಾದ ರೈತರ ಆರ್ಥಿಕ ಅಭಿವೃದ್ಧಿಗೆ ಸಹಕಾರಿಯಾದ ಕಾರ್ಯಕ್ರಮಗಳನ್ನು ಜಾರಿಗೊಳಿಸಿದೆ. ಶಿಕ್ಷಣದ ಅಭಿವೃದ್ಧಿಯಲ್ಲೂ ಮುನ್ನಡೆ ಸಾಧಿಸಿದೆ. ಸರ್ಕಾರಿ ಕಾಲೇಜುಗಳು, ಖಾಸಗಿ ಕಾಲೇಜುಗಳು, ಅನುದಾನಿತ ಕಾಲೇಜು, ಶಿಕ್ಷಕ ತರಬೇತಿ ಕೇಂದ್ರ, ಕೈಗಾರಿಕ ತರಬೇತಿ ಕೇಂದ್ರ, ಶಾಲೆಗಳು ಹಾಗೂ ಕರ್ನಾಟಕ ರಸ್ತೆ ಸಾರಿಗೆ ನಿಗಮದ ಕಾರ್ಯಗಾರ, ಆಧುನಿಕ ಮಾದರಿಯ ಸಾರ್ವಜನಿಕ ಆಸ್ಪತ್ರೆಗಳನ್ನು ಹೊಂದಿದೆ.

ಮಳವಳ್ಳಿ ತಾಲೋಕು ಪ್ರವಾಸಿಗರನ್ನು ಆಕರ್ಷಿಸಲ್ಪಡುವ ಹಲವಾರು ಪ್ರವಾಸಿ ಕೇಂದ್ರಗಳನ್ನು ಹೊಂದಿದೆ. ಕಾವೇರಿ ನದಿ ದಡದಲ್ಲಿರುವ ಮುತ್ತತ್ತಿ, ಧನಗೂರು ಬಳಿಯ ಶಿಂಷಾ ಜಲಪಾತ, ಶಿವನ ಸಮುದ್ರದ ಕಾವೇರಿ ನದಿಯ ಗಗನಚುಕ್ಕಿ, ಭರಚುಕ್ಕಿ ಜಲಪಾತಗಳು ವಿಶ್ವಪ್ರಸಿದ್ಧಿಯಾಗಿವೆ. ಶಿಂಷಾಪುರ ಮತ್ತು ಶಿವನಸಮುದ್ರದ ಜಲವಿದ್ಯುತ್ ಉತ್ಪಾದನಾ ಕೇಂದ್ರಗಳು ಜಗತ್ಪ್ರಸಿದ್ಧಿಯಾಗಿವೆ. ಮಾರೇನಹಳ್ಳಿಯ ಶ್ರೀ ಲಕ್ಷ್ಮಿನರಸಿಂಹ ದೇವಾಲಯ, ಬೊಪ್ಪೆಗೌಡನಪುರದ ಮಂಟೇಸ್ವಾಮಿ ಮಠ, ಕುಂದೂರು ಬೆಟ್ಟ, ಅಂತ್ರಳ್ಳಿ ಬೆಟ್ಟ, ತೊರೆಕಾಡನಹಳ್ಳಿಯ ಕಾವೇರಿ ನೀರು ಶುದ್ಧೀಕರಣ ಮತ್ತು ನೀರು ಸರಬರಾಜು ಕೇಂದ್ರ, ಹಲಗೂರಿನ ಕಬ್ಬಿಣ, ಸಿದ್ಧಪ್ಪಾಜಿ ಪವಾಡ ಸ್ಥಳ, ಧನಗೂರಿನ ಷಡಕ್ಷರದೇವ ಕವಿಯ ಜನ್ಮಸ್ಥಳ ಮುಂತಾದ ಪ್ರವಾಸಿಗರ ಗಮನ ಸೆಳೆಯುತ್ತವೆ.

### ೧.೫. ಮಳವಳ್ಳಿ ಚಾರಿತ್ರಿಕ ಮತ್ತು ಭೌಗೋಳಿಕ ಹಿನ್ನೆಲೆ

ಈ ಸಂಶೋಧನೆಯು ಮಳವಳ್ಳಿ ತಾಲೋಕು ವ್ಯಾಪ್ತಿಯನ್ನು ಒಳಗೊಂಡಿದ್ದು ಈ ತಾಲೋಕಿನ ಭೌಗೋಳಿಕ, ಚಾರಿತ್ರಿಕ, ಭಾಷಿಕ, ಸಾಮಾಜಿಕ ಹಿನ್ನೆಲೆಗಳನ್ನು ಒಳಗೊಂಡಿರುತ್ತದೆ. ಇಂಗ್ಲೀಷ್ ಪದದ 'ಹಿಸ್ಟರಿ' ಎಂಬ ಪದ ಕನ್ನಡದಲ್ಲಿ 'ಇತಿಹಾಸ, ಚರಿತ್ರೆ' ಎಂಬ ಹೆಸರುಗಳಿಂದ ಕರೆಯಲಾಗುತ್ತದೆ. ಈ ಎರಡು ಪದಗಳಿಗೂ ಇತಿಹಾಸದ ವಿದ್ವಾಂಸರು ತಮ್ಮದೆ ಆದ ಅಭಿಪ್ರಾಯಗಳನ್ನು ನೀಡಿದ್ದಾರೆ. ಇತಿಹಾಸ ಎಂದರೆ ಗತಕಾಲದ ಘಟನೆಗಳು, ಅನುಭವ ಕಥನಗಳ ವೃತ್ತಾಂತವಾಗಿರುತ್ತವೆ. ಮೌಖಿಕವಾಗಿ ಚರಿತ್ರೆ ಆಯಾ ಕಾಲಘಟ್ಟದ ಜನರ ಮಾತಿನ ಮೂಲಕ ಉಳಿದಿರುತ್ತದೆ. ಅದು ಸಮಕಾಲೀನ ಮತ್ತು ಗತಕಾಲದ ಕಥನಗಳು ಉಳಿಯುವುದೆ ಜನಸಾಮಾನ್ಯರ ಮಾತಿನ ಮೂಲಕ. ಆ ಮಾತೆ ಭಾಷೆಯ ಬಹಳ ದೊಡ್ಡ ದಾಖಲೆ. ಅದು

ಕಾಲದಿಂದ ಕಾಲಕ್ಕೆ, ವ್ಯಕ್ತಿಯಿಂದ ವ್ಯಕ್ತಿಗೆ, ವೃತ್ತಿಯಿಂದ ವೃತ್ತಿಗೆ ಬದಲಾಗುತ್ತಿರುತ್ತದೆ. ಅದು ಒಂದು ಭಾಷೆ, ಸಮಾಜದ, ಕಾಲಘಟ್ಟದ ಉಳಿಯುವಿಕೆಯ ಲಕ್ಷಣ. ಹಾಗೇ ಒಂದು ಸ್ಥಳದ ಚರಿತ್ರೆಯೂ ಕೂಡ ಅಲ್ಲಿ ಜನರ ಮೂಲಕ ಅದು ಉಳಿದಿರುತ್ತದೆ, ಅದು ಅವರ ಆಚರಣೆಗಳ ಮೂಲಕ ಅವರಿಗೆ ಅರಿವಿಲ್ಲದಂತೆ ಸೇರಿಕೊಂಡಿರುತ್ತದೆ.

ಯಾವುದೇ ಒಂದು ಸ್ಥಳವೂ ಭೌಗೋಳಿಕ, ಸಾಂಸ್ಕೃತಿಕ, ಚಾರಿತ್ರಿಕ, ಭಾಷಿಕ ಇನ್ನೂ ಹಲವು ಅಂಶಗಳ ಪ್ರಭಾದಿಂದ ರೂಪಗೊಂಡಿರುತ್ತವೆ. ಅದೇರೀತಿ ಮಳವಳ್ಳಿಯೂ ತನ್ನದೇ ಆದ ಚಾರಿತ್ರಿಕ ಅಂಶಗಳಿಂದ ರೂಪುಗೊಂಡಿರುವುದು ಈ ಪ್ರದೇಶದ ವಿಶಿಷ್ಟವಾದ ಅಂಶಗಳನ್ನು ಕಾಣಬಹುದು.

"ಮಳವಳ್ಳಿ ತಾಲೋಕಿನ ಹುಲ್ಲಂಬಳ್ಳಿಗೆ ಎರಡು ಕಿ.ಮೀ. ದೂರದಲ್ಲಿರುವ ಮರಳಹಳ್ಳಿಯಲ್ಲಿ (ಬೇಚಿರಾಕ್) ಇಂಥದ್ದೇ ಒಂದು ಪ್ರಾಚೀನ ನೆಲೆಯಿರುವುದು ಕಂಡುಬರುತ್ತದೆ. ಇಲ್ಲಿ ನೂತನ ಶಿಲಾಯುಗ (ಸುಮಾರು ಕ್ರಿ.ಪೂ.೧೮೦೦-೭೦೦)ದ ನೆಲೆ ಮತ್ತು ಬೃಹತ್ ಶಿಲಾ ಸಂಸ್ಕೃತಿ (ಸುಮಾರು ಕ್ರಿ.ಪೂ.೪೦೦ ರಿಂದ ಕ್ರಿ.ಶ ೧ನೆಯ ಶತಮಾನದವರೆಗೆ)ಯ ಶಿಲಾಗೋರಿಗಳಿರುವುದು ಪತ್ತೆಯಾಗಿದ್ದು, ಇದನ್ನು ಜಿಲ್ಲೆಯ ಮೊದಲನೆಯ ಜನವಸತಿಯ ನೆಲೆಯೆಂದು ಗುರುತಿಸಲಾಗಿದೆ. ಈ ಜನರು ಉಪಯೋಗಿಸುತ್ತಿದ್ದ ಮಣ್ಣಿನ ಪಾತ್ರೆ ಹಾಗೂ ಇತರೇ ಅವಶೇಷಗಳು ಹೇರಳವಾಗಿದ್ದು, ಅವುಗಳು ಕಾಲಕ್ರಮೇಣ ಬಹಳಷ್ಟು ಸವೆದು ಹೋಗಿರುವ ಅಂಶವು ಕಂಡುಬಂದಿದೆ. ನೂತನ ತಾಮ್ರಯುಗದ ಮತ್ತೊಂದು ಅತಿ ವಿಶಿಷ್ಟ ಕಪ್ಪುಕಲ್ಲಿನ ಕೊಡಲಿಗಳನ್ನು ಈ ನೆಲೆದಲ್ಲಿ ಪತ್ತೆಹಚ್ಚಲಾಗಿದೆ. ಈ ಜಿಲ್ಲೆಯಲ್ಲಿ ಬೃಹತ್ ಶಿಲಾಯುಗದ ಆರಂಭಕಾಲದ ಹಲವಾರು ನೆಲೆಗಳನ್ನು ಶೋಧಿಸಲಾಗಿದ್ದು, ಬೆಳಕವಾಡಿಯ ಬಳಿಯಲ್ಲಿ ಇಂತಹ ಒಂದು ನಿವೇಶನವನ್ನು ಪತ್ತೆಹಚ್ಚಲಾಗಿದೆ. ಈ ಪ್ರದೇಶವು ಕಾವೇರಿ ನದಿಯ ದಂಡೆಯಲ್ಲಿದ್ದು, ಬಂಡೆಗಳಿಂದ ಆವೃತವಾಗಿದ್ದು, ಕಡಿದಾದ ಪ್ರಪಾತಗಳಿಂದಲೂ ಹಾಗೂ ಕಲ್ಲಾಸರೆಗಳಿಂದಲೂ ತುಂಬಿವೆ."[೧]

"ಮಳವಳ್ಳಿಯು ಹೊಯ್ಸಳರ ಕಾಲದಷ್ಟು ಪ್ರಾಚೀನ ನೆಲೆ, ಇದು ಮೈಸೂರು ಅರಸ ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಪ್ರಮುಖ ಪಟ್ಟಣವಾಗಿದ್ದು, ಕೋಟೆ, ಆಳವಾದ ಕಂದಕ, ಸುಂದರವಾದ ಕಲ್ಯಾಣಿ ಹಾಗೂ ಮಾವಿನ ತೋಪುಗಳನ್ನು ಕ್ರಿ.ಶ.೧೬೮೫ರಲ್ಲಿ ಅವರೇ ಇಲ್ಲಿ ನಿರ್ಮಿಸಿದರೆಂದು ಶಾಸನವೊಂದರಿಂದ ತಿಳಿದುಬರುತ್ತದೆ. ಹೈದರಾಲಿಯು ಇದನ್ನು ತನ್ನ ಮಗ ಟಿಪ್ಪುವಿಗೆ ಜಹಗೀರಾಗಿ ನೀಡಿದ್ದು ಕ್ರಿ.ಶ.೧೭೯೯ರ ಯುದ್ಧದಲ್ಲಿ ಮಳವಳ್ಳಿಯು ಬ್ರಿಟಿಷರಿಗೆ

ಆಯಕಟ್ಟಿನ ಸ್ಥಳವಾಗಿದ್ದುದನ್ನು ಮನಗಂಡ ಟಿಪ್ಪು, ಯುದ್ಧ ನಂತರ ಮಳವಳ್ಳಿಯನ್ನು ಹಾಳುಗೆಡವಿದನು. ಮಳವಳ್ಳಿಯ ಮೊದಲ ಉಲ್ಲೇಖ ನೆರೆಯ ಬಂಡೂರಿನ ಕ್ರಿ.ಶ೧೨೧೫ರ ಶಾಸನದಲ್ಲಿ ಕಂಡುಬರುತ್ತದೆ. ಬಡಗೆರೆ ನಾಡಿಗೆ ಸೇರಿದ್ದ ಅಂಶವು ಗೊತ್ತಾಗಿದ್ದು ಅಲ್ಲಿಂದ ಈ ವರೆಗೆ ಐದು ಶಾಸನಗಳು ವರದಿಯಾಗಿವೆ."[೨]

"ಮಳವಳ್ಳಿಯು ಕ್ರಮವಾಗಿ ಗಂಗರು, ಚೋಳರು, ಹೊಯ್ಸಳರು, ಮತ್ತೆ ಗಂಗರಿಂದ ಆಳಲ್ಪಟಿತು. ಎರಡನೆಯ ಶತಮಾನದಿಂದ ಹನ್ನೊಂದನೆಯ ಶತಮಾನದ ವರೆಗೆ ಈ ಪ್ರದೇಶ ಗಂಗರ ರಾಜರುಗಳಿಂದ ಆಳಲ್ಪಟ್ಟಿತ್ತು. ಮದ್ದೂರನ್ನು ಒಳಗೊಂಡ ಈ ಪ್ರದೇಶವು ಚಿಕ್ಕಗಂಗವಾಡಿ ಎಂದು ಕರೆಯಲ್ಪಟ್ಟಿತು."[೩]

"ಮಳವಳ್ಳಿ ಸುತ್ತಲ ಪ್ರದೇಶ ಅರಣ್ಯಮಯವಾಗಿತ್ತಂತೆ. ಈ ಕಾಡಿನಲ್ಲಿ ಸುವಾಸನೆಯುತವಾದ ಮಲ್ಲೆಹೂವಿನ ಬಳ್ಳಿಗಳು ಅಧಿಕವಾಗಿದ್ದವಂತೆ. ಈ ಹೂವುಗಳನ್ನು ಕಾಡುಮಲ್ಲೆ ಹೂ ಎನ್ನುತ್ತಿದ್ದರಂತೆ. ಮಲ್ಲೇಹೂವಿನ ಬಳ್ಳಿಗಳು ಅಧಿಕವಾಗಿದ್ದ ಈ ಊರನ್ನು ಜನ ಮಲ್ಲವಲ್ಲಿ ಎಂದು ಕರೆಯುತ್ತಿದ್ದು ಕ್ರಮೇಣ ಮಲ್ಲವಲ್ಲಿಯು ಉಚ್ಚಾರಣೆಯಲ್ಲಿ ಮಾರ್ಪಾಟಾಯಿತು. ಮಲ್ಲೆವಲ್ಲಿ ಎಂಬ ಪದ ಗಮನಾರ್ಹವಾದುದು. ಮಲ್ಲೆ ಎಂದರೆ ಮಲ್ಲೆಯ ಹೂ ವಲ್ಲಿ ಎಂದರೆ ಬಳ್ಳಿ ನಡೆದಾಡುವ ಮನುಷ್ಯರ ಕಾಲಿಗೆ ಮಲ್ಲೆವಲ್ಲಿ ತೊಡರಾಗುತ್ತಿದ್ದವು. ಅಂತೆಯೇ ಉಚ್ಚಾರಣೆಯಲ್ಲಿ ನಾಲಿಗೆಗೆ ತೊಡರಾಯಿತು. ಸುಲಭ ಮತ್ತು ಸೌಲಭ್ಯಕಾಂಕ್ಷಿಯಾದ ಮನುಷ್ಯನು ಮಲ್ಲವಲ್ಲಿ ಎಂದು ಕರೆದ. ಮಲ್ಲವಲ್ಲಿಯು ಉಚ್ಚಾರಣೆಯಲ್ಲಿ ಮಳವಳ್ಳಿಯಾಯಿತು. ಮಳವಳ್ಳಿ ಪದದ ನಿಷ್ಪತ್ತಿಯನ್ನು ಹೀಗೆ ಗುರುತಿಸುತ್ತಾರೆ. ಮಲೆವಲ್ಲಿ>ಮಲವಲ್ಲಿ>ಮಳವಳ್ಳಿ ಇದು ಉಚ್ಚಾರಣೆಯಲ್ಲಾದ ಬದಲಾವಣೆ"[೪] ಎಂದು ಇಲ್ಲಿಯ ಜನರು ಮಳವಳ್ಳಿ ಪದ ನಿಷ್ಪತ್ತಿಯ ಬಗ್ಗೆ ಕೇಳಿದರೆ ಈ ರೀತಿಯಾದ ಕತೆಯನ್ನು ಹೇಳುತ್ತಾರೆ.

ಇಲ್ಲಿಯ ಜನರು ಕೇವಲ ಮೇಲಿನ ನಿಷ್ಪತ್ತಿಯನ್ನು ಮಾತ್ರ ಹೇಳದೆ ಮೊತ್ತೊಂದು ಸಂಗತಿಯನ್ನು ಈ ನಿಷ್ಪತ್ತಿಯ ಜೊತೆ ಸಂಬಂಧ ಬೆಸೆಯುತ್ತಾರೆ. "ಮಳವಳ್ಳಿಯ ಸುತ್ತಲೂ ಕಾಡಿತ್ತು. ಈ ಕಾಡು ಪ್ರದೇಶದಲ್ಲಿ ವಿಶೇಷವಾಗಿ ಬಿಳಿಯ ಮೊಲಗಳಿದ್ದವಂತೆ. ಆದ್ದರಿಂದ ಈ ಊರನ್ನು ಮೊಲದಹಳ್ಳಿ ಎಂದು ಕರೆಯುತ್ತಿದ್ದು ಕಾಲಕ್ರಮೇಣ ಮೊಲದಹಳ್ಳಿ>ಮಳವಳ್ಳಿ ಎಂದಾಗಿರುವ ಸಾಧ್ಯತೆ ಇದೆ"[೫] ಹೀಗೆ ಮಳವಳ್ಳಿ ಊರಿನ ಪದನಿಷ್ಪತ್ತಿಯೂ ಆಗಿದೆ ಎಂಬುದು ಇಲ್ಲಿಯ ಜನರ ನಂಬಿಕೆ.

ಭಾಷಾ ವಿಜ್ಞಾನದ ಹಿನ್ನೆಲೆಯಿಂದ ಗಮನಿಸಿದಾಗ ಮಳವಳ್ಳಿ ಎಂಬ ಪದವು ಇಂದಿಗೂ ಇಲ್ಲಿಯ ಜನರ ಮಾತಿನಲ್ಲಿ ಮಳ್‌ವಳ್ಳಿ ಎಂದು ಉಚ್ಚರಿತವಾಗುತ್ತದೆ. ಮಾಳ ಎಂಬ ಪದವು ಮಳ ಆಗಿರಬಹುದೇನೊ? ಎಂದೆನಿಸುತ್ತದೆ. ಮಾಳ ಎಂದರೆ ಬಯಲು ಪ್ರದೇಶ ಎಂದರ್ಥ. ಚೋಳರು ಮಳವಳ್ಳಿಯ ಪಕ್ಕದ ಊರಾದ ಮಾರಳ್ಳಿಯಲ್ಲಿ ಆಳ್ವಿಕೆ ಮಾಡುವ ಕಾಲಘಟ್ಟದಲ್ಲಿ ಮಳವಳ್ಳಿ ಪ್ರದೇಶವೂ ಬಯಲು ಪ್ರದೇಶವಾಗಿತ್ತು ಎಂಬುದನ್ನು ಚರಿತ್ರೆ ನಮಗೆ ತಿಳಿಸುತ್ತದೆ. ಅದನ್ನು ಮಾಳ ಎಂಬ ಹೆಸರಿನಿಂದ ಇಲ್ಲಿ ಜನರು ಕರೆಯುತ್ತಿದ್ದಿರಬಹುದು. ಚೋಳರ ಕಾಲದಲ್ಲಿ ಮಾರಳ್ಳಿ ಬಹಳ ಪ್ರಸಿದ್ಧವಾದ ಊರಾಗಿದ್ದು ಊರಿನ ಹೊರಗೆ ಕೆಳಜಾತಿಗಳನ್ನು ಇಡಲಾಗಿತ್ತು ಆ ಪ್ರದೇಶವು ಚೋಳರ ಪಥನದ ನಂತರ ಮಾರಳ್ಳಿ ಕ್ಷೀಣವಾಗಿ ಮಳವಳ್ಳಿ ಪ್ರಸಿದ್ಧಿಗೆ ಬಂದಿದೆ.

ಮಾಳ–ಎಂದರೆ ಜನರಿಲ್ಲದ ಬಯಲು ಪ್ರದೇಶ ಎಂದಾಗುತ್ತದೆ. ಮಾಳದಲ್ಲಿ ವಾಸಿಸುತ್ತಿದ್ದವರು ಊರಿಂದ ಹೊರದೂಡಲ್ಪಟ್ಟ ಜನರಾಗಿದ್ದರು ಅವರೇ ಈ ಮಾಳದ ಜನರಾಗಿ ಇವರು ನಂತರದ ದಿನಗಳಲ್ಲಿ ಈ ಮಾಳ ಊರಾಗಿ ಪರಿವರ್ತನೆಯಾದ ಸಂದರ್ಭದಲ್ಲಿ ಮಾಳ+ವಳ್ಳಿ>ಮಾಳವಳ್ಳಿ, ಮಳ+ವಳ್ಳಿ>ಮಳವಳ್ಳಿ ಆಗಿದೆ. ಈ ರೀತಿಯಾಗಿ ಮಳವಳ್ಳಿ ಪದ ನಿಷ್ಪತ್ತಿಯಾಗಿರಬಹುದು ಎನಿಸುತ್ತದೆ.

ಮಳವಳ್ಳಿ ತಾಲೋಕಿನಲ್ಲಿ ಪ್ರಮುಖವಾಗಿ ಕಾವೇರಿ, ಶಿಂಷಾ ನದಿಗಳು ಹರಿಯುತ್ತವೆ. ಈ ನದಿಗಳ ಜಲಸಂಪನ್ಮೂಲಗಳನ್ನು ಬಳಸಿಕೊಂಡು ಕೃಷಿ ಮತ್ತು ಮೀನುಗಾರಿಕೆಯನ್ನು ಮಾಡಲಾಗುತ್ತದೆ. ಬೆಂಗಾಡಾಗಿದ್ದ ಮಂಡ್ಯ ಜಿಲ್ಲೆಯನ್ನು ಕನ್ನಂಬಾಡಿಯಲ್ಲಿ ಕಾವೇರಿ ನದಿಗೆ ಕೃಷ್ಣರಾಜಸಾಗರ ಅಣೆಕಟ್ಟನ್ನು ಕಟ್ಟಿ ಹಸಿರಿನಿಂದ ಕಂಗೊಳಿಸಲು ಮೂಲಕಾರಣವಾಗಿದೆ. ಈ ನದಿಯು ಮಂಡ್ಯದ ಜೀವನಾಡಿ ಎಂದರೆ ಅತಿಶಯೋಕ್ತಿಯಾಗಲಾರದು. ಕಾವೇರಿ ನದಿಯು ಕೊಡಗು ಜಿಲ್ಲೆಯ ಮಡಿಕೇರಿ ತಾಲೋಕಿನ ಭಾಗಮಂಡಲದ ಸಮೀಪ ಬ್ರಹ್ಮಗಿರಿ ಬೆಟ್ಟದಲ್ಲಿ ಹುಟ್ಟಿ ಕೊಡಗು, ಹಾಸನ, ಚಾಮರಾಜನಗರ, ಮೈಸೂರು, ಮಂಡ್ಯ ಜಿಲ್ಲೆಗಳಿಗೆ ಸಾಕಷ್ಟು ನೀರುಣಿಸುತ್ತದೆ.

ಕಾವೇರಿ ನದಿಯ ನೀರು ಮಳವಳ್ಳಿ ತಾಲೋಕಿನಲ್ಲಿ ಹರಿಯುವುದರಿಂದ ಇಲ್ಲಿಯ ಜನತೆಗೆ ಬಹಳ ಪ್ರಯೋಜನಕಾರಿಯಾಗಿದೆ. ಈ ನದಿಯ ನೀರನ್ನು ಬಳಸಿಕೊಂಡು ಇಲ್ಲಿಯ ಜನರು ಭತ್ತ, ಕಬ್ಬು, ರಾಗಿ, ಮೊದಲಾದ ಬೆಳೆಗಳನ್ನು ಬೆಳಯುತ್ತಾರೆ. ಶಿಂಷಾ ನದಿಯು

ಕಾವೇರಿ ನದಿಯ ಉಪನದಿಯಾಗಿದೆ. ಶಿಂಷಾನದಿಗೆ ಕದಂಬ, ಕಡಬಕೊಳ್ಳಿ ಎಂಬ ಹೆಸರುಗಳು ಇವೆ.

ಈ ನದಿಯು ತುಮಕೂರು ಜಿಲ್ಲೆಯ ದೇವರಾಯನದುರ್ಗದ ದಕ್ಷಿಣಭಾಗದಲ್ಲಿ ಹುಟ್ಟಿ, ದಕ್ಷಿಣಾಭಿಮುಖವಾಗಿ ಮದ್ದೂರು ತಾಲೋಕನ್ನು ದಾಟಿ ಆಗ್ನೇಯ ದಿಕ್ಕಿನಲ್ಲಿ ಹರಿದು ಮಳವಳ್ಳಿ ತಾಲೋಕನ್ನು ಪ್ರವೇಶಿಸಿ ಧನಗೂರಿನ ಬಳಿ ಶಿಂಷಾ ಜಲಪಾತವನ್ನು ಸೃಷ್ಟಿಸಿ ಮುಂದೆ ಕಾವೇರಿ ನದಿಯನ್ನು ಸೇರಿಕೊಳ್ಳುತ್ತದೆ. ಈ ನದಿಯು ಮದ್ದೂರು ತಾಲೋಕಿನಲ್ಲಿ ಹರಿಯುವುದರಿಂದ ಇದನ್ನು ಮದ್ದೂರು ಹೊಳೆ ಎಂದು ಕರೆಯುತ್ತಾರೆ. ಶಿಂಷಾ ನದಿಯಲ್ಲಿ ಮಳೆಗಾಲದಲ್ಲಿ ಮಾತ್ರ ಹೆಚ್ಚು ನೀರು ಹರಿಯುತ್ತದೆ. ಶಿಂಷಾನದಿಗೆ ಶಿಂಷಾಪುರದ ಬಳಿ ಜಲವಿದ್ಯುತ್ ಉತ್ಪಾದನಾ ಕೇಂದ್ರವನ್ನು ೧೯೦೨ರಲ್ಲಿ ಸ್ಥಾಪಿಸಲಾಯಿತು. ಈ ನದಿಗೆ ಕಡಬ ಮತ್ತು ತುರುವೆಕೆರೆಯಲ್ಲಿ ದೊಡ್ಡ ಕೆರೆಗಳನ್ನು ನಿರ್ಮಿಸಲಾಗಿದೆ. ಮದ್ದೂರು ತಾಲೋಕಿನ ತಗ್ಗಳ್ಳಿ ಮತ್ತು ಚನ್ನಪಟ್ಟಣ ತಾಲೋಕಿನ ಇಗ್ಗಲೂರು ಸಮೀಪ ಅಣೆಕಟ್ಟೆಯನ್ನು ಕಟ್ಟಲಾಗಿದೆ. ಶಿಂಷಾ ನದಿಯು ಹಲಗೂರು ಹೋಬಳಿಯ ಕೆಲವು ಗ್ರಾಮಗಳ ರೈತರಿಗೆ ಅನುಕೂಲವಾಗಿದೆ. ಇದರಿಂದ ಜನರ ಆರ್ಥಿಕಮಟ್ಟ ಸುಧಾರಿಸಿದೆ.

"ಮಳವಳ್ಳಿ ತಾಲೋಕು ಕಾವೇರಿ ನದಿಯ ಕಣಿವೆಯಲ್ಲಿ ಸಮುದ್ರ ಮಟ್ಟದಿಂದ ಸುಮಾರು ೭೬೨ ಮೀಟರ್‌ನಿಂದ ೯೧೪ ಮೀಟರ್ ಎತ್ತರದಲ್ಲಿದೆ. ಇದರ ದಕ್ಷಿಣ ಭಾಗದಲ್ಲಿ ಬಿಳಿಗಿರಿರಂಗನ ಬೆಟ್ಟದಿಂದ ಮುಂದುವರಿದ ಕಣಶಿಲೆಯ ಬೆಟ್ಟಗಳು ಕಂಡುಬರುತ್ತವೆ. ಈ ತಾಲೋಕಿನ ಪೂರ್ವಭಾಗದಲ್ಲೂ ಸಣ್ಣ ಬೆಟ್ಟಗಳು ಹಾದುಹೋಗಿವೆ. ತಾಲೋಕಿನ ಹೆಚ್ಚಿನ ಭಾಗಗಳು ಏರಿಳಿತದಿಂದ ಕೂಡಿದ್ದು ಉತ್ತರದಿಂದ ದಕ್ಷಿಣದ ಕಡೆಗೆ ಇಳಿಜಾರಾಗಿದೆ. ಕಾವೇರಿ ನದಿ ತಾಲೋಕಿನ ದಕ್ಷಿಣದ ಮೇರೆಯಾಗಿದ್ದು ತಿರಮಕೂಡಲು, ನರಸೀಪುರ ಮತ್ತು ಕೊಳ್ಳೇಗಾಲ ತಾಲೋಕುಗಳನ್ನು ಬೇರ್ಪಡಿಸುತ್ತವೆ. ಇದು ತಾಲೋಕಿನ ಆಗ್ನೇಯ ಅಂಚಿನಲ್ಲಿ ಬೆಳಕವಾಡಿಯ ಸಮೀಪ ವಿಭಾಗವಾಗಿ ಶಿವನಸಮುದ್ರ ಎಂಬ ದ್ವೀಪವನ್ನುಂಟುಮಾಡಿ ಮುಂದೆ ಈ ನೀರು ಕಂದರದ ಮೂಲಕ ಹರಿದು ಸುಮಾರು ೬೨ ಮೀಟರ್ ಎತ್ತರದಿಂದ ಗಗನಚುಕ್ಕಿ, ಬರಚುಕ್ಕಿಗಳೆಂಬ ಜಲಪಾತಗಳಾಗಿ ದುಮ್ಮಿಕ್ಕುತ್ತವೆ. ಶಿಂಷಾನದಿಯು ತಾಲೋಕಿನ ಪೂರ್ವಭಾಗದಲ್ಲಿ ಉತ್ತರದಿಂದ ದಕ್ಷಿಣಕ್ಕೆ ಹರಿದು ಕಾವೇರಿ ನದಿಯನ್ನು ಸೇರುತ್ತದೆ. ತಾಲೋಕಿನ ಹೆಚ್ಚಿನ ಭಾಗವು ಕಾವೇರಿ ಮತ್ತು ಶಿಂಷಾನದಿಗಳ ಬಯಲು ಪ್ರದೇಶವಾಗಿದೆ."[೬]

ಮಳವಳ್ಳಿ ತಾಲೋಕಿನ ಶಿವನಸಮುದ್ರ, ಹಲಗೂರು ಮುಂತಾದ ಸ್ಥಳಗಳಲ್ಲಿ ಕಬ್ಬಿಣಾಂಶವುಳ್ಳ ಮ್ಯಾಗ್ನಟೈಟ್ ಶಿಲೆಗಳು ಸಿಗುತ್ತವೆ. ತಾಲೋಕಿನಲ್ಲಿ ದೊಡ್ಡ ಪ್ರಮಾಣದ ಕೈಗಾರಿಕೆಗಳು ಕಂಡುಬರುವುದಿಲ್ಲ. ಸಣ್ಣ ಪ್ರಮಾಣದ ಕೈಗಾರಿಕೆಗಳು ಮತ್ತು ಗೃಹ ಕೈಗಾರಿಕೆಗಳು ಮಾತ್ರ ಕಂಡುಬರುತ್ತವೆ. ರೇಷ್ಮೆ ಸಾಕಾಣಿಕ ಕೇಂದ್ರಗಳಿವೆ. ರಾಗಿ, ಭತ್ತದ ಗಿರಣಿಗಳು, ಕಬ್ಬು ಹರೆಯುವ ಆಲೆಮನೆಗಳು, ಚರ್ಮ ಹದಮಾಡುವ ಪಾದರಕ್ಷೆ ತಯಾರಿಕಾ ಕೇಂದ್ರಗಳಿವೆ.

ಹಲಗೂರು ಹೋಬಳಿಯು ಹೆಚ್ಚಾಗಿ ಮಳೆ ಆಶ್ರಯದಿಂದ ಕೂಡಿರುವ ಭೂಪ್ರದೇಶವಾಗಿದೆ. ಕಸಬಾ ಹೋಬಳಿಯು ಪೂರ್ಣ ನೀರಾವಾರಿಯನ್ನು ಹೊಂದಿದೆ. ಮಳವಳ್ಳಿ ಪಟ್ಟಣವೂ ನಗರ ಪ್ರದೇಶವಾಗಿದ್ದು ಇಲ್ಲಿಯ ಜನರು ಹಳ್ಳಿ ಮತ್ತು ನಗರ ಎರಡರ ಬದುಕಿಗೂ ಹೊಂದಿಕೊಂಡಿದ್ದಾರೆ. ಎರಡು ಮುಖ್ಯ ಕೆರೆಗಳಾದ ಮಾರಳ್ಳಿಕೆರೆ, ಮಳವಳ್ಳಿ ಕೆರೆಗಳು ಇಂದಿಗೂ ರೈತರ ಜೀವನಾಡಿಗಳಾಗಿವೆ. ಪಟ್ಟಣದ ಜನರೂ ಇಂದಿಗೂ ವ್ಯವಸಾಯವನ್ನೆ ನಂಬಿಕೊಂಡು ಬದುಕುತಿದ್ದಾರೆ. ಬಿ.ಜಿ.ಪುರ ಹೋಬಳಿಯು ಅರ್ಧ ಭಾಗ ನೀರಾವರಿಯನ್ನು ಹೊಂದಿದ್ದರೆ, ಉಳಿದರ್ಧ ಭಾಗ ಮಳೆಯಾಶ್ರಯಿತ ಭೂಮಿಯಾಗಿದೆ. ಈ ತಾಲೋಕಿನಲ್ಲಿ ಬಹಳಷ್ಟು ಜನರು ಮಳೆ ಮತ್ತು ಕಾವೇರಿಯನ್ನೆ ನಂಬಿಕೊಂಡಿರದೆ ಕೊಳವೆಬಾವಿಗಳನ್ನು ತೆಗೆಸಿಕೊಂಡು ವ್ಯವಸಾಯವನ್ನು ಮಾಡುತ್ತಿದ್ದಾರೆ.

ಕಿರುಗಾವಲು ಹೋಬಳಿಯಲ್ಲಿ ಕೂಡ ಜನರು ಅರ್ಧ ಮಳೆಯಾಶ್ರಯವನ್ನು ಹೊಂದಿದ್ದರೆ, ಉಳಿದರ್ಧ ಭಾಗ ಕಾವೇರಿ ನೀರಾವರಿ ಸೌಲಭ್ಯವನ್ನು ಪಡೆಯುತ್ತಿರುವುದನ್ನು ಕಾಣಬಹುದು. ಈ ರೀತಿಯಾಗಿ ಈ ತಾಲೋಕಿನ ಜನರು ವ್ಯವಸಾಯ ಮಾಡಿ ತಮ್ಮ ಬದುಕನ್ನು ಸಾಗಿಸುತ್ತಿರುವುದನ್ನು ಕಾಣಬಹುದು.

ಈ ತಾಲೋಕಿನ ಅರಣ್ಯ ಪ್ರದೇಶವು ಗಾಳಿಯ ಒತ್ತಡವನ್ನು ತಡೆದು ಮಳೆಯನ್ನು ತರುತ್ತದೆ. ಇದರಿಂದ ಭೂಮಿಯು ತೇವಾಂಶದಿಂದ ಕೂಡಿರಲು ಸಹಾಯಕವಾಗುತ್ತದೆ. ಈ ತಾಲೋಕಿನ ಪೂರ್ವ ಮತ್ತು ಪಶ್ಚಿಮ ಭಾಗಗಳು ಕಾವೇರಿ ನದಿಯ ಮೈದಾನ ಪ್ರದೇಶವಾಗಿದ್ದು, ನದಿಯು ಹರಿಯುವ ಉದ್ದಕ್ಕೂ ಗಿಡ, ಮರಗಳು, ಕಾಡು ಪ್ರದೇಶ ಕಂಡುಬರುತ್ತದೆ. ದಟ್ಟವಾದ ಕಾಡು ಹೆಚ್ಚಾಗಿ ಕಂಡುಬರುವುದಿಲ್ಲ. ಮುತ್ತತ್ತಿ ಕಾಡು, ಬಸವನಬೆಟ್ಟದ ಕಾಡು, ಶಿಂಷಾ ಕಾಡು, ಕುಂದೂರು ಬೆಟ್ಟದ ಕಾಡು, ದೇವರ ಬೆಟ್ಟದ ಕಾಡು ಪ್ರಮುಖವಾದ ಅರಣ್ಯಪ್ರದೇಶವಾಗಿದೆ. ಒಟ್ಟು ಈ ತಾಲೋಕಿನ ಭೂಮಿಯಲ್ಲಿ ೧೨೧೮ ಹೆಕ್ಟರ್ ಪ್ರದೇಶವು

ದಟ್ಟವಾದ ಅರಣ್ಯಪ್ರದೇಶವಾಗಿದೆ. ಮೈದಾನದ ಪ್ರದೇಶವನ್ನೆಲ್ಲ ವ್ಯವಸಾಯಕ್ಕೆ ಉಪಯೋಗಿಸಿಕೊಂಡಿರುವುದರ ಜೊತೆಗೆ ಅರಣ್ಯಗಳು, ಗುಡ್ಡಗಾಡುಗಳನ್ನು ಆಕ್ರಮಿಸಿಕೊಂಡಿದೆ.

ಕಾವೇರಿ ನದಿಯ ಅಂಚಿನ ಕಾಡುಗಳಲ್ಲಿ ಚಿರತೆ, ಹಂದಿ, ಆನೆ, ಕಾಡುನಾಯಿ, ನರಿ, ಮುಳ್ಳಂದಿ, ಜಿಂಕೆ, ಮೊಲ, ನವಿಲು, ಹುಲಿ, ಹೆಬ್ಬಾವು, ಕರಡಿ, ಕಾಡುಕೋಳಿ ಮುಂತಾದ ಪ್ರಾಣಿ ಪಕ್ಷಿಗಳನ್ನು ಕಾಣಬಹುದು. ಪ್ರಾಣಿಗಳಷ್ಟೆ ಅಲ್ಲದೆ ಬೆಲೆಬಾಳುವ ಶ್ರೀಗಂಧ, ತೇಗ, ಹೊನ್ನೆ, ಸಿಲ್ವರ್, ಮತ್ತೀ ಮರಗಳು ಸಹ ಇವೆ. ಇದರ ಜೊತೆಗೆ ಈ ಪ್ರದೇಶದ ಕಾಡಿನಲ್ಲಿ ಔಷದ ಗಿಡಮೂಲಿಕೆ ಮರ, ಬಳ್ಳಿ, ಗಿಡ, ಸೊಪ್ಪುಗಳನ್ನು ಹೊಂದಿವೆ.

೨೦೦೧ರ ಜನಗಣತಿಯ ಪ್ರಕಾರ ಮಳವಳ್ಳಿ ತಾಲೋಕಿನ ಜನಸಾಂದ್ರತೆ ಪ್ರತಿ ಚದುರ ಕಿ.ಮೀ.೩೪೭ ಜನರು ವಾಸಮಾಡುವುದನ್ನು ಕಾಣಬಹುದು. ಒಟ್ಟು ವಿಸ್ತೀರ್ಣ ೮೧೦ ಚ.ಮೀ.ಹೊಂದಿರುತ್ತದೆ.

ಮಳವಳ್ಳಿಯ ಪ್ರೇಕ್ಷಣಿಯ ಸ್ಥಳಗಳೆಂದರೆ ಮುತ್ತತ್ತಿ, ಶಿವನಸಮುದ್ರ, ಶಿಂಷಾಪುರ, ಅಂತರಹಳ್ಳಿ ಬೆಟ್ಟ, ಬಸವನಬೆಟ್ಟಗಳು ಪ್ರಮುಖವಾದವು. ಹೀಗೆ ಮಳವಳ್ಳಿ ತಾಲೋಕಿನ ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆಯ ವಿಚಾರಗಳು ಕಂಡು ಬರುತ್ತವೆ.

೨೦೦೧ರ ಗಣತಿಯಂತೆ ಮಳವಳ್ಳಿ ತಾಲೋಕಿನ ಸಾಮಾನ್ಯ ಮಾಹಿತಿಯನ್ನು ಈ ಕೆಳಕಂಡಂತೆ ನೋಡಬಹುದು. ಈ ಮಾಹಿತಿಯು ಮಂಡ್ಯ ಜಿಲ್ಲೆಯ ಗ್ಯಾಸೆಟಿಯರ್‌ನಲ್ಲಿ ನೀಡಲಾಗಿರುವ ಮಾಹಿತಿಯನ್ನು ಆಧರಿಸಿ ನೀಡಲಾಗಿರುವುದು.

| | |
|---|---|
| ಒಟ್ಟು ವಿಸ್ತೀರ್ಣ | ೮೧೦ ಚ.ಮೀ |
| ಒಟ್ಟು ಜನಸಂಖ್ಯೆ | ೨೮೧೮೦೯ |
| ಹಳ್ಳಿಗಳು ಮತ್ತು ಅರೆ ಪಟ್ಟಣವಾಸಿಗಳು | ೨೪೯೬೮ |
| ಒಟ್ಟು ಗ್ರಾಮಗಳು | ೧೮೭ |
| ಪಟ್ಟಣ ವಾಸಿಗಳು | ೩೬೮೬೧ |
| ಪರಿಶಿಷ್ಟ ಜಾತಿ | ೬೩೮೩೭ |
| ಪರಿಶಿಷ್ಟ ಪಂಗಡ | ೧೬೩೮ |

| | |
|---|---|
| ಹೆಂಗಸರ ಸಂಖ್ಯೆ | ೧೩೮೨೮೭ |
| ಗಂಡಸರ ಸಂಖ್ಯೆ | ೧೪೩೪೨೨ |
| ಜನ ಸಾಂದ್ರತೆ | ೩೪೭ |
| ಲೈಂಗಿಕ ಪ್ರಮಾಣ | ೯೬೫ |
| ಹೋಬಳಿಗಳು | ೦೪ |
| ಗ್ರಾಮ ಪಂಚಾಯಿತಿಗಳು | ೩೯ |
| ಸಾಕ್ಷರತೆಯ ಪ್ರಮಾಣ | ೫೫.೭ |
| ಹೆಣ್ಣು ಮಕ್ಕಳ ಸಾಕ್ಷರತೆ ಪ್ರಮಾಣ | ೪೬.೯ |
| ಗಂಡು ಮಕ್ಕಳ ಸಾಕ್ಷರತೆಯ ಪ್ರಮಾಣ | ೬೪.೨ |
| ಭೌಗೋಳಿಕ ವಿಸ್ತೀರ್ಣ ಹೆಕ್ಟೇರ್‌ಗಳಲ್ಲಿ | ೮೦೯೪೯ |

## ೧.೬. ಮಳವಳ್ಳಿಯ ಭಾಷಿಕ ಹಿನ್ನಲೆ

ಮಳವಳ್ಳಿಯು ಪ್ರಾದೇಶಿಕವಾಗಿ, ಚಾರಿತ್ರಿಕವಾಗಿ, ಭೌಗೋಳಿಕವಾಗಿ ಹೇಗೆ ವಿಶಿಷ್ಟವಾದುದೊ ಅದೇ ರೀತಿ ಭಾಷಿಕವಾಗಿಯು ಬಹಳ ವಿಶಿಷ್ಟವಾದ ಪ್ರದೇಶವಾಗಿದೆ. ಈ ತಾಲೋಕಿನಲ್ಲಿ ಬಳಸುವ ಭಾಷೆ ದ್ರಾವಿಡ ಮೂಲದ ಭಾಷಾ ಲಕ್ಷಣಗಳನ್ನು ಇಂದಿಗೂ ಉಳಿಸಿಕೊಂಡಿರುವುದು ಈ ಭಾಷೆಯ ವಿಶೇಷ.

ಒಂದು ಭಾಷೆಯು ಆ ಪ್ರದೇಶದ ಜನರಾಡುವ ಮಾತಿನ ಮೂಲಕ ಅದು ಉಳಿದುಕೊಂಡು ಬಂದಿರುತ್ತದೆ. ಅದು ಆ ಭಾಷೆಯ ಚರಿತ್ರೆಯನ್ನು, ಅದರ ಮಹತ್ವವನ್ನು ತಿಳಿಸುತ್ತದೆ. ಮೌಖಿಕವಾಗಿ ಚರಿತ್ರೆ ಆಯಾ ಕಾಲಘಟ್ಟದ ಜನರ ಮಾತಿನ ಮೂಲಕ ಉಳಿದಿರುತ್ತದೆ. ಅದು ಸಮಕಾಲೀನ ಮತ್ತು ಗತಕಾಲದ ಕಥನಗಳು ಉಳಿಯುವುದೆ ಜನಸಾಮಾನ್ಯರ ಮಾತಿನ ಮೂಲಕ. ಆ ಮಾತೆ ಭಾಷೆಯ ಬಹಳ ದೊಡ್ಡ ದಾಖಲೆ. ಅದು ಕಾಲದಿಂದ ಕಾಲಕ್ಕೆ, ವ್ಯಕ್ತಿಯಿಂದ ವ್ಯಕ್ತಿಗೆ, ವೃತ್ತಿಯಿಂದ ವೃತ್ತಿಗೆ ಬದಲಾಗುತ್ತಿರುತ್ತದೆ. ಅದು ಒಂದು ಭಾಷೆ, ಸಮಾಜದ, ಕಾಲಘಟ್ಟದ ಉಳಿಯುವಿಕೆಯ ಲಕ್ಷಣ. ಹಾಗೇ ಒಂದು ಸ್ಥಳದ

ಚರಿತ್ರೆಯೂ ಕೂಡ ಅಲ್ಲಿ ಜನರ ಮೂಲಕ ಅದು ಉಳಿದಿರುತ್ತದೆ, ಅದು ಅವರ ಆಚರಣೆಗಳ ಮೂಲಕ ಅವರಿಗೆ ಅರಿವಿಲ್ಲದಂತೆ ಸೇರಿಕೊಂಡಿರುತ್ತದೆ. ಇನ್ನೂ ಅನೇಕ ಅಂಶಗಳಲ್ಲೂ ಭಾಷಿಕ ಅಂಶಗಳನ್ನು ಗುರುತಿಸಬಹುದು.

ಇಂದಿಗೂ ಮಳವಳ್ಳಿ ಕನ್ನಡ ತನ್ನ ನೈಜ್ಯತೆಯನ್ನು ಸಹಜವಾಗಿಯೇ ಉಳಿಸಿಕೊಂಡಿದೆ. ಮಳವಳ್ಳಿ ಭಾಷೆಯ ಮೇಲೆ ಆಧುನಿಕ ಭಾಷೆಯ ಪ್ರಭಾವದ ನಡುವೆಯು ಅದು ಸಹಜತೆಯನ್ನು ಉಳಿಸಿಕೊಂಡಿದೆ. ಬೇರೆ ಬೇರೆ ಊರುಗಳಿಂದ, ರಾಜ್ಯಗಳಿಂದ ವಲಸೆ ಬಂದಿರುವವರು ಸಾಕಷ್ಟಿದ್ದರೂ ಅವರ ಭಾಷೆಯ ಪ್ರಭಾವ ಇಲ್ಲವೆಂದಿಲ್ಲ. ಯಾವುದೇ ಒಂದು ಭಾಷೆಯ ಬೆಳವಣಿಗೆಯ ಸಂದರ್ಭದಲ್ಲಿ ಈ ರೀತಿಯ ಪ್ರಭಾವ ಸಹಜ. ಅದು ಮಳವಳ್ಳಿಯ ಒಳನುಡಿಯ ಮೇಲು ಪ್ರಭಾವಬೀರಿದೆ.

ಮಳವಳ್ಳಿ ಕನ್ನಡದಲ್ಲಿ ಮೂಲ ದ್ರಾವಿಡ ಭಾಷೆಯಲ್ಲಿ ಬಳಕೆಯಲ್ಲಿದ್ದ ೧೦ ಸ್ವರಗಳನ್ನು ಮಳವಳ್ಳಿ ಕನ್ನಡ ಉಳಿಸಿಕೊಂಡಿದೆ. ವ್ಯಂಜನಗಳಲ್ಲಿ ಬದಲಾವಣೆಯಾಗಿರುವುದನ್ನು ಕಾಣಬಹುದು. ಮೂಲ ದ್ರಾವಿಡ ಭಾಷೆಯಲ್ಲಿದ್ದ ವ್ಯಂಜನಗಳ ಜೊತೆಗೆ ಮಳವಳ್ಳಿ ಪರಿಸರದಲ್ಲಿ ಬಳಕೆಯಲ್ಲಿರುವ ವ್ಯಂಜನಗಳನ್ನು ಮುಂದಿನ ಅಧ್ಯಾಯಗಳಲ್ಲಿ ಅವು ಹೇಗೆ ಬಳಕೆಗೊಂಡಿವೆ ಎಂಬುದನ್ನು ಉದಾಹರಣೆಯೊಂದಿಗೆ ಚರ್ಚಿಸಲಾಗಿದೆ.

ವ್ಯಂಜನಗಳ ಪಟ್ಟಿಯಲ್ಲಿ ಬಹಳ ವಿಶೇಷವಾಗಿ ಬಳಕೆಯಲ್ಲಿರುವ ಅಕ್ಷರಗಳೆಂದರೆ **'ಚ ಮತ್ತು ಜ'** ಕಾರಗಳು ಮಳವಳ್ಳಿ ಕನ್ನಡದಲ್ಲಿ ಬಳಕೆಯಲ್ಲಿರುವುದನ್ನು ಕಾಣಬಹುದು. ಮಳವಳ್ಳಿ ಕನ್ನಡದಲ್ಲಿ ಇಂದಿಗೂ **'ಹ'** ಕಾರ ಬಳಕೆಯಾಗುವುದಿಲ್ಲ.

ಮಳವಳ್ಳಿ ಕನ್ನಡವು ಯಾವ ರೀತಿಯಾಗಿ ಭಾಷಾ ವೈಶಿಷ್ಟ್ಯತೆಯನ್ನು ಉಳಿಸಿಕೊಂಡಿದೆ, ಕಳೆದುಕೊಂಡಿದೆ ಎನ್ನುವ ವಿಚಾರಗಳನ್ನು, ಬರಹಕನ್ನಡ, ಹಳೆಗನ್ನಡಗಳಿಗೆ ಹೋಲಿಸುವುದರ ಮೂಲಕ ಮಳವಳ್ಳಿ ಕನ್ನಡದ ಭಾಷಾ ವೈಶಿಷ್ಟ್ಯತೆಯನ್ನು ಮುಂದಿನ ಅಧ್ಯಾಯಗಳಲ್ಲಿ ಉದಾಹರಣೆಗಳ ಮೂಲಕ ವಿವರಿಸಲಾಗಿದೆ.

## ಕೊನೆ ಟಿಪ್ಪಣಿ

೧. ಮಂಡ್ಯ ಜಿಲ್ಲಾ ಗ್ಯಾಸೆಟಿಯರ್, ಕರ್ನಾಟಕ ರಾಜ್ಯ ಸರ್ಕಾರದ ಪ್ರಕಟಣೆ-೨೦೦೩, ಪುಟ-೩೫

೨. ಸುವರ್ಣ ಮಂಡ್ಯ-ಸಂ-ಡಾ.ದೇ.ಜವರೇಗೌಡ, ಪುಟ-೪೪

೩. ಮಂಡ್ಯ ಜಿಲ್ಲಾ ಗ್ಯಾಸೆಟಿಯರ್, ಕರ್ನಾಟಕ ರಾಜ್ಯ ಸರ್ಕಾರದ ಪ್ರಕಟಣೆ-೨೦೦೩, ಪುಟ-೯೫೩

೪. ಮಂಡ್ಯ ಜಿಲ್ಲೆಯ ಜಾತ್ರೆಗಳು-ಡಾ.ಜಿ.ಎ.ದಾಸೇಗೌಡ, ಪುಟ-೮೭

೫. ಮಂಡ್ಯ ಜಿಲ್ಲೆಯ ಜಾತ್ರೆಗಳು-ಡಾ.ಜಿ.ಎ.ದಾಸೇಗೌಡ, ಪುಟ-೮೭

೬. ಮಂಡ್ಯ ಜಿಲ್ಲಾ ಅಂಕಿಅಂಶಗಳ ನೋಟ, ಕರ್ನಾಟಕ ಸರ್ಕಾರ ೨೦೦೪-೨೦೦೫

೭. ಉತ್ತರ ದೇಸ ಕತ್ತಲರಾಜ್ಯ-ಡಾ.ಕೆ.ಅನ್ನದಾನಿ, ಪುಟ-೧೧

# ಅಧ್ಯಾಯ ಎರಡು

# ಇದುವರೆಗಿನ ಅಧ್ಯಯನಗಳ ಸಮೀಕ್ಷೆ

## ೨.೧. ಇದುವರೆಗಿನ ಅಧ್ಯಯನಗಳ ಸಮೀಕ್ಷೆ

ಮಳವಳ್ಳಿ ಮತ್ತು ಅದರ ಸುತ್ತ ನಡೆದಿರುವ ಅಧ್ಯಯನಗಳು ಮಳವಳ್ಳಿಯನ್ನು ಕೇಂದ್ರವಾಗಿಟ್ಟಿಕೊಂಡು ಮಾತ್ರವಲ್ಲ. ಈ ಅಧ್ಯಯನಗಳು ಇಡೀ ಮಳವಳ್ಳಿ ತಾಲೋಕನ್ನು ಅನುಲಕ್ಷಿಸಿ ಮಾಡಿರುವ ಅಧ್ಯಯನಗಳಾಗಿವೆ. ಇದುವರೆಗೂ ನೆಡೆದಿರುವ ಅಧ್ಯಯನಗಳನ್ನು ಗಮನಿಸಿದಾಗ ಇವೆಲ್ಲವೂ ಜನಪದ ನೆಲೆಯಲ್ಲಿ ನೆಡೆದಿರುವ ಅಧ್ಯಯನಗಳಾಗಿವೆ. ಈ ಅಧ್ಯಯನಗಳು ಮಳವಳ್ಳಿ ತಾಲೋಕಿನ ಸಂಸ್ಕೃತಿಯ ಭಿನ್ನ ನೆಲೆಯ ಆಯಾಮಗಳನ್ನು ಪರಿಚಯಿಸುವ ಒಂದು ಪ್ರಯತ್ನ ಅಷ್ಟೆ.

ಈ ಅಧ್ಯಾಯದಲ್ಲಿ ಮಳವಳ್ಳಿಯ ಬಗೆಗೆ ಇದುವರೆಗೂ ನಡೆದಿರುವ ಅಧ್ಯಯನಗಳ ಚರ್ಚೆಗಳಿರುತ್ತದೆ. ಇದುವರೆಗೂ ನಡೆದಿರುವ ಅಧ್ಯಯನಗಳಿಗಿಂತ ಈ ಅಧ್ಯಯನ ಹೇಗೆ ಭಿನ್ನವಾಗಿರುತ್ತದೆ ಎನ್ನುವುದರ ಬಗ್ಗೆ ವಿಶ್ಲೇಷಿಸಲಾಗುತ್ತದೆ. ಈ ದೃಷ್ಟಿಯಿಂದ ಮಳವಳ್ಳಿಯ ಸಂಸ್ಕೃತಿಯ ಬಗೆಗೆ ಯಾರ್‍ಯಾರು ಅಧ್ಯಯನ ಮಾಡಿದ್ದಾರೆ ಎಂಬುದರ ಬಗ್ಗೆ ನೋಡಬಹುದು.

ಡಾ.ಕೆ.ಅನ್ನದಾನಿ ಅವರು "ಮಳವಳ್ಳಿ ತಾಲೋಕು ಒಂದು ಜಾನಪದೀಯ ಅಧ್ಯಯನ". ಡಾ.ಸಿ.ಮಹದೇವಯ್ಯ ಅವರು "ಮಳವಳ್ಳಿ ತಾಲೋಕಿನ ಜಾತ್ರೆಗಳು: ಒಂದು ಸಾಂಸ್ಕೃತಿಕ ಅಧ್ಯಯನ". ಡಾ.ಡಿ.ಶಿವಸ್ವಾಮಿ ಅವರು "ಕಾವೇರಿ ಸೀಮೆಯ ಗ್ರಾಮದೇವತೆಗಳ ಅಧ್ಯಯನ" ಇವರೆಲ್ಲರೂ ಜಾನಪದ ನೆಲೆಯಲ್ಲೆ ಸಂಶೋಧನ ಅಧ್ಯಯನ ಕೈಗೊಂಡಿರುವುದನ್ನು ಕಾಣಬಹುದು. ಪ್ರಸ್ತುತ ಆಯ್ಕೆ ಮಾಡಿಕೊಂಡಿರುವ ವಿಷಯ ಇವರೆಲ್ಲರಿಗಿಂತ ಭಿನ್ನವಾದದ್ದು. ಏಕೆಂದರೆ ಮಳವಳ್ಳಿ ಪರಿಸರದ ಸುತ್ತಮುತ್ತಲ ವಿವಿಧ ಜಾತಿ-ಕುಲಕಸುಬು, ಸಮುದಾಯಗಳ ನುಡಿಸ್ವರೂಪ ಹೇಗೆ ಕನ್ನಡ ನುಡಿಯ ವಿಕಾಸಕ್ಕೆ ಪೂರಕವಾಗಬಲ್ಲದು ಎನ್ನುವುದನ್ನು ತಿಳಿಸುವುದು.

ಮಳವಳ್ಳಿಯನ್ನು ಕುರಿತ ಇದುವರೆಗಿನ ಅಧ್ಯಯಗಳು ಸಾಂಸ್ಕೃತಿಕ ಮತ್ತು ಜಾನಪದ ದೃಷ್ಟಿಕೋನದಿಂದ ನಡೆದಿರುವ ಅಧ್ಯಯನಗಳೆ ಆಗಿವೆ. ಈ ಅಧ್ಯಯನಗಳು ಮಳವಳ್ಳಿಯ ಸುತ್ತಣ ನಡೆಯುವ ಜಾತ್ರೆಗಳು, ಹಬ್ಬಗಳು, ಆಚರಣೆಗಳು, ವಿವಿಧ ಜಾತಿ ಮತ್ತು ಜನಾಂಗಗಳಲ್ಲಿ ಬಳಕೆಯಲ್ಲಿರುವ ಮತ್ತು ನಶಿಸಿರುವ ಸಾಂಸ್ಕೃತಿಕ ಆಚರಣೆಗಳನ್ನು ಮುಖಾಮುಖಿಗೊಳಿಸುವ

ಪ್ರಯತ್ನಗಳು ನಡೆದಿವೆ. ಈ ಅಧ್ಯಯನದಲ್ಲಿ ಜನಪದರು ಹೇಗೆ ತಮ್ಮ ನಂಬಿಕೆ, ಆಚರಣೆ, ವಿಧಿವಿಧಾನಗಳಲ್ಲಿ ತಮ್ಮ ಪ್ರಾದೇಶಿಕ ಮತ್ತು ಸಾಮಾಜಿಕ ಭಾಷಿಕ ರಚನೆಗಳನ್ನು ಉಳಿಸಿಕೊಂಡಿದ್ದಾರೆ ಎಂಬುದುನ್ನು ತಿಳಿಸಿಲಾಗುತ್ತಿದೆ.

ಆ ನಿಟ್ಟಿನಲ್ಲಿ ಡಾ.ಅನ್ನದಾನಿ ಅವರು "ಮಳವಳ್ಳಿ ತಾಲೋಕು ಒಂದು ಜಾನಪದೀಯ ಅಧ್ಯಯನ" ಎಂಬ ವಿಚಾರವನ್ನು ಕುರಿತ ಅಧ್ಯಯನ ಮಾಡಿದ್ದಾರೆ. ಇವರು ಅಧ್ಯಯನದ ಅನುಕೂಲತೆಯ ದೃಷ್ಟಿಯಿಂದ ತಮ್ಮ ವಿಷಯವನ್ನು ಏಳು ಅಧ್ಯಾಯಗಳಾಗಿ ಮಾಡಿಕೊಂಡಿದ್ದಾರೆ.

ಮೊದಲ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪಗಳ ಬಗ್ಗೆ ವಿವರಿಸುತ್ತಾರೆ. ಈ ವಿಷಯವನ್ನು ಯಾವ ರೀತಿ ಅಧ್ಯಯನಕ್ಕೆ ಒಳಪಡಿಸಲಾಗಿದೆ, ಅದರಿಂದಾದ ಅನುಭವ, ಪ್ರೇರಣೆ ನೀಡಿದ ವ್ಯಕ್ತಿಗಳು ಮತ್ತು ಘಟನೆಗಳನ್ನು ವಿವರಿಸುತ್ತಾರೆ. ಅದರೊಟ್ಟಿಗೆ ಅಧ್ಯಯನದ ವ್ಯಾಪ್ತಿ ಮತ್ತು ಸ್ವರೂಪಗಳ ಚಿತ್ರಣವನ್ನು ನೀಡಿದ್ದಾರೆ. ಮಳವಳ್ಳಿ ಪ್ರದೇಶದ ಭೌಗೋಳಿಕ ಪರಿಸರದ ವೈಶಿಷ್ಟ್ಯತೆಗಳೇನು, ಅದರ ವ್ಯಾಪ್ತಿ, ವಿಸ್ತೀರ್ಣ ಮತ್ತು ಜನಾಂಗಿಕವಾದ ವಿಚಾರಗಳನ್ನು ಗುರ್ತಿಸುವ ಪ್ರಯತ್ನ ಮಾಡಿದ್ದಾರೆ.

ಪ್ರಾದೇಶಿಕವಾಗಿ ಮಳವಳ್ಳಿ ಹೇಗೆ ವಿಶಿಷ್ಟವಾದುದು ಎಂಬುದನ್ನು ಸಾಂಸ್ಕೃತಿಕ ನೆಲೆಗಳಲ್ಲಿ ವಿವರಿಸಿದ್ದಾರೆ. ಈ ಅಧ್ಯಾಯದಲ್ಲಿ ಪುರಾಣ ಪ್ರಸಿದ್ಧರಾದ ಮಹದೇಶ್ವರ, ಮಂಟೇಸ್ವಾಮಿ, ಸಿದ್ದಪ್ಪಾಜಿ ವಿವಿಧ ಸಾಂಸ್ಕೃತಿಕ ನಾಯಕರುಗಳ ವೈಶಿಷ್ಟ್ಯತೆ ಮತ್ತು ಈ ಪರಿಸರದಲ್ಲಿ ಇವರುಗಳನ್ನು ನೋಡುವ ಕ್ರಮ ಹಾಗೂ ಈ ನಾಯಕರುಗಳು ಈ ಪ್ರದೇಶದ ಮೇಲೆ ಮತ್ತು ಇಲ್ಲಿಯ ವಿವಿಧ ಸಮುದಾಯದ ಜನಾಂಗಗಳ ಮೇಲೆ, ಅವರ ಸಂಸ್ಕೃತಿಯ ಮೇಲೆ ಬೀರಿದ ಪ್ರಭಾವವನ್ನು ವಿವರಿಸುತ್ತಾರೆ.

ಮಳವಳ್ಳಿ ಸುತ್ತಮುತ್ತಲಿನ ಪ್ರಸಿದ್ಧ ದೇವತೆಗಳು ಮತ್ತು ಅವುಗಳ ಪೌರಾಣಿಕ ಹಿನ್ನೆಲೆಯನ್ನು ವಿವರಿಸುತ್ತಾರೆ. ದೇವತೆಗಳನ್ನು ಜನಸಾಮಾನ್ಯರು ಪೂಜಿಸುವ ಕ್ರಮ, ಅದರ ಮಹತ್ವಗಳನ್ನು ತಿಳಿಸುತ್ತಾರೆ. ಜನಾಂಗಿಯ ಆಚರಣೆಗಳಲ್ಲಿ ಹೇಗೆ ಭಿನ್ನವಾಗಿದೆ ಮತ್ತು ವೈವಿಧ್ಯತೆಯಿಂದ ಕೂಡಿದೆ ಎಂಬುದನ್ನು ವಿವರಿಸುತ್ತಾರೆ. ಮಳವಳ್ಳಿ ಪರಿಸರದ ಜನಾಂಗದ ಭಾಷಿಕ ವೈಶಿಷ್ಟ್ಯತೆಯ ನೆಲೆಗಳನ್ನು ಗುರ್ತಿಸುತ್ತಾರೆ. ಕನ್ನಡ ಭಾಷೆಯಲ್ಲಿ ಮಳವಳ್ಳಿ ಭಾಷೆಯ ಬದಲಾವಣೆ ಮತ್ತು ಭಿನ್ನತೆಯನ್ನು ಗುರ್ತಿಸುವ ಪ್ರಯತ್ನ ಮಾಡಿದ್ದಾರೆ. ಜನಪದ ಹಾಡು

ಮತ್ತು ಕಾವ್ಯಗಳಲ್ಲಿ, ಹೇಗೆ ಭಾಷೆಯ ವೈಶಿಷ್ಟತೆಯನ್ನು ಉಳಿಸಿಕೊಂಡಿದ್ದಾರೆ ಎಂಬುದನ್ನು ಜನಪದ ಗಾಯಕರ ಹಾಡುಗಳನ್ನು ಅಧ್ಯಯನದ ಕೊನೆಯಲ್ಲಿ ನೀಡಿರುವುದನ್ನು ಕಾಣಬಹುದು.

ಮಳವಳ್ಳಿ ಸುತ್ತಮುತ್ತಲು ಆಚರಿಸುವ ಹಬ್ಬಗಳು, ಜಾತ್ರೆಗಳು, ಆಚರಣೆಯ ಹಿಂದಿರುವ ಹಿನ್ನೆಲೆ, ವೈಶಿಷ್ಟ್ಯತೆಗಳನ್ನು ವಿವರಿಸುತ್ತಾರೆ. ಜನಪದ ವೈದ್ಯ ಪದ್ಧತಿ ಮತ್ತು ಜನಪದರು ರೋಗ ರುಜಿನಗಳಿಂದ ಪಾರಾಗಲು ಅನುಸರಿಸುತ್ತಿದ್ದ ನಾಟಿ ವೈದ್ಯ ಪದ್ಧತಿಯ ಬಗ್ಗೆ ತಿಳಿಸುತ್ತಾರೆ. ಮಳವಳ್ಳಿ ಸುತ್ತಣ ಜನಪದ ಕ್ರೀಡೆಗಳು ಮತ್ತು ಅವುಗಳ ವೈಶಿಷ್ಟ್ಯತೆಯನ್ನು ವಿವರಿಸುತ್ತಾರೆ.

"ಮಳವಳ್ಳಿ ತಾಲೋಕಿನ ಜಾತ್ರೆಗಳು: ಒಂದು ಸಾಂಸ್ಕೃತಿಕ ಅಧ್ಯಯನ" ಎನ್ನುವ ವಿಚಾರದ ಮೇಲೆ ಸಿ.ಮಹದೇವಯ್ಯ ಅವರು ತಮ್ಮ ಸಂಶೋಧನೆಯನ್ನು ನಡೆಸಿದ್ದಾರೆ. ಇವರು ತಮ್ಮ ಅಧ್ಯಯನದ ಹಿತದೃಷ್ಟಿಯಿಂದ ಉಪಸಂಹಾರ, ಪರಾಮರ್ಶನ ಗ್ರಂಥಗಳು ಮತ್ತು ಜಾನಪದ ಹಾಡುಗಳ ಸಂಗ್ರಹವನ್ನು ಸೇರಿ ಒಟ್ಟು ಒಂಬತ್ತು ಅಧ್ಯಾಯಗಳಾಗಿ ವಿಂಗಡಿಸಿಕೊಂಡಿದ್ದಾರೆ. ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಮಹತ್ವದ ಬಗ್ಗೆ ಮೊದಲ ಅಧ್ಯಾಯದಲ್ಲಿ ವಿವರಿಸಿಕೊಳ್ಳುತ್ತಾರೆ. ಮಳವಳ್ಳಿ ತಾಲೋಕಿನ ಚಾರಿತ್ರಿಕ ಮತ್ತು ಭೌಗೋಳಿಕ ಹಿನ್ನೆಲೆಯನ್ನು ವಿವರಿಸುತ್ತಾರೆ. ಮಳವಳ್ಳಿ ಎಂಬ ಹೆಸರು ಬರಲು ಕಾರಣವಾದ ಅಂಶಗಳನ್ನು ತಿಳಿಸುತ್ತ, ಅದಕ್ಕೆ ಎದುರಾಗುವ ಸಾಕ್ಷ್ಯಗಳನ್ನು ಹಿಡಿಯುವ ಜಾಡನ್ನು ಹಿಡಿಯಲು ಪ್ರಯತ್ನಿಸಿದ್ದಾರೆ.

ಜಾತ್ರೆಗಳ ಉಗಮ ಮತ್ತು ವಿಕಾಸದ ಬಗ್ಗೆ ಎರಡನೆಯ ಅಧ್ಯಾಯದಲ್ಲಿ ವಿವರಿಸುತ್ತಾರೆ. ಜಾತ್ರೆಗಳು ಹುಟ್ಟಲು ಕಾರಣ, ಹುಟ್ಟಿಕೊಂಡ ಬಗೆ, ಅವುಗಳ ಹಿನ್ನೆಲೆಗಳನ್ನು ವಿವರಿಸುತ್ತಾರೆ. ಜಾತ್ರೆಯ ಉಗಮವನ್ನು ಕುರಿತಂತೆ ಲೇಖಕರು ನೀಡುವ ಮಾಹಿತಿ ಕರ್ನಾಟದಲ್ಲಿ ಇದರ ಆಚರಣೆಯ ಬಗ್ಗೆ ವಿವರಿಸುತ್ತಾರೆ. ನಾಲ್ಕನೆ ಅಧ್ಯಾಯದಲ್ಲಿ ಮಳವಳ್ಳಿ ತಾಲೋಕಿನ ಜಾತ್ರೆಗಳ ಪೌರಾಣಿಕ ಮತ್ತು ಐತಿಹಾಸಿಕ ಹಿನ್ನೆಲೆಯಲ್ಲಿ ಹೇಗೆ ಭಿನ್ನವಾಗಿ ಆಚರಿಸುತ್ತಾರೆ ಎನ್ನುವುದನ್ನು ವಿವರಿಸುತ್ತಾರೆ. ಜಾತ್ರೆಗಳಲ್ಲಿ ಜನರ ನಂಬಿಕೆ ಹೇಗೆ ನೆಲೆಮಾಡಿಕೊಂಡಿದೆ ಎನ್ನುವುದನ್ನು ಗುರ್ತಿಸುತ್ತಾರೆ. ಈ ಜಾತ್ರೆಗಳು ಹೇಗೆ ಆಚರಣೆಗೊಳ್ಳುತ್ತಿವೆ, ಈ ಜಾತ್ರೆಗಳು ಹೇಗೆ ಕಲೆಯ ರೂಪವನ್ನು ಪಡೆದುಕೊಂಡಿವೆ ಎನ್ನುವುದನ್ನು ವಿವರಿಸುತ್ತಾರೆ.

ಜಾತ್ರೆಗಳು ಇವತ್ತಿನ ಆಧುನಿಕ ಜಗತ್ತಿನಲ್ಲಿ ಪಡೆದುಕೊಂಡಿರುವ ರೂಪ, ಆಚರಣೆಯಲ್ಲಿ ಬದಲಾವಣೆ ಕಂಡುಕೊಂಡಿರುವ ಆಯಾಮಗಳನ್ನು ವಿವರಿಸುತ್ತಾರೆ. ಇವತ್ತಿನ ದಿನಗಳಲ್ಲಿ ಜಾತ್ರೆಗಳ ಸ್ಥಿತಿಗತಿಗಳು ಯಾವ ಮಟ್ಟಕ್ಕೆ ತಲುಪಿವೆ ಎನ್ನುವುದನ್ನು ತಿಳಿಸುತ್ತಾರೆ.

"ಕಾವೇರಿ ಸೀಮೆಯ ಗ್ರಾಮದೇವತೆಗಳ ಅಧ್ಯಯನ" ಎನ್ನುವ ವಿಚಾರವನ್ನು ಡಾ.ಡಿ.ಶಿವಸ್ವಾಮಿ ಅವರು ತಮ್ಮ ಪ್ರಬಂಧವನ್ನು ಮಂಡಿಸಿದ್ದಾರೆ. ಇವರು ಉಪಸಂಹಾರವನ್ನು ಒಳಗೊಂಡಂತೆ ಒಟ್ಟು ಏಳು ಅಧ್ಯಾಯಗಳಾಗಿ ಮಾಡಿಕೊಂಡು ಮಳವಳ್ಳಿ ಗ್ರಾಮದೇವತೆಗಳ ಬಗ್ಗೆ ಅಧ್ಯಯನ ಮಾಡಿದ್ದಾರೆ.

ಮೊದಲ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿಯನ್ನು ಗುರ್ತಿಸಿಕೊಳ್ಳುತ್ತಾರೆ. ತಮ್ಮ ಅಧ್ಯಯನದ ಉದ್ದೇಶವೇನು, ಏಕೆ ಈ ವಿಷಯವನ್ನು ಸಂಶೋಧನ ಅಧ್ಯಯನದ ವಸ್ತುವಾಗಿಸಿಕೊಳ್ಳಲಾಗಿದೆ ಎಂಬ ಇತ್ಯಾದಿ ಅಂಶಗಳ ಬಗ್ಗೆ ವಿವರಿಸಿದ್ದಾರೆ. ಮಳವಳ್ಳಿ ತಾಲೋಕಿನ ಭೌಗೋಳಿಕ ಹಾಗೂ ಚಾರಿತ್ರಿಕ ಸಮೀಕ್ಷೆಯನ್ನು ಗುರ್ತಿಸಿಕೊಂಡು ಹೇಗೆ ಮಳವಳ್ಳಿಯು ಭೌಗೋಳಿಕವಾಗಿ ತನ್ನದೆ ಆದ ವಿಶೇಷತೆಯನ್ನು ಹೊಂದಿದೆ ಎಂದು ವಿವರಿಸುತ್ತಾರೆ. ಚಾರಿತ್ರಿಕವಾಗಿ ಮಳವಳ್ಳಿ ಹೇಗೆ ತನ್ನ ಅಸ್ಮಿತೆಯನ್ನು ಕಾಯ್ದುಕೊಂಡಿದೆ ಹಾಗೂ ಚರಿತ್ರೆಯು ಮಳವಳ್ಳಿಯ ಬಗ್ಗೆ ಯಾವ ಯಾವ ಅಂಶಗಳನ್ನು ತಿಳಿಸುತ್ತದೆ ಎಂಬ ಅಂಶಗಳನ್ನು ವಿವರಿಸುತ್ತಾರೆ.

ಗ್ರಾಮದೇವತೆಗಳ ಉಗಮ ಮತ್ತು ವಿಕಾಸವನ್ನು ಮೂರನೆ ಅಧ್ಯಾಯದಲ್ಲಿ ತಿಳಿಸುತ್ತಾ, ಅದರ ವಿಭಿನ್ನತೆಯನ್ನು ಮತ್ತು ಅವುಗಳಿಗೆ ಕಾರಣವಾದ ಅಂಶಗಳನ್ನು ವಿವರಿಸುತ್ತಾರೆ. ಗ್ರಾಮದೇವತೆಗಳು ಜನ ಸಾಮಾನ್ಯರ ಬದುಕಿನ ಅವಿಭಾಜ್ಯವಾಗಿ ಹೇಗೆ ಮಹತ್ವವನ್ನು ಪಡೆದುಕೊಂಡಿದ್ದವು ಎಂಬ ವಿಚಾರಗಳ ಬಗ್ಗೆ ವಿವರಿಸಿಕೊಳ್ಳುತ್ತಾರೆ. ಗ್ರಾಮದೇವತೆಗಳು ಜನಪದರಲ್ಲಿ ಉಂಟುಮಾಡಿರುವ ನಂಬಿಕೆಯ ವಿಚಾರಗಳನ್ನು ತಿಳಿಸುತ್ತಾರೆ. ನಂತರ ಗ್ರಾಮದೇವತೆಗಳ ವರ್ಗೀಕರಣವನ್ನು ಮಾಡಿಕೊಂಡು ಅವುಗಳು ವಿವಿಧ ದೇವತೆಗಳಾಗಿ ವಿಭಿನ್ನತೆಯನ್ನು ಪಡೆದುಕೊಳ್ಳಲು ಕಾರಣವಾದ ಅಂಶಗಳನ್ನು ವಿವರಿಸುತ್ತಾರೆ. ಗ್ರಾಮದೇವತೆಗಳಲ್ಲಿ ಏಕೆ ಈ ರೀತಿ ಬೇರೆ ಬೇರೆ ಜಾತಿ, ವರ್ಗಗಳಲ್ಲಿ ವಿಭಿನ್ನತೆಯನ್ನು ಪಡೆದುಕೊಳ್ಳಲು ಕಾರಣವಾದ ಅಂಶಗಳನ್ನು ವಿವರಿಸುತ್ತಾರೆ. ಜನಪದರು ತಮ್ಮ ಇಷ್ಟದೇವತೆಗಳಿಗೆ ಹರಕೆ ಕಟ್ಟಿಕೊಳ್ಳುವ ಸಂಪ್ರದಾಯ ಮತ್ತು ಆಚರಣೆಗಳ ಬಗ್ಗೆ ವಿವರಿಸುತ್ತಾರೆ.

ಪ್ರಸ್ತುತ ಗ್ರಾಮದೇವತೆಗಳು ಪಡೆದುಕೊಂಡಿರುವ ರೂಪಾಂತರಗಳು ಮತ್ತು ಆಚರಣೆಗಳಲ್ಲಿ ಆಗಿರುವ ಬದಲಾವಣೆಗಳನ್ನು ವಿವರಿಸುತ್ತಾರೆ. ಆಧುನಿಕ ಜಗತ್ತಿನಲ್ಲಿ ಈ ಆಚರಣೆಗಳು ಮತ್ತು ಗ್ರಾಮದೇವತೆಯ ಹಬ್ಬಗಳು ಯಾಕೆ ಬದಲಾಗಿವೆ, ಅದಕ್ಕೆ ಕಾರಣಗಳನ್ನು ಗುರ್ತಿಸುತ್ತಾರೆ.

ಸಿ.ಎಮ್.ಪರಶಿವಪ್ಪನವರ "ಮಳವಳ್ಳಿ ತಾಲ್ಲೋಕಿನ ಜನಪದ ಪುರಾಣ ಮತ್ತು ಐತಿಹ್ಯಗಳು ಒಂದು ಸಾಂಸ್ಕೃತಿಕ ಅಧ್ಯಯನ" ಎಂಬ ಸಂಶೋಧನೆಯನ್ನು ಮಾಡಲಾಗಿದ್ದು. ಮೊದಲ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿಯನ್ನು ವಿವರಿಸಿದ್ದಾರೆ. ಉಳಿದ ಅಧ್ಯಾಯಗಳಲ್ಲಿ ಮಳವಳ್ಳಿ ತಾಲೊಕಿನ ಜನಪದ ಪುರಾಣ ಮತ್ತು ಐತಿಹ್ಯಗಳನ್ನು ಕುರಿತು ವಿವಿಧ ಅಧ್ಯಾಯಗಳಲ್ಲಿ ವಿವರಿಸಿದ್ದಾರೆ.

"ಕಾವೇರಿ ತೀರದ ಸಾಂಸ್ಕೃತಿಕ ಅಧ್ಯಯನ"- ಎನ್ನುವ ವಿಚಾರದಲ್ಲಿ ಸಂಶೋಧನೆ ನಡೆಸಿರುವ ಕೆ.ವಿ.ರಾಮಕೃಷ್ಣೇಗೌಡ ಅವರು ಮಳವಳ್ಳಿ ತಾಲೋಕನ್ನು ಕಾವೇರಿ ಸೀಮೆ ಎನ್ನುವ ಭೌಗೋಳಿಕ ವಿಚಾರದೊಂದಿಗೆ ಸಂಶೋಧನೆ ನಡೆಸಿದ್ದಾರೆ. ಇದು ಕೂಡ ಸಾಂಸ್ಕೃತಿಕ ಅಧ್ಯಯನವಾಗಿದ್ದು ಜನಪದ ಅಂಶಗಳಿಂದಾಚೆನೆ ವಿಷಯ ವಿವರಗಳು ಇಲ್ಲದಿರುವುದನ್ನು ಗಮನಿಸಬಹುದು.

ಈ ರೀತಿಯಾಗಿ ಮಳವಳ್ಳಿಯನ್ನು ಕುರಿತಾದ ಜಾನಪದೀಯ ಅಧ್ಯಯನ ಕ್ರಮಗಳನ್ನು ಕಾಣಬಹುದು. ಐದು ಲೇಖಕರ ಅಧ್ಯಯನಗಳನ್ನು ಗಮನಿಸಿದರೆ ಎಲ್ಲರು ಜನಪದಕ್ಕೆ ಸಂಬಂಧಿಸಿದಂತೆ ಮಾಡಿರುವ ಅಧ್ಯಯನಗಳಲ್ಲಿ ವಿಷಯಗಳ ಪುನರ್ ಬಳಕೆಗಳನ್ನು ಕಾಣಬಹುದು. ವಿಷಯಗಳು ಬೇರೆ ಬೇರಾದರು ಕ್ಷೇತ್ರ ಒಂದೆ ಆಗಿದೆ. ವಿಚಾರಗಳನ್ನು ವಿವರಿಸುವಾಗ ಲೇಖಕರು ಸಾಂಸ್ಕೃತಿಕ ಹಿನ್ನೆಲೆಗೆ ಹೆಚ್ಚು ಮನ್ನಣೆ ನೀಡಿದ್ದಾರೆ. ಸಾಂಸ್ಕೃತಿಕ ಅಧ್ಯಯನದ ಜೊತೆಗೆ ಲೇಖಕರು ಕಂಡುಕೊಂಡ ಅಂಶಗಳು ಮತ್ತು ಅನುಭವಗಳಿಂದಾದ ಭಿನ್ನ ಫಲಿತಗಳ ಬಗ್ಗೆ ವಿವರಿಸುವ ಸಾಧ್ಯತೆಗಳ ಪ್ರಯತ್ನಗಳ ಬಗ್ಗೆ ಗಮನಹರಿಸಬಹುದಿತ್ತೇನೋ?. ಜನಪದರು ಆಚರಿಸುವ ಆಚರಣೆಗಳಲ್ಲಿ ಬಳಸುವ ಭಾಷಿಕ ಅಂಶಗಳನ್ನು ಈ ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಳ್ಳಲಾಗಿದೆ. ಭಾಷೆಯು ಜನರ ಆಚರಣೆಗಳಲ್ಲಿ, ವಿಧಿ ವಿಧಾನಗಳಲ್ಲಿ, ನಂಬಿಕೆಗಳಲ್ಲಿ ಬಳಸುವ ಸಂದರ್ಭ ಬಹಳ ಭಿನ್ನ ನೆಲೆಯದಾಗಿರುತ್ತದೆ. ಆ ಭಿನ್ನ ನೆಲೆಯ ಭಾಷಿಕ ಅಂಶಗಳು ಈ ಅಧ್ಯಯನದ ಅಂಶಗಳಾಗಿವೆ.

ಜನಪದರು ಬಳಸುವ ಗಾದೆ, ಒಗಟು, ಜನಪದ ಹಾಡು, ವೈದ್ಯ ಪದ್ಧತಿ, ಪರಂಪರೆಯಿಂದ ಕಟ್ಟಿಕೊಂಡುಬಂದಿರುವ ನಂಬಿಕೆಗಳ ಬಗ್ಗೆ ಈ ಮೇಲಿನ ಅಧ್ಯಯನಗಳು ತಿಳಿಸುವುತ್ತವೆ. ಈ ಅಧ್ಯಯನಗಳಲ್ಲಿ ತಿಳಿಸಲಾಗಿರುವ ಜನಪದ ಮೂಲದ ವಿಚಾರಗಳಲ್ಲಿ ಬಳಸಿರುವ ಭಾಷಿಕ ಅಂಶಗಳನ್ನು ಗುರುತಿಸಿ ಅವುಗಳನ್ನು ಈ ಅಧ್ಯಯನಕ್ಕೆ ಪೂರಕವಾಗಿ ಬಳಸಲಾಗಿದೆ.

ಈಗಿನ ಅಧ್ಯಯನ ಭಾಷಾವಿಜ್ಞಾನಕ್ಕೆ ಸಂಬಂಧಿಸಿದ ವಿಷಯವಾಗಿದೆ. ಮಳವಳ್ಳಿ ಪರಿಸರದ ಜನರು ಬಳಸುವ ಭಾಷಿಕ ಕ್ರಮ ಹೇಗೆ ಕನ್ನಡ ಭಾಷೆಯಲ್ಲಿ ಮಹತ್ವವನ್ನು ಪಡೆದುಕೊಂಡಿದೆ ಎಂಬುದನ್ನು ವಿಶ್ಲೇಷಣೆಗೊಳಪಡಿಸುವುದೆ ಮುಖ್ಯವಾದುದು. ಕನ್ನಡ ಬಾಷಿಕ ರಚನೆಗೆ ಮಳವಳ್ಳಿ ಕನ್ನಡ ಹೇಗೆ ಪ್ರಾಚೀನತೆಯ ಅಂಶಗಳನ್ನು ಗುರ್ತಿಸಲು ಅನುವುಮಾಡಿಕೊಟ್ಟಿದೆ ಎನ್ನುವುದನ್ನು ಗುರ್ತಿಸುವುದು.

ಕನ್ನಡದಲ್ಲಿ ಅನೇಕ ಒಳನುಡಿಗಳಿವೆ, ಆ ರೀತಿಯಲ್ಲಿ ನಾನು ಆಯ್ಕೆ ಮಾಡಿಕೊಂಡಿರುವ ವಿಚಾರವು ಕನ್ನಡದ ಒಳನುಡಿಗೆ ಸಂಬಂಧಿಸಿದ್ದು. ಮಳವಳ್ಳಿ ಕನ್ನಡ ನುಡಿ ಹೇಗೆ ಭಾಷೆಯಲ್ಲಿ ತನ್ನತನವನ್ನು ಉಳಿಸಿಕೊಳ್ಳುತ್ತಿದೆ, ಉಳಿಸಿಕೊಳ್ಳಲು ಹೇಗೆ ನೆರವಾಗುತ್ತದೆ ಎಂಬುದನ್ನು ತಿಳಿಯುವ ಪ್ರಯತ್ನವೆ ಈ ಅಧ್ಯಯನದ ಮುಖ್ಯ ಗುರಿ. ಕನ್ನಡದಲ್ಲಿರುವ ಒಳನುಡಿಗಳಿಗಿಂತ ಮಳವಳ್ಳಿ ಕನ್ನಡ ಹೇಗೆ ಭಿನ್ನ, ಏಕೆ ಭಿನ್ನ, ಅದಕ್ಕೆ ಕಾರಣಗಳೇನು ಎನ್ನುವ ಇತ್ಯಾದಿ ವಿಚಾರಗಳ ಚರ್ಚೆ ಮತ್ತು ವಿಶ್ಲೇಷಣ ಅಧ್ಯಯನವೆ ಬಹಳ ಮುಖ್ಯವಾಗಿ ಆಗಬೇಕಿರುವ ಕೆಲಸ. ಈ ನಿಟ್ಟಿನಲ್ಲಿ ಒಳನುಡಿಗಳು ಇವತ್ತು ಕನ್ನಡ ಭಾಷೆಯನ್ನು ಜೀವಂತವಾಗಿಟ್ಟಿವೆ ಎಂದರೆ ತಪ್ಪಾಗಲಾರದು.

ಅದೇ ರೀತಿ ಕನ್ನಡ ಬರಹಕ್ಕೆ ಒಂದು ಕಾಲವನ್ನು ಗುರ್ತಿಸಲಾಗಿದೆ. ಆ ರೀತಿ ಗುರುತು ಮಾಡಲು ಬರಹದ ಮೊರೆಹೋಗಲಾಗಿದೆ. ಬರಹಕ್ಕಿಂತಲೂ ಮಾತು ತುಂಬ ಹಳೆಯದು ಎನ್ನುವುದು ಎಲ್ಲರಿಗೂ ತಿಳಿದ ವಿಚಾರ. ಮಳವಳ್ಳಿಯಲ್ಲಿ ಬಳಸುವ ಮಾತಿನಲ್ಲಿ ನಮ್ಮ ಕನ್ನಡ ಹಳೆತನಕ್ಕೆ, ನುಡಿಯ ವಿಕಾಸಕ್ಕೆ, ನುಡಿಯ ಚರಿತ್ರೆಯ ರಚನೆಗೆ ಏನೇನು ಸಿಗಬಹುದು, ಏನೆಲ್ಲ ಮಾಡಬಹುದು ಎಂಬುದನ್ನು ಬಹಳ ಮುಖ್ಯವಾಗಿ ಮಾಡಬೇಕಾಗಿದೆ. ಮಳವಳ್ಳಿ ಕನ್ನಡದ ಮೂಲಕ ಕನ್ನಡ ನುಡಿಯ ಬೆಳವಣಿಗೆಯ ಹಂತವನ್ನು ಹೇಗೆ ನೋಡಬಹುದು. ಕನ್ನಡ ಹಳೆತನದ ಚಹರೆಯನ್ನು ಇದು ಉಳಿಸಿಕೊಂಡಿದೆಯೆ ಎಂಬುದನ್ನು ಹುಡುಕುವ ಅಧ್ಯಯನವೆ ನನ್ನ ಉದ್ದೇಶ.

ಈ ಅಧ್ಯಯನಗಳನ್ನು ಗಮನಿಸಿದಾಗ ಇವೆಲ್ಲವೂ ಜನಪದ ಅಧ್ಯಯನಕ್ಕೆ ಸಂಬಂಧಿಸಿದವುಗಳು. ಪ್ರಸ್ತುತ ಅಧ್ಯಯನವು ಭಾಷಿಕ ಅಧ್ಯಯನವಾಗಿದೆ. ಮಳವಳ್ಳಿ ತಾಲೋಕನ್ನು ಅನುಲಕ್ಷಿಸಿ ಭಾಷಿಕ ಸಂಶೋಧನೆ ಎಂದರೆ ಇದೆ ಮೊದಲು ಎಂದು ಹೇಳಲು ಹರ್ಷಿಸುತ್ತೇನೆ.

# ಅಧ್ಯಾಯ ಮೂರು

# ಮಳವಳ್ಳಿ ಕನ್ನಡದ ಭಾಷಿಕ ರಚನೆ

## ೩.೧. ಮಳವಳ್ಳಿ ಕನ್ನಡ

ಮಳವಳ್ಳಿ ಪರಿಸರದಲ್ಲಿ ಬಳಸುವ ವಿವಿಧ ವರ್ಗಗಳು, ಸಮುದಾಯಗಳು ಆಡುವ ಮಾತುಗಳ ಬಗೆಗೆ ಮತ್ತು ಅವುಗಳ ಪರಿಭಾಷೆಗಳ ಅರ್ಥಗಳನ್ನು ಖಚಿತಗೊಳಿಸಿಕೊಳ್ಳುವ ಅಗತ್ಯವಿದೆ. ಯಾಕೆಂದರೆ ಭಾಷೆ ಎನ್ನುವುದು ಒಂದೇ. ಎಲ್ಲರಾಡುವುದು ಭಾಷೆಗಳೇ. ಆದರೆ ಬೇರೆ ಬೇರೆ ರೀತಿಯ ಒಳನುಡಿಗಳನ್ನು ಬಳಸಬಹುದು. ಹೀಗಾಗಿ ಇವುಗಳ ಅರ್ಥಗಳನ್ನು ಖಚಿತಪಡಿಸಿಕೊಳ್ಳುವ ಅಗತ್ಯವಿದೆ. ಜೊತೆಗೆ ಬೇರೆ ಒಳ ನುಡಿಗಳಿಗಿಂತ ಮಳವಳ್ಳಿ ನುಡಿ ಹೇಗೆ ಭಿನ್ನ ಎನ್ನುವುದನ್ನು ತಿಳಿಯಪಡಿಸುವ ಅಗತ್ಯ ಇಂದಿನ ದಿನಗಳಲ್ಲಿ ಎದುರಾಗಿದೆ.

'ಜನರು ತಮ್ಮ ಅನುಕೂಲಗಳಿಗೆ ತಕ್ಕಂತೆ ನುಡಿಯನ್ನು ರೂಪಿಸಿಕೊಂಡು ಅದನ್ನು ತಮ್ಮ ಅನನ್ಯತೆಯ ಸಂಕೇತವಾಗಿ ಭಾವಿಸಿ, ಸಾವಿರಾರು ವರ್ಷಗಳಿಂದ ಉಳಿಸಿ, ಬೆಳೆಸಿಕೊಂಡು ಬಂದಿದ್ದಾರೆ. ಇದನ್ನೇ ಜನಭಾಷೆಗಳೆಂದು ಭಾವಿಸಲಾಗಿದೆ.'[೧] ಇದು ಮುಂದುವರಿದಂತೆ ಭಾಷೆ ಎನ್ನುವುದು ತನ್ನ ವ್ಯಾಪ್ತಿಯನ್ನು ವಿಸ್ತರಿಸುತ್ತಾ ಹೊಸ ಹೊಸ ಆವಿಷ್ಕಾರವನ್ನು ಪಡೆದುಕೊಂಡಂತೆ, ಭಾಷೆಯಲ್ಲಿ ಜನ ಬಳಸುವ ಕ್ರಮ, ಧ್ವನಿ, ಪದ, ರಚನೆ ಮತ್ತು ಶೈಲಿಗಳಲ್ಲಿ ಭಿನ್ನತೆ ಪಡೆದುಕೊಳ್ಳುತ್ತಾ ಸಾಗಿತು. ಹಾಗೆಯೇ ಇದು ಒಂದೊಂದು ಪ್ರದೇಶಕ್ಕೆ, ಒಂದೊಂದು ವರ್ಗಕ್ಕೆ, ಒಂದೊಂದು ವೃತ್ತಿಗನುಸಾರವಾಗಿ ಭಾಷಾ ಬಳಕೆ ಇರುವುದನ್ನು ಕಾಣಬಹುದು. ಅದೇ ರೀತಿಯ ಕ್ರಮಗಳು ಭಾಷೆಯ ಬೆಳವಣಿಗೆಯಲ್ಲಿ ಸೇರದೆ ಅವುಗಳು ಅಲ್ಲೆ, ಅದೇ ಜನಾಂಗಗಳಲ್ಲಿ, ಅದೇ ಪ್ರಾಂತ್ಯಗಳಲ್ಲಿ ಉಳಿಯುವಂತಾಯಿತು. ಇದರಿಂದ ಭಾಷಾ ಬೆಳವಣಿಗೆಗೆ ತೊಡಕನೊಡ್ಡಿದೆ.

'ಭಾಷೆ ಎನ್ನುವುದು ಭಾವನಾತ್ಮಕ ವಿಚಾರವಲ್ಲ. ಅದು ಮಾನವನ ದಿನನಿತ್ಯದ ಬದುಕಿನೊಟ್ಟಿಗೆ ಸೇರಿಕೊಂಡಿರುತ್ತದೆ. ಅವನ ನಿತ್ಯ ಕೆಲಸಗಳೊಂದಿಗೆ ಸಂಬಂಧವನ್ನ ಹೊಂದಿರುತ್ತದೆ ಎನ್ನುವುದು ಇಲ್ಲಿಯ ಮುಖ್ಯ ಚರ್ಚೆ. ಯಾವ ಸಮುದಾಯದ ಬದುಕು ಸ್ವತಂತ್ರ ಮತ್ತು ಸ್ವಾವಲಂಭಿಯಾಗಿ ಸಾಗುತ್ತಿದೆಯೋ ಅಂತಹ ಸಮುದಾಯದ ಭಾಷೆಯೂ ಕೂಡ ನಿರಾತಂಕವಾಗಿ ಬಳಕೆಯಾಗುತ್ತಿರುತ್ತದೆ. ಇಲ್ಲದಿದ್ದರೆ ಆ ಭಾಷೆ ತನ್ನ ಅಸ್ತಿತ್ವವನ್ನೆ ಕಳೆದುಕೊಳ್ಳುತ್ತದೆ. ಜನರಾಡುವ ಭಾಷೆ, ಬಳಸುವ ಕ್ರಮ ಇತ್ಯಾದಿ ವಿಚಾರಗಳನ್ನು

ಸಾಮಾಜೀಕರಣಗೊಳಿಸಿದಾಗ ಅದು ಪಡೆಯುಕೊಳ್ಳುವ ವಿಧಾನ ಯಾವ ನೆಲೆಯದು ಎಂಬುದನ್ನು ಮುಖ್ಯವಾಗಿ ಗಮನಿಸಬೇಕಾಗಿದೆ.

ಈ ಹಿನ್ನೆಲೆಯಲ್ಲಿ ಜನಭಾಷೆ ಮತ್ತು ಪಠ್ಯಭಾಷೆಗಳಲ್ಲಿನ ಸಮಸ್ಯೆಗಳನ್ನು ಹಾಗೂ ಅದರ ಚೌಕಟ್ಟಿನೊಳಗೆ ಅರ್ಥಮಾಡಿಕೊಳ್ಳುವ ಪ್ರಯತ್ನವನ್ನು ಮಾಡಬೇಕಾಗಿದೆ. ಜನಭಾಷೆ ಎನ್ನುವುದು ಚೌಕಟ್ಟನ್ನು ಮೀರಿದ ವಿಶಾಲವಾದ ಅರ್ಥವನ್ನು, ಗ್ರಹಿಕೆಯನ್ನು ಪಡೆದುಕೊಂಡಿರುತ್ತದೆ.'[೨]

ಈ ಹಿನ್ನೆಲೆಯಲ್ಲಿ ಮಳವಳ್ಳಿಯ ಜನಭಾಷೆಯ ಅರ್ಥ ಮತ್ತು ಗ್ರಹಿಕೆ ಹೇಗೆ ವಿಶಿಷ್ಟವಾದುದು ಎಂಬುದನ್ನು ಖಚಿತಪಡಿಸಿಕೊಳ್ಳುವ ಅಗತ್ಯವಿದೆ. ಮಳವಳ್ಳಿಯ ಜನರು ಬಳಸುವ ಪದಗಳ ವಿಶಿಷ್ಟತೆಯನ್ನು ಈ ಕೆಳಗಿನ ಕೆಲವು ಪದಗಳ ಮೂಲಕ ಕಾಣಬಹುದು.

| **ಮಳವಳ್ಳಿ ಕನ್ನಡ** | **ಬರಹ ಕನ್ನಡ** |
|---|---|
| ತಳಾರ್ಕೆ | ತಡವಾಗಿ / ನಿಧಾನವಾಗಿ |
| ಅರ್ಸ | ಹಗುರ / ಸಮಾಧಾನ |
| ಜಿನ | ದಿನ |
| ಚರ್ಬಿ | ಅಹಂಕಾರ / ಕೊಬ್ಬು |
| ಕಿಮಿ/ಚಿಮಿ | ಕಿವಿ |
| ಆಮು | ಹಾವು |
| ಯಳ್ಳಾಗಿ | ಹೆಚ್ಚಾಗಿ |
| ರೂಗಾಡ್ಮಾಳ | ಶವವನ್ನು ಹೂಳುವ ಜಾಗ |
| ಚಿಂಕ್ರ / ಇಂಕ್ರ | ಸ್ವಲ್ಪ |
| ಚಿಟಕಿ | ಕಿಟಕಿ |

ಮಳವಳ್ಳಿ ಪರಿಸರದ ಜನರಾಡುವ ಮಾತಿನಲ್ಲಿ ಮುಖ್ಯವಾಗಿ ಗಮನಿಸಬೇಕಾದ ಭಾಷಿಕ ಅಂಶಗಳನ್ನು ಈ ರೀತಿ ಕಾಣಬಹುದು. **'ಹ–ಅ, ಶ, ಷ – ಸ, ಒ, ಓ – ವ'** ಈ ಪರಿಸರದ ಜನರು ಇಲ್ಲಿ ಸೂಚಿಸಿರುವ ಅಕ್ಷರಗಳನ್ನು ಒಂದರ ಸ್ಥಾನದಲ್ಲಿ ಮತ್ತೊಂದನ್ನು (ಅದ್ಲು ಬದ್ಲಾಗಿ) ಉಚ್ಚರಿಸುವುದನ್ನು ಕಾಣಬಹುದು.

**ಹಕಾರ–ಅಕಾರವಾಗುವುದು**

ಮಳವಳ್ಳಿ ಕನ್ನಡದಲ್ಲಿ ಪದಾದಿಯ ಹಕಾರ ಅಕಾರವಾಗಿ ಬಳಕೆಗೊಳ್ಳುವುದು. ಅದನ್ನು ಉದಾಹರಣೆಯ ಮೂಲಕ ಕಾಣಬಹುದು.

| ಮಳವಳ್ಳಿ ಕನ್ನಡ | ಬರಹ ಕನ್ನಡ |
|---|---|
| ಆಲು | ಹಾಲು |
| ಆಮು | ಹಾವು |
| ಅಳೆಗನ್ನಡ | ಹಳೆಗನ್ನಡ |

**ಶ, ಷಕಾರಗಳು – ಸಕಾರವಾಗುವುದು**

ಮಳವಳ್ಳಿ ಕನ್ನಡದಲ್ಲಿ ಪದಾದಿಯ ಶ, ಷಕಾರಗಳು ಸಕಾರವಾಗಿ ಬಳಕೆಗೊಳ್ಳುವುದು. ಅದನ್ನು ಉದಾಹರಣೆಯ ಮೂಲಕ ಕಾಣಬಹುದು.

| ಮಳವಳ್ಳಿ ಕನ್ನಡ | ಬರಹ ಕನ್ನಡ |
|---|---|
| ಸಂಕ್ರ | ಶಂಕರ |
| ಸಡಕ್ಸರಿ | ಷಡಕ್ಷರಿ |
| ಸಂಬು | ಶಂಭು |

**ಒ, ಓಕಾರಗಳು – ವಕಾರವಾಗುವುದು**

ಮಳವಳ್ಳಿ ಕನ್ನಡದಲ್ಲಿ ಪದಾದಿಯ ಒ, ಓಕಾರಗಳು ವಕಾರವಾಗಿ ಬಳಕೆಗೊಳ್ಳುವುದು. ಅದನ್ನು ಉದಾಹರಣೆಯ ಮೂಲಕ ಕಾಣಬಹುದು.

| ಮಳವಳ್ಳಿ ಕನ್ನಡ | ಬರಹ ಕನ್ನಡ |
|---|---|
| ವಂದು | ಒಂದು |
| ವೊದ್ಗು | ಓಡು |
| ವೋಗು | ಓಗು |

ಈ ರೀತಿಯ ಅನೇಕ ಉದಾಹರಣೆಗಳನ್ನು ಗುರ್ತಿಸಬಹುದು. ಆದರೆ ಇವುಗಳು ಮಳವಳ್ಳಿ ಕನ್ನಡವನ್ನು ಗುರ್ತಿಸುವಲ್ಲಿ ಸಹಾಯಕವಾಗಬಲ್ಲವು. ಈ ರೀತಿಯಾಗಿ ಅದ್ಲು ಬದ್ಲಾಗಿ ಉಚ್ಚರಿಸುವುದು ತಪ್ಪಲ್ಲ. ಇದು ಈ ಪ್ರದೇಶದ ಜನರು ಬಳಸುವ ಭಾಷಿಕ ವೈಶಿಷ್ಟ್ಯ. ಆದರೆ ಎಷ್ಟೋ ಜನರು ಇದನ್ನು ತಪ್ಪೆಂದು ಹೇಳುತ್ತಾರೆ. ಇದಕ್ಕೆ ಕಾರಣ ಪಠ್ಯ ಹೇಳುವ ಮತ್ತು ಪ್ರತಿಪಾದಿಸುವ ಅಂಶಗಳನ್ನು ಅನುಸರಿಸಿ ಈ ರೀತಿ ಹೇಳುತ್ತಾರೆ. ಆದರೆ ಅವರ ಹೇಳಿಕೆ ಮತ್ತು ಭಾಷೆಯ ಬಗೆಗಿನ ತಿಳುವಳಿಕೆ ಸರಿಯಾದ ಅರಿವಲ್ಲ ಎಂಬುದನ್ನು ತಿಳಿಸುವ ಅಗತ್ಯವಿದೆ. ಮಳವಳ್ಳಿ ಪರಿಸರದ ಜನರಾಡುವ ಮಾತಿನಲ್ಲಿ ಮಹಾಪ್ರಾಣಾಕ್ಷರವನ್ನು ಕಾಣಲಾಗುವುದಿಲ್ಲ.

ಈ ರೀತಿಯಾಗಿ ಮಳವಳ್ಳಿ ಕನ್ನಡ ನುಡಿಗಳು ಭಾಷಿಕ ವಿಶಿಷ್ಟತೆಯನ್ನು ಅನೇಕ ಸಂದರ್ಭಗಳಲ್ಲಿ ಕಾಣಬಹುದು. ಅದು ವಾಕ್ಯಗಳಲ್ಲಿ, ಪದಗಳಲ್ಲಿ, ನಾಮಪದಗಳಲ್ಲಿ, ಸಂಬೋಧನೆಯಲ್ಲಿ, ಸಂಬಂಧವಾಚಕದಲ್ಲಿ ಇನ್ನು ಅನೇಕ ಭಾಷಿಕ ವಿಚಾರಗಳಲ್ಲಿ ಕಾಣಬಹುದು. ಇವತ್ತಿನ ಕನ್ನಡ ಸಂದರ್ಭದಲ್ಲಿ ಚೌಕಟ್ಟನ್ನು ಮೀರಿದ ಅನೇಕ ಒಳನುಡಿಗಳ ಅರ್ಥ ಮತ್ತು ಭಿನ್ನತೆಯನ್ನು ತೋರಿಸಿಕೊಡುವ ಉಪಯುಕ್ತತೆ ಇದೆ. ಇವುಗಳ ಬಳಕೆ ಮತ್ತು ಸ್ವರೂಪ ಹೇಗೆ ಕನ್ನಡ ಭಾಷೆಗೆ ಪೂರಕವಾಗಿ ನಿಲ್ಲಬಲ್ಲುದು ಎಂಬುದನ್ನು ತೋರಿಸಿಕೊಡುವ ಅಗತ್ಯ ಮತ್ತು ಅನಿವಾರ್ಯತೆ ಇದೆ. ಈ ನೆಲೆಯಲ್ಲಿ ಮಳವಳ್ಳಿ ಕನ್ನಡದ ವಿಶಿಷ್ಟತೆ ಮತ್ತು ಕನ್ನಡ ಒಳನುಡಿಗಳ ಮಹತ್ವವನ್ನು ತಿಳಿಸುವ ಪ್ರಯತ್ನ ಈ ಅಧ್ಯಯನದ ಉದ್ದೇಶವಾಗಿದೆ.

ಮಳವಳ್ಳಿ ಭಾಷೆಯಲ್ಲಿ ಜನರು ತಮಗಿಂತ ಚಿಕ್ಕವರನ್ನು ಸಂಬೋಧಿಸುವಾಗ, ಸಮಾಜದ ಕೆಳಸ್ತರದ ಜನರನ್ನು ಕುರಿತು ಸಂಬೋಧಿಸುವಾಗ ಎನ್ಜ(ರ್), ಎನ್ಜ ಎನ್ನತ್ತಾರೆ.

ಎನ್ಜ ಅಟ್ಗಿಬರ್ದೆ ಎಲ್ಲಿಗ್ಜ ವೋಗಿದ್ದೇ? ಎಂಬ ವಾಕ್ಯದಲ್ಲಿ ಎನ್ಜ ಎನ್ನುವುದು ಒಬ್ಬ ವ್ಯಕ್ತಿಯನ್ನು ಕುರಿತು ಬಳಕೆಗೊಳ್ಳುತ್ತಿರುವ ಪದವಾಗಿದೆ. ಜ ಕಾರವು ಮಳವಳ್ಳಿ ಕನ್ನಡದಲ್ಲಿ ಬಹಳ ವಿಶಿಷ್ಟವಾಗಿ ಬಹಳಕೆಗೊಳ್ಳುವುದನ್ನು ಕಾಣಬಹುದು.

ಜ, ಜ್ಯೊ, ಜೋ ಅಕ್ಷರಗಳು ಇಂದಿಗೂ ವಿಶಿಷ್ಟವಾಗಿ ಬಳಕೆಗೊಳ್ಳುವುದನ್ನು ಕಾಣಬಹುದು. ಈ ಅಕ್ಷರಗಳು ಒಬ್ಬ ವ್ಯಕ್ತಿಯನ್ನು ಕರೆಯುವಾಗ ಬಳಕೆಗೊಳ್ಳುವುದಾಗಿದೆ. ಈ ಅಕ್ಷರಗಳು 'ಅವನು, ನೀನು' ಎಂಬ ಅರ್ಥದಲ್ಲಿ ಮಳವಳ್ಳಿ ಕನ್ನಡದಲ್ಲಿ ಬಳಕೆಯಾಗುತ್ತಿರುವುದನ್ನು ಕಾಣಬಹುದು.

## ೩.೨. ಸ್ವರಗಳು

ಪ್ರಸ್ತುತ ಅಧ್ಯಾಯದಲ್ಲಿ ಮಳವಳ್ಳಿ ಕನ್ನಡದ ಧ್ವನಿ, ಧ್ವನಿ ವಿಶಿಷ್ಟತೆ, ಅವುಗಳ ರಚನೆ ವ್ಯವಸ್ಥಿತ ನಮೂನೆ ಹಾಗೂ ಪ್ರಸಾರವನ್ನು ಸ್ಥೂಲವಾಗಿ ಚರ್ಚಿಸಲಾಗಿದೆ.

ಮಳವಳ್ಳಿ ಕನ್ನಡದಲ್ಲಿ ಕಂಡುಬರುವ ಧ್ವನಿಮಾಗಳನ್ನು ನಿರ್ಧರಿಸಿ ಅವುಗಳ ಪ್ರಸಾರ ಹಾಗೂ ಉಪಧ್ವನಿಗಳನ್ನು ಇಲ್ಲಿ ವ್ಯವಸ್ಥಿತ ರೀತಿಯಲ್ಲಿ ಚರ್ಚಿಸಲಾಗಿದೆ. ಈ ಭಾಷೆಯಲ್ಲಿ ಮುಖ್ಯವಾಗಿ ಮೂರು ರೀತಿಯ ಧ್ವನಿಮಾಗಳಿವೆ. ೧. ಸ್ವರ ಧ್ವನಿಮಾ, ೨. ವ್ಯಂಜನ ಧ್ವನಿಮಾ, ೩. ಅನುನಾಸಿಕ ಧ್ವನಿಮಾ

ಮಳವಳ್ಳಿ ಕನ್ನಡದಲ್ಲಿ ಒಟ್ಟು ೧೦ ಸ್ವರ ಧ್ವನಿಮಾಗಳು ೫ ಉಪಧ್ವನಿಮಾಗಳಿದ್ದು ಅವುಗಳಲ್ಲಿ ಹ್ರಸ್ವ ೫, ಧೀರ್ಘ ೫ ಸ್ವರ ಧ್ವನಿಮಾಗಳಿವೆ. ಈ ಸ್ವರಗಳ ವ್ಯವಸ್ಥಿತ ಪಟ್ಟಿ ಈ ರೀತಿ ಇದೆ.

# ಸ್ವರಗಳ ಪಟ್ಟಿ

| ಉಚ್ಚಾರಣಾ ಸ್ಥಿತಿ | ಅಗ್ರ | | ಮಧ್ಯ | | ಪಶ್ಚ | |
|---|---|---|---|---|---|---|
| ತುಟಿ ಸ್ಥಿತಿ | ಅಗೋಳ | ಗೋಳ | ಅಗೋಳ | ಗೋಳ | ಅಗೋಳ | ಗೋಳ |
| ಹ್ರಸ್ವ<br>ಉನ್ನತ<br>ದೀರ್ಘ | i ಇ<br><br>i: ಈ | | | | | u ಉ<br><br>u: ಊ |
| ಹ್ರಸ್ವ<br>ಉನ್ನತ ಮಧ್ಯ<br>ದೀರ್ಘ | e ಎ<br><br>e: ಏ | | | | | o ಒ<br><br>o: ಓ |
| ಹ್ರಸ್ವ<br>ನಡುಮಧ್ಯ<br>ದೀರ್ಘ | | | ə ಅ್ಯ | | | |
| ಹ್ರಸ್ವ<br>ಅವನತ ಮಧ್ಯ<br>ದೀರ್ಘ | ɛ ಎ್ಯ<br><br>ɛ: ಏ್ಯ | | | | | ɔ ಒ್ಯ<br><br>ɔ: ಓ್ಯ |
| ಹ್ರಸ್ವ<br>ಅವನತ<br>ದೀರ್ಘ | | | a ಅ<br><br>a: ಆ | | | |

## ಹ್ರಸ್ವ ಸ್ವರ ವೈದೃಶ್ಯಗಳು

### ಇ ಮತ್ತು ಎ

| | | | | |
|---|---|---|---|---|
| ಪದಾದಿ: | ಕಿತ್ಲು | "ಜಗಳಗಂಟ" | ಕೆತ್ಲು | "ಎದೆ" |
| ಪದಮಧ್ಯ: | ಕಿಡಿ | "ಬೆಂಕಿಕಿಡಿ" | ಕೆಡಿ | "ಬೀಳಿಸು" |
| ಪದಾಂತ್ಯ: | ಸಮ್ತಿ | "ಸವತಿ" | ಸಮ್ತೆ | "ಸವತೆಕಾಯಿ" |

### ಇ ಮತ್ತು ಎ್ಯ

| | | | | |
|---|---|---|---|---|
| ಪದಾದಿ: | ಇಳಿ | "ಇಳಿ" | ಎ್ಯಳಿ | "ಎಳಿ" |
| ಪದಮಧ್ಯ: | ಬಿರಿ | "ಮುನಿಸು" | ಬ್ಯೆರಿ | "ಸೇರು" |
| ಪದಾಂತ್ಯ: | ತಿಮಿ | "ಚುಚ್ಚು" | ತ್ಯೆಮಿ | "ತೆವಳು" |

### ಇ ಮತ್ತು ಅ

| | | | | |
|---|---|---|---|---|
| ಪದಾದಿ: | ಇಮ | "ಇವನು" | ಅಮ | "ಅವನು" |
| ಪದಮಧ್ಯ: | ಜಿನ | "ದಿನ" | ಜನ | "ಜನರು" |
| ಪದಾಂತ್ಯ: | ಮರಿ | "ಮರಿ" | ಮರ | "ಮರ" |
| | ಸಿರಿ | "ಸಂಪತ್ತು" | ಸರಿ | "ಸರಿ" |
| | ಕರಿ | "ಕಪ್ಪು" | ಕರ | "ಕರು" |

### ಇ ಮತ್ತು ಅ್ಯ

| | | | | |
|---|---|---|---|---|
| ಪದಾದಿ : | ಇಟ್ಟಿ | "ಇಡು" | ಅ್ಯಟ್ಟಿ | "ಮನೆ" |
| ಪದಮಧ್ಯ: | ಕಿಟ್ಟಿ | "ಹೆಸರು" | ಕ್ಯಟ್ಟಿ | "ಕಟ್ಟಿ" |

ಇ ಮತ್ತು ಙ್ಯ

ಪದಾದಿ: ಇಲ್ಲಿ "ಇಲ್ಲಿ" ಙ್ಯಲ್ಲಿ "ಬೇಡ"

ಪದಮಧ್ಯ: ಇಳಿ "ಇಳಿ" ಙ್ಯಳಿ "ಹೊಳೆ"

ಪದಾಂತ್ಯ: ಕಿರಿ "ಚಿಕ್ಕ" ಕ್ಯೊರಿ "ತೂತು ಮಾಡು"

ಕಿಮಿ "ಕಿವಿ" ಕ್ಯೊಮಿ "ಮಾಡು"

ಇ ಮತ್ತು ಒ

ಪದಾದಿ: ಇಟ್ಟು "ಹಿಟ್ಟು" ಒಟ್ಟು "ಸಮಗ್ರ"

ಸಿಳ್ಳು "ಸಿಡಿಲು" ಸೊಳ್ಳು "ದೀಪ"

ಪದಮಧ್ಯ: ಅಂಸ್ತಿ "ಔಷಧಿ" ಅಮ್ಸೊಕ "ಮುಚ್ಚಿಡು"

ಇಂದು "ಈದಿನ" ಒಂದು "ಸಂಖ್ಯೆ"

ಪದಾಂತ್ಯ: ಕಿರಿ "ಚಿಕ್ಕ" ಚೊಕ್ಕ "ಶುದ್ಧ"

ಇ ಮತ್ತು ಉ

ಪದಾದಿ: ಇಳಿ "ಇಳಿ" ಉಳಿ "ಮರವನ್ನು ಕೆತ್ತುವ ಸಾಧನ"

ಪದಮಧ್ಯ: ಕಿಡಿ "ಬೆಂಕಿ ಕಿಡಿ" ಕುಡಿ "ಚಿಗುರು"

ಪದಾಂತ್ಯ: ಇಮ "ಇವನು" ಉಮ "ಹೆಸರು"

ಗಿಡ್ಡ "ಕುಳ್ಳ" ಗುಡ್ಡ "ಬೆಟ್ಟ"

ಎ ಮತ್ತು ಙ್ಯ

ಪದಾದಿ: ಎಲಿ "ಇಲಿ" ಙ್ಯಲೆ "ಎಲೆ"

ಎ ಮತ್ತು ಌ

| | | | | |
|---|---|---|---|---|
| ಪದಾದಿ: | ಎಲಿ | "ಇಲಿ" | ಌಲೆ | "ಎಲೆ" |
| ಪದಮಧ್ಯ: | ಎರ | "ಇರುವೆ" | ಌರೆ | "ಎರೆ ಭೂಮಿ" |
| ಪದಾಂತ್ಯ: | ಬೆಳಿ | "ಬಿಳಿ" | ಬ್ಯೆಳೆ | "ಬೆಳೆ" |
| | ಬೆಣ್ಣಿ | ಬೆರಣಿ" | ಬ್ಯೆಣ್ಣೆ | "ಬೆಣ್ಣೆ" |

ಎ ಮತ್ತು ಅ

| | | | | |
|---|---|---|---|---|
| ಪದಾದಿ: | ಎಣ್ಣು | "ಹೆಂಗಸು" | ಅಣ್ಣು | "ಫಲ" |
| | ಚೆಲ್ಸಿ | "ಕ್ಷೌರಿಕ" | ಚಲ್ಸಿ | "ಚಲಿಸು" |
| ಪದಮಧ್ಯೆ: | ಮರೆ | "ಅಡ್ಡ" | ಮರ | "ಮರ" |
| | ಎಲ್ಲಿ | "ಎಲ್ಲಿ" | ಅಲ್ಲಿ | "ಅಲ್ಲಿ" |
| | ನೆಳ್ಳು | "ನೆರಳು" | ನಳ್ಳು | "ನರಳು" |
| ಪದಾಂತ್ಯ: | ಬರೆ | "ಬೆಂಕಿಯಲ್ಲಿ ಕಾಯಿಸಿ ಸುಡುವುದು" | ಬರ | "ಕ್ಷಾಮ" |

ಎ ಮತ್ತ ಆ್ಯ

| | | | | |
|---|---|---|---|---|
| ಪದಾದಿ: | ಎಟ್ಟು | "ಚುಚ್ಚು" | ಆ್ಯಟ್ಟು | "ಓಡಿಸು" |
| | ಎಳ್ಳು | "ಬೀಜ" | ಆ್ಯಳ್ಳು | "ಅರಳೆಣ್ಣೆ ಬೀಜ" |
| ಪದಮಧ್ಯೆ: | ಕೆರೆ | "ಕೆರೆ" | ಕ್ಯರಿ | "ಕರಿ" |
| ಪದಾಂತ್ಯ: | ಕೊಡೆ | "ಛತ್ತರಿ" | ಕ್ಯಚ್ಚು | "ಕಚ್ಚು" |

ಎ ಮತ್ತು ಒ್ಯ

| | | | | |
|---|---|---|---|---|
| ಪದಾದಿ: | ಎಲ್ಲಿ | "ಎಲ್ಲಿ" | ಒ್ಯಲ್ಲಿ | "ವಸ್ತ್ರ" |
| | ಎಳ್ಳು | "ಬೀಜ" | ಒ್ಯಳ್ಳು | "ತಿರುಗು" |
| ಪದಮಧ್ಯೆ: | ಕೆರಿ | "ತುರುಕೆ" | ಕ್ಯೊರಿ | "ತೂತುಮಾಡು" |
| ಪದಾಂತ್ಯ: | ತೊಲೆ | "ತೊಲೆ" | ತ್ಯೊರಿ | "ದೂರಮಾಡು" |

ಎ ಮತ್ತು ಒ

| | | | | |
|---|---|---|---|---|
| ಪದಾದಿ: | ಎತ್ತು | "ಹಸು" | ಒತ್ತು | "ಸಮಯ" |
| ಪದಮಧ್ಯೆ: | ಕೆತ್ತಿ | "ವರೆಯುವುದು" | ಕೊತ್ತಿ | "ಬೆಕ್ಕು" |
| ಪದಾಂತ್ಯ: | ಸೆಲ್ಲು | "ಶಲ್ಲು" | ಸೊಲ್ಲು | "ಪದ" |

ಎ ಮತ್ತು ಉ

| | | | | |
|---|---|---|---|---|
| ಪದಾದಿ: | ಎಲಿ | "ಇಲಿ" | ಉಲಿ | "ಹುಲಿ" |
| ಪದಮಧ್ಯೆ: | ಪೆಟ್ಟಿ | "ಪೆಟ್ಟಿಗೆ" | ಪುಟ್ಟಿ | "ಕುಕ್ಕೆ" |
| ಪದಾಂತ್ಯ: | ಎಣ್ಣು | "ಹೆಂಗಸು" | ಉಣ್ಣು | "ಗಾಯ" |
| | ಕೆಚ್ಚು | "ಧೈರ್ಯ" | ಕುಚ್ಚು | "ಗುಂಪು" |

ವ್ಯ ಮತ್ತು ಅ

| | | | | |
|---|---|---|---|---|
| ಪದಾದಿ: | ವ್ಯಲೆ | "ಎಲೆ" | ಅಲೆ | "ತಿರುಗು" |
| ಪದಮಧ್ಯೆ: | ವ್ಯಳೆ | "ಎಳೆ" | ಅಳೆ | "ತೂಕ" |

| | | | | |
|---|---|---|---|---|
| ಪದಾಂತ್ಯ: | ಬ್ಯೆಲೆ | "ಬೆಲೆ" | ಬಲೆ | "ಮೀನಿನ ಬಲೆ" |
| | ಬ್ಯೆಳೆ | "ಬೆಳೆ | ಬಳೆ | "ಕೈಗೆ ತೊಡುವ ಸಾಧನ" |

ಎ್ಯ ಮತ್ತು ಅ್ಯ

| | | | | |
|---|---|---|---|---|
| ಪದಾದಿ: | ಎ್ಯರ್ಕ | "ಎರಕ" | ಅ್ಯರ್ಕ | "ಹರಕೆ" |
| ಪದಮಧ್ಯೆ: | ಎ್ಯಣ | "ಹೆಣ" | ಅ್ಯಣ | "ಹಣ" |
| ಪದಾಂತ್ಯ: | ಕ್ಯೆವ್ಡ | "ಕಿವುಡ" | ಕ್ಯವ್ಡೆ | "ಕವಡೆ" |
| | ಕ್ಯೆರ್ಚಿಪಿ | "ಇಟ್ಟನ್ನು ಕೀಳುವ ಸಾಧನ" | ಕ್ಯರ್ಚಿಪಿ | "ಕರವಸ್ತ್ರ" |

ಎ್ಯ ಮತ್ತು ಒ್ಯ

| | | | | |
|---|---|---|---|---|
| ಪದಾದಿ: | ಎ್ಯಂಡ | "ಸರಾಯಿ" | ಒ್ಯಂಡ | "ಹಳ್ಳ" |
| ಪದಮಧ್ಯೆ: | ಎ್ಯರ್ಕ | "ಎರಕ" | ಗ್ಯೋರ್ಕ | "ದೂಳು" |
| ಪದಾಂತ್ಯ: | ಮ್ಯೆರೆ | "ವಕ್ಕಣೆ ಮಾಡುವ ಸಾಧನ" | ಮ್ಯೊರ | "ಮೊರ" |

ಎ್ಯ ಮತ್ತು ಒ

| | | | | |
|---|---|---|---|---|
| ಪದಾದಿ: | ಎ್ಯಡಿ | "ಸುಲಿ" | ಒಡಿ | "ಒಡಿ" |
| ಪದಮಧ್ಯೆ: | ಎ್ಯಂಟೆ | "ಮಣ್ಣಿನ ಎಂಟೆ" | ಒಂಟೆ | "ಪ್ರಾಣಿ" |
| ಪದಾಂತ್ಯ: | ನ್ಯೆರೆ | "ಅಕ್ಕ ಪಕ್ಕ" | ನೊರೆ | "ನೊರೆ" |
| | ಕ್ಯೆಂಡ | "ಬೆಂಕಿ ಕೆಂಡ" | ಕೊಂಡ | "ಬೆಂಕಿಯ ಹೊಂಡ" |

ಎ್ಯ ಮತ್ತು ಉ

| | | | | |
|---|---|---|---|---|
| ಪದಾದಿ: | ಎ್ಯಳೆ | "ದಾರ" | ಉಳ | "ಕೀಟ" |

| | | | | |
|---|---|---|---|---|
| ಪದಮಧ್ಯೆ: | ಎ್ಯಡೆ | "ಪ್ರಸಾದ" | ಉಡ | "ಪ್ರಾಣಿ" |
| ಪದಾಂತ್ಯ: | ಕೈಂಡ | "ಬೆಂಕಿ ಕೆಂಡ" | ಕುಂಡ | "ಕುರುಡ" |
| | ಕೈರ | "ಚಪ್ಪಲಿ" | ಕುರ | "ಗಾಯ" |

**ಅ ಮತ್ತು ಅ್ಯ**

| | | | | |
|---|---|---|---|---|
| ಪದಾದಿ: | ಅತ್ತ | "ಅತ್ತೆ" | ಅ್ಯತ್ತ | "ಅಳು" |
| ಪದಮಧ್ಯೆ: | ಕಳ | "ದಾನ್ಯಗಳ ಶುದ್ಧಿ ಮಾಡುವ ಜಾಗ" | ಅ್ಯಳ | "ಅಳು" |

**ಅ ಮತ್ತು ಒ್ಯ**

| | | | | |
|---|---|---|---|---|
| ಪದಾದಿ: | ಅಪ್ಳ | "ಹಪ್ಪಳ" | ಒ್ಯಪ್ಳ | "ಬೊಬ್ಬೆ" |
| ಪದಮಧ್ಯೆ: | ಕಳ | "ಸತ್ತೆ" | ಒ್ಯಳ | "ಕೊಳ" |
| ಪದಾಂತ್ಯ: | ಕಣ | "ಧಾನ್ಯ ಶುಚಿಮಾಡುವ ಸ್ಥಳ" | ಕ್ಯೋಣ | "ಕೋಣ" |
| | ಕವೆ | "ಉರಿ" | ಕ್ಯೊಂಬೆ | "ಮರದ ಕೊಂಬೆ" |

**ಅ ಮತ್ತು ಒ**

| | | | | |
|---|---|---|---|---|
| ಪದಾದಿ: | ಅಂಟು | "ಅಂಟಿಸು" | ಒಂಟು | "ಒಗಟು" |
| ಪದಮಧ್ಯೆ: | ಕಳ್ಳಿ | "ಸಸ್ಯ" | ಕೊಳ್ಳಿ | "ಕೊಡಲಿ" |
| ಪದಾಂತ್ಯ: | ಅಪ್ಪ | "ತಂದೆ" | ಒಪ್ಪ | "ಅಂತ್ಯಕ್ರಿಯೆ" |
| | ಮಳೆ | "ಮಳೆ" | ಮೊಳ | "ಮೊಳೆ" |

**ಅ ಮತ್ತು ಉ**

| | | | | |
|---|---|---|---|---|
| ಪದಾದಿ: | ಅಡ್ಗ | "ಅಡುಗೆ" | ಉಡ್ಗ | "ಹುಡುಗ" |

| | | | | |
|---|---|---|---|---|
| ಪದಮಧ್ಯೆ: | ಕಳ್ಳಿ | "ಸಸ್ಯ" | ಕುಳ್ಳಿ | "ಕುಳ್ಳಗೆ ಇರುವವಳು" |
| ಪದಾಂತ್ಯ: | ಕಳ್ಳ | "ಕಳ್ಳ" | ಕಳ್ಳು | "ಕರಳು" |
| | ಅಳ್ಳಿ | "ಊರು" | ಉಳ್ಳಿ | "ಹುರುಳಿ" |
| | ಪಟ್ಟಿ | "ಪಟ್ಟಿ" | ಪುಟ್ಟಿ | "ಕುಕ್ಕೆ" |
| | ಕಚ್ಚಿ | "ಕಚ್ಚಿ" | ಕಚ್ಚು | "ಕಚ್ಚು" |

**ಅ್ಯ ಮತ್ತು ಒ್ಯ**

| | | | | |
|---|---|---|---|---|
| ಪದಾದಿ: | ಅ್ಯಳ್ಳು | "ಎಣ್ಣೆ ಬೀಜ" | ಒ್ಯಳ್ಳು | "ಒರಳು" |
| ಪದಮಧ್ಯೆ: | ಕ್ಯಳ್ಳು | "ಕರಳು" | ಕ್ಯೊಳ್ಳು | "ನೊಗದ ಹೆಗಲು" |
| ಪದಾಂತ್ಯ: | ಕ್ಯರಿ | "ಕೆರೆಯುವುದು" | ಕ್ಯೊರಿ | "ತೂತುಮಾಡು" |

**ಅ್ಯ ಮತ್ತು ಒ**

| | | | | |
|---|---|---|---|---|
| ಪದಾದಿ: | ಅ್ಯಟ್ಟು | "ದೂರ ಸರಿಸು" | ಒಟ್ಟು | "ಸರಾಸರಿ" |
| ಪದಮಧ್ಯೆ: | ಅ್ಯತ್ತು | "ಅಳು" | ಒತ್ತು | "ಸಮಯ" |
| ಪದಾಂತ್ಯ: | ಕ್ಯತ್ತಿ | "ಕತ್ತಿ" | ಕೊತ್ತಿ | "ಬೆಕ್ಕು" |

**ಅ್ಯ ಮತ್ತು ಉ**

| | | | | |
|---|---|---|---|---|
| ಪದಾದಿ: | ಅ್ಯಳ್ಳು | "ಹರಳು" | ಉಳ್ಳು | "ಉರುಳು" |
| ಪದಮಧ್ಯೆ: | ಅ್ಯಳ್ಳಿ | "ಹಳ್ಳಿ" | ಉಳ್ಳಿ | "ಹುರುಳಿ" |
| ಪದಾಂತ್ಯ: | ಕ್ಯಡಿ | "ಕಡಿ" | ಕುಡಿ | "ಚಿಗುರು" |

**ಒ್ಯ ಮತ್ತು ಒ**

| | | | | |
|---|---|---|---|---|
| ಪದಾದಿ: | ಒ್ಯಲ | "ಹೊಲ" | ಒಲ | "ಒಲೆ" |
| ಪದಮಧ್ಯೆ: | ಒ್ಯಂಟಿ | "ಏಕಾಂಗಿ" | ಒಂಟು | "ಒಗಟು" |

| | | |
|---|---|---|
| ಪದಾಂತ್ಯ: | ಕ್ಯೊಡ "ಛತ್ರಿ" | ಕೊಡು "ಕೊಡು" |
| | ತ್ಯೊಡೆ "ತೊಡೆ" | ತೊಡು "ಧರಿಸು" |

ಒ್ಯ ಮತ್ತು ಉ

| | | |
|---|---|---|
| ಪದಾದಿ: | ಒ್ಯಳೆ "ಹೊಳೆ" | ಉಳ "ಕೀಟಾ" |
| ಪದಮಧ್ಯೆ: | ಒ್ಯಲಿ "ಒಲಿ" | ಉಲಿ "ಹುಲಿ" |
| ಪದಾಂತ್ಯ: | ಕ್ಯೊಳೆ "ಕೊಳೆ" | ಕುಳಿ "ತೂತು" |

ಒ ಮತ್ತು ಉ

| | | |
|---|---|---|
| ಪದಾದಿ: | ಒಪ್ಪು "ಒಪ್ಪಿಗೆ" | ಉಪ್ಪು "ಉಪ್ಪು" |
| ಪದಮಧ್ಯೆ: | ಸೊಳ್ಳು "ದೀಪ | ಸುಳ್ಳು "ಸುಳ್ಳು" |
| ಪದಾಂತ್ಯ: | ಒಗ್ಳು "ಹೊಗಳು" | ಉಗ್ಳು "ಉಗುಳು" |
| | ಮೊಗ್ಗು "ಮೊಗ್ಗು" | ಮುಗ್ಗು "ಬೂಸ್ಟ್" |

**ದೀರ್ಘಸ್ವರ ವೈದೃಶ್ಯಗಳು**

**ಈ ಮತ್ತು ಏ**

| | | |
|---|---|---|
| ಪದಾದಿ: | ಈಜು "ಈಜು" | ಮೇಜು "ಮೇಜು" |
| ಪದಮಧ್ಯೆ: | ಈದು "ಕೊಡು" | ಏದು "ಉಸಿರು ಬಿಡು" |
| ಪದಾಂತ್ಯ: | ಜೀನು "ಕುದುರೆಗೆ ಹಾಕುವ ಸಾಧನ" | ಜೇನು "ಜೇನು" |

**ಈ ಮತ್ತು ಏ್ಯ**

| | | |
|---|---|---|
| ಪದಾದಿ: | ಈತ "ಇವನು" | ಏ್ಯತ "ಸಾಧನ" |

| | | | | |
|---|---|---|---|---|
| ಪದಮಧ್ಯೆ: | ಈಸ | "ದೇವರು" | ಏಸ | "ವೇಷ" |
| ಪದಾಂತ್ಯ: | ಬೀಗ | "ಬೀಗ" | ಬೈಗ | "ಬೇಗ" |

**ಈ ಮತ್ತು ಆ**

| | | | | |
|---|---|---|---|---|
| ಪದಾದಿ: | ಈಗ | "ಈಗ" | ಆಗ | "ಆಗ" |
| ಪದಮಧ್ಯೆ: | ಬೀದಿ | "ರಸ್ತೆ" | ಬಾದಿ | "ನೋವು" |
| ಪದಾಂತ್ಯ: | ಈದು | "ಕೊಡು" | ಆದು | "ದಾಟಿಸು" |
| | ಸೀಬಿ | "ಸೀಬೆಹಣ್ಣು" | ಸಾಬಿ | "ಮುಸ್ಲಿಂ" |
| | ಚೀಲ | "ಚೀಲ" | ಚಾಲ | "ಗುಣ" |

**ಈ ಮತ್ತು ಓ್ಯ**

| | | | | |
|---|---|---|---|---|
| ಪದಾದಿ: | ಕೀರ | "ಪ್ರಾಣಿ" | ಕ್ಯೋರ | "ಕೊರೆ" |
| ಪದಮಧ್ಯೆ: | ಸೀರೆ | "ಬಟ್ಟೆ" | ಸ್ಯೋರೆ | "ಸೋರೆ" |
| ಪದಾಂತ್ಯ: | ಈರಿ | "ಹೆಸರು" | ಬ್ಯೋರಿ | "ಹೆಸರು" |

**ಈ ಮತ್ತು ಓ**

| | | | | |
|---|---|---|---|---|
| ಪದಾದಿ: | ಈರಿ | "ಹೆಸರು" | ಓರಿ | "ಪ್ರಾಣಿ" |
| ಪದಮಧ್ಯೆ: | ಈಜು | "ಈಜು" | ಮೋಜು | "ಮಜಾಮಾಡು" |
| ಪದಾಂತ್ಯ: | ಈಟು | "ಇಟ್ಟು" | ಓಟು | "ಮತ" |
| | ಪೀಟ | "ಗದ್ದುಗೆ" | ಪೋಟ | "ಪೋಟೋ" |

**ಈ ಮತ್ತು ಊ**

| | | | | |
|---|---|---|---|---|
| ಪದಾದಿ: | ಈರು | "ಕುಡಿ" | ಊರು | "ಊರು" |
| ಪದಮಧ್ಯೆ: | ಬೀದಿ | "ರಸ್ತೆ" | ಬೂದಿ | "ಬೂದಿ" |

| | | | | |
|---|---|---|---|---|
| ಪದಾಂತ್ಯ: | ಈಟಿ | "ಸಾಧನ" | ಊಟಿ | "ಸ್ಥಳ" |

**ಏ ಮತ್ತು ಏ್ಯ**

| | | | | |
|---|---|---|---|---|
| ಪದಾದಿ: | ಏರು | "ನೇಗಿಲು" | ಏ್ಯರು | "ಯಾರು" |
| ಪದಮಧ್ಯೆ: | ಏನು | "ಹೇನು" | ಏ್ಯನು | "ಏನು" |
| ಪದಾಂತ್ಯ: | ಪೇಟ | "ಪೇಟ" | ಪ್ಯೇಟ | "ಪೇಟೆ" |
| | ಮೇಳಿ | "ನೇಗುಲ ಹಿಡಿ" | ಮ್ಯೇಳ | "ಮೇಳ" |

**ಏ ಮತ್ತು ಆ**

| | | | | |
|---|---|---|---|---|
| ಪದಾದಿ: | ಏಣಿ | "ಏಣಿ" | ಆಣಿ | "ಆಣೆ" |
| ಪದಮಧ್ಯೆ: | ಬೇಲ | "ಮರ" | ಬಾಲ | "ಬಾಲ" |
| ಪದಾಂತ್ಯ: | ಏಡು | "ಎರಡು" | ಆಡು | "ಆಡು" |
| | ಬೇಕು | "ಬೇಕು" | ಬಾಕು | "ಚಾಕು" |

**ಏ ಮತ್ತು ಓ್ಯ**

| | | | | |
|---|---|---|---|---|
| ಪದಾದಿ: | ದೇಶ | "ದೇಶ" | ದ್ಯೊಸ | "ದೋಸೆ" |
| ಪದಮಧ್ಯೆ: | ಬೇರ | "ಬೇರೆ" | ಬ್ಯೊರೆ | "ಗುಡ್ಡ" |

**ಏ ಮತ್ತು ಓ**

| | | | | |
|---|---|---|---|---|
| ಪದಾದಿ: | ಏಣಿ | "ಏಣಿ" | ಓಣಿ | "ಓಣಿ" |
| ಪದಮಧ್ಯೆ: | ಮೇರಿ | "ಹೆಸರು" | ಮೋರಿ | "ಬಚ್ಚಲು" |
| ಪದಾಂತ್ಯ: | ಏಟು | "ಹೊಡೆತ" | ಓಟು | "ಮತ" |

**ಏ ಮತ್ತು ಊ**

| | | | | |
|---|---|---|---|---|
| ಪದಾದಿ: | ಏಸು | "ಏಸು ಕ್ರಿಸ್ತ" | ಊಸು | "ಹೂಸು" |
| ಪದಮಧ್ಯೆ: | ಬೇದಿ | "ಬೇಧಿ" | ಬೂದಿ | "ಬೂದಿ" |
| ಪದಾಂತ್ಯ: | ಏಳು | "ಏಳು" | ಊಳು | "ಹೂಳು" |
| | ಸೇರು | "ಸೇರು" | ಸೂರು | "ಮನೆ ಚಾವಣಿ" |

**ಏ್ಯ ಮತ್ತು ಆ**

| | | | | |
|---|---|---|---|---|
| ಪದಾದಿ: | ಏ್ಯತ | "ಏತ" | ಆತ | "ಅವನು" |
| ಪದಮಧ್ಯೆ: | ಏ್ಯರು | "ಯಾರು" | ಆರು | "ಆರು" |
| ಪದಾಂತ್ಯ: | ಬ್ಯೇಗ | "ಬೇಗ" | ಬಾಗ | "ಭಾಗ" |

**ಏ್ಯ ಮತ್ತು ಓ್ಯ**

| | | | | |
|---|---|---|---|---|
| ಪದಾದಿ: | ಕ್ಯೇಣ | "ಕೋಪ" | ಕ್ಯೋಣ | "ಕೋಣ" |
| ಪದಮಧ್ಯೆ: | ಬ್ಯೇರೆ | "ಬೇರೆ | ಬ್ಯೋರೆ | "ಬೋರೆ" |

**ಏ್ಯ ಮತ್ತು ಊ**

| | | | | |
|---|---|---|---|---|
| ಪದಾದಿ: | ಏ್ಯರು | "ಯಾರು" | ಊರು | "ಊರು" |
| ಪದಮಧ್ಯೆ: | ವ್ಯೇಸ | "ವೇಷ" | ಊಸ | "ಹೂಸು" |
| ಪದಾಂತ್ಯ: | ತ್ಯೇಮ | "ತೇವ" | ತೂಮ | "ಸೂತಕ" |

**ಆ ಮತ್ತು ಓ್ಯ**

| | | | | |
|---|---|---|---|---|
| ಪದಾದಿ: | ತಾಳ | "ತಾಳ" | ತ್ಯೋಳ | "ತೋಳ" |
| ಪದಮಧ್ಯೆ: | ಕಾರ | "ಕಾರ" | ಕ್ಯೋರ | "ಕೋರೆ" |

**ಆ ಮತ್ತು ಓ**

| | | |
|---|---|---|
| ಪದಾದಿ: | ಆಮೆ "ಆಮೆ" | ಓಮೆ "ಹೋಗೋಣ" |
| ಪದಮಧ್ಯ: | ಜಾಡು "ರಹಸ್ಯ" | ಜೋಡು "ಚಪ್ಪಲಿ" |
| ಪದಾಂತ್ಯ: | ಆಟ "ಆಟ" | ಓಟ "ಓಟ" |
| | ಕಾಟಿ "ಕಾಡುಕೋಣ" | ಕೋಟಿ "ಹಣ" |

**ಆ ಮತ್ತು ಊ**

| | | |
|---|---|---|
| ಪದಾದಿ: | ಆರು "ಆರು" | ಊರು "ಊರು" |
| ಪದಮಧ್ಯ: | ಕಾಸು "ಹಣ" | ಕೂಸು "ಮಗು" |
| ಪದಾಂತ್ಯ: | ಆಟ "ಆಟ" | ಊಟ "ಊಟ" |

**ಓ್ಯ ಮತ್ತು ಓ**

| | | |
|---|---|---|
| ಪದಾದಿ: | ಕ್ಯೋಣ "ಕೋಣ" | ಕೋಣೆ "ಅಡುಗೆ ಮನೆ" |
| ಪದಮಧ್ಯ: | ಬ್ಯೋರ "ಬೇರೆ | ಬೋರ "ಹೆಸರು" |

**ಓ್ಯ ಮತ್ತು ಊ**

| | | |
|---|---|---|
| ಪದಾದಿ: | ಮ್ಯೋಡ "ಮೋಡ" | ಮೂಡ "ದಡ್ಡ" |
| ಪದಮಧ್ಯ: | ಕ್ಯೋಳ "ಕೋಳ" | ಕೂಳ "ಗಲಾಟೆ ಮಾಡುವವ" |

**ಓ ಮತ್ತು ಊ**

| | | |
|---|---|---|
| ಪದಾದಿ: | ಓದು "ಓದು" | ಊದು "ಊದು" |
| ಪದಮಧ್ಯ: | ಕೋಳಿ "ಕೋಳಿ" | ಕೂಳಿ "ಮೀನುಹಿಡಿಯುವ ಸಾಧನ" |
| ಪದಾಂತ್ಯ: | ಓಟು "ಮತ" | ಊಟ "ಊಟ" |

**ಇ ಮತ್ತು ಈ**

| | | | | |
|---|---|---|---|---|
| ಪದಾದಿ: | ಇಸ | "ವಿಷ" | ಈಸ | "ದೇವರು" |
| ಪದಮಧ್ಯ: | ಕಿಮಿ | "ಕಿವಿ" | ಕೀಮು | "ಕೀವು" |
| ಪದಾಂತ್ಯ: | ಇರು | "ಇರು" | ಈರು | "ಹೀರು" |
| ಪದಾಂತ್ಯ: | ಕಿಳು | "ಕಿಳುವುದು" | ಕೀಳು | "ಕೆಳಮಟ್ಟ" |

**ಎ ಮತ್ತು ಏ**

| | | | | |
|---|---|---|---|---|
| ಪದಾದಿ: | ಎರು | "ಹೆರು" | ಏರು | "ಹತ್ತು" |
| ಪದಮಧ್ಯೆ: | ಕೆಡು | "ನಾಶ" | ಕೇಡು | "ತೊಂದರೆ" |
| ಪದಾಂತ್ಯ: | ಎಲಿ | "ಇಲಿ" | ಏಳಿ | "ಪಿತ್ತಜನಕಾಂಗ"(ಈಲಿ) |
| | ಕೆರಿ | "ಕೆರಿ" | ಕೇರಿ | "ಬೀದಿ" |

**ಅ ಮತ್ತು ಆ**

| | | | | |
|---|---|---|---|---|
| ಪದಾದಿ: | ಅರ | "ಆಚಾರಿ ಬಳಸುವ ಸಾಧನ" | ಆರ | "ಹೂವಿನ ಹಾರ" |
| ಪದಮಧ್ಯ: | ಕಳ | "ಕಣ" | ಕಾಳ | "ಹೆಸರು" |
| ಪದಾಂತ್ಯ: | ಅಮ | "ಅವನು" | ಆಮೆ | "ಪ್ರಾಣಿ" |
| | ಮಳೆ | "ಮಳೆ" | ಮಾಳ | "ಮೈದಾನ" |

**ಉ ಮತ್ತು ಊ**

| | | | | |
|---|---|---|---|---|
| ಪದಾದಿ: | ಉರಿ | "ದಾರ" | ಊರಿ | "ಬಿಚ್ಚು" |
| ಪದಮಧ್ಯ: | ಕುಳಿ | "ಹಳ್ಳ" | ಕೂಳಿ | "ಮೀನು ಹಿಡಿಯುವ ಸಾಧನ" |
| ಪದಾಂತ್ಯ: | ಉಡು | "ತೊಡು" | ಊಂಡು | "ತಿನ್ನಿಸು" |
| | ಕುಳ | "ಮನೆತನ" | ಕೂಳ | "ಗಲಾಟೆ" |

ಒ ಮತ್ತು ಓ

| | | | | |
|---|---|---|---|---|
| ಪದಾದಿ: | ಒರಿ | "ಹೆರಿ" | ಓರಿ | "ಹೋರಿ" |
| ಪದಮಧ್ಯೆ: | ಕೊಡು | "ಕೊಡು" | ಕೋಡು | "ಕೊಂಬು" |
| ಪದಾಂತ್ಯ: | ಒದಿ | "ಒದೆ" | ಓದು | "ಓದು" |
| | ತೊಡು | "ಉಡು" | ತೋಡ್ಸು | "ತೋಡು" |

ಮಳವಳ್ಳಿ ಕನ್ನಡದಲ್ಲಿ ಸ್ವರಗಳು ಹೇಗೆ ಬಳಕೆಗೊಳ್ಳುತ್ತವೆ ಎಂಬುದನ್ನು ಕಾಣಬಹುದು. ಮಳವಳ್ಳಿ ಕನ್ನಡದಲ್ಲಿ ಬರಹ ಕನ್ನಡದಲ್ಲಿ ಬಳಸುವ ಋ, ಐ, ಔ, ಬಿಟ್ಟು, ಉಳಿದ ೧೦ ಸ್ವರಗಳು ಬಳಕೆಗೊಳ್ಳುವುದನ್ನು ಕಾಣಬಹುದು. ಮಳವಳ್ಳಿ ಕನ್ನಡದ ಸ್ವರ ವ್ಯವಸ್ಥೆಯಲ್ಲಿ ದ್ರಾವಿಡ ಭಾಷೆಯ ಸ್ವರಗಳನ್ನು ಉಳಿಸಿಕೊಂಡಿದೆ. ಇಂದು ಮಳವಳ್ಳಿ ಕನ್ನಡ ಪರಿಸರದಲ್ಲಿ ೧೦ ಸ್ವರಗಳ ಬಳಕೆಯಲ್ಲಿರುವುದನ್ನು ಗುರುತಿಸಬಹುದು. ಹತ್ತು ಸ್ವರಗಳು ಹೇಗೆ ಬಳಕೆಯಾಗುತ್ತದೆ ಎಂಬುದನ್ನು ಉದಾಹರಣೆಯೊಂದಿಗೆ ನೋಡುವುದಾದರೆ.

**ಅ ಮತ್ತು ಆ ಕಾರಗಳ ಬಳಕೆ**

| | | | |
|---|---|---|---|
| ಬರೆ | "ಸುಡು" | ಬಾಲ | "ಬಾ" |
| ಕರೆ | "ಕರೆಯುವುದು" | ಕಾರೆ | "ಹಣ್ಣು" |
| ಸೆರೆ | "ಬಂಧಿಸು" | ಸಾರೆ | "ಕೂಗು" |
| ಅತ್ತೆ | "ಅತ್ತೆ | ಆತೆ | "ಜಿರಳೆ" |

**ಇ ಮತ್ತು ಈ ಕಾರಗಳ ಬಳಕೆ**

| | | | |
|---|---|---|---|
| ಸಿಕ್ಲ್ಲ | "ಗಂಟು" | ಸೀಕ್ಲ್ಲ | "ಚಿಕ್ಕ" |
| ಇಡು | "ಇರಿಸು" | ಈಡು | "ಜೋಡಿ" |
| ಕಿರೆ | "ಚಿಕ್ಕ" | ಕೀರೆ | "ಸೊಪ್ಪು" |
| ಕಿರಿ | "ಚಿಕ್ಕ" | ಕೀರಿ | "ಹಚ್ಚು" |

**ಉ ಮತ್ತು ಊ ಕಾರಗಳ ಬಳಕೆ**

ಉಳು "ಹುಳು" ಊಳು "ಮುಚ್ಚು"

ಕುಡಿ "ಚಿಗುರು" ಕೂಡಿ "ಜೊತೆ"

ಮಡ್ಗು "ಇರಿಸು" ಮಾಡೂ "ಸೂರು"

**ಎ ಮತ್ತು ಏಕಾರಗಳ ಬಳಕೆ**

ತೆನೆ "ತೆನೆ" ತೇನೆ "ತೆನೆ"

ನೆಗ್ಲು "ಮುಳ್ಳು" ನೇಗ್ಲು "ನೇಗಿಲು"

ನೆರ್ಕೆ "ತಡಿಕೆ" ನೇರ್ಕೆ "ನೇರವಾಗಿ"

ಕೆರೆ "ಕೆರೆ" ಕೇರೆ "ಹಾವು"

**ಒ ಮತ್ತು ಓಕಾರಗಳ ಬಳಕೆ**

ಕೊಡು "ಕೊಡು" ಕೋಡು "ಕೊಂಬು"

ತೊಡು "ಧರಿಸು" ತೋಡು "ಅಗೆಯುವುದು"

ತ್ವಟ "ಜಿನುಗು" ತೋಟ "ತೋಟ"

ಇಲ್ಲಿ ಹ್ರಸ್ವ ದೀರ್ಘಸ್ವರಗಳನ್ನು ಕಾಣಿಸಲಾಗಿದೆ. ಪದ ಮಧ್ಯದಲ್ಲಿ ಅರ್ಧ ದೀರ್ಘವನ್ನು ಗುರುತಿಸಬಹುದು. ಆಡುಮಾತಿನ ಸಂಧ್ಯಕ್ಷರಗಳಲ್ಲಿ ಪದಾದಿಯ **ಎ, ಒ** ಅಕ್ಷರಗಳ ಸ್ಥಾನದಲ್ಲಿ ಅರ್ಧಸ್ವರಗಳೆನಿಸದ **ಯ, ವ** ಅಕ್ಷರಗಳನ್ನು ಬಳಸಿರುವುದನ್ನು ಗುರುತಿಸಬಹುದು.

## ೩.೩. ವ್ಯಂಜನಗಳು

ವ್ಯಂಜನಗಳ ಪಟ್ಟಿಯಲ್ಲಿ ಬಹಳ ವಿಶೇಷವಾಗಿ ಬಳಕೆಯಲ್ಲಿರುವ ಅಕ್ಷರಗಳೆಂದರೆ **'ಚ ಮತ್ತು ಜ'** ಕಾರಗಳು ಮಳವಳ್ಳಿ ಕನ್ನಡದಲ್ಲಿ ಬಳಕೆಯಲ್ಲಿರುವುದನ್ನು ಕಾಣಬಹುದು. ಮಳವಳ್ಳಿ ಕನ್ನಡದಲ್ಲಿ ಇಂದಿಗೂ **'ಹ'** ಕಾರ ಬಳಕೆಯಾಗುವುದಿಲ್ಲ. ಮಳವಳ್ಳಿ ಕನ್ನಡದಲ್ಲಿ ಶಬ್ಧಗಳ ನಡುವೆ ಅನುನಾಸಿಕ ಅಘೋಷಸ್ಪರ್ಶ ಸಂಯುಕ್ತ ವ್ಯಂಜನಗಳು ಬಳಕೆಯಲ್ಲಿರುವುದನ್ನು ಕಾಣಬಹುದು. ಮಳವಳ್ಳಿ ಕನ್ನಡದಲ್ಲಿ ಬಳಕೆಗೊಳ್ಳುವ ವ್ಯಂಜನಗಳ ಪಟ್ಟಿಯನ್ನು ಈ ರೀತಿ ಗುರುತಿಸಬಹುದು.

ಮಳವಳ್ಳಿ ಕನ್ನಡದಲ್ಲಿ ಪ್ರಮುಖವಾಗಿ ೧೯ ವ್ಯಂಜನ ಧ್ವನಿಮಾಗಳಿವೆ. ಅವು ಇಂತಿವೆ.

## ವ್ಯಂಜನಗಳ ಪಟ್ಟಿ

| | ಓಷ್ಠ್ಯ | | ದಂತ್ಯ | | ಮೂರ್ಧನ್ಯ | | ತಾಲವ್ಯ | | ಕಂಠ್ಯ | | ಕಂಠ್ಯೇತರ | |
|---|---|---|---|---|---|---|---|---|---|---|---|---|
| | ಅಘೋಷ | ಘೋಷ | ಅಘೋಷ | ಘೋಷ | ಅಘೋಷ | ಘೋಷ | ಅಘೋಷ | ಘೋಷ | ಅಘೋಷ | ಘೋಷ | ಅಘೋಷ | ಘೋಷ |
| ಸ್ಪರ್ಶ | ಪ್ | ಬ್ | ತ್ | ದ್ | ಟ್ | ಡ್ | ಚ್ | ಜ್ | ಕ್ | ಗ್ | – | |
| ಘರ್ಷ | | | ಸ್ | – | – | – | – | – | – | – | – | – |
| ಅನುನಾಸಿಕ | – | ಮ್ | – | ನ್ | – | ಣ್ | | | | | | |
| ಅನುಘರ್ಷ | | | | ರ್ | | | | | | | | |
| ಪಾರ್ಶ್ವ | – | – | – | ಲ್ | – | ಳ್ | | | | | | |
| ಅರ್ಧಸ್ವರ | – | ವ್ | | | | | ಯ್ | | | | | |

**ಪ ಮತ್ತು ಬ**

| | | | | |
|---|---|---|---|---|
| ಪದಾದಿ: | ಪುಟ್ಟಿ | "ಕುಕ್ಕೆ" | ಬುಟ್ಟಿ | "ಬುಟ್ಟಿ" |
| | ಪಳ್ಳಿ | "ಶಾಲೆ" | ಬಳ್ಳಿ | "ಬಳ್ಳಿ" |
| ಪದಮಧ್ಯ: | ಅಪ್ಪ | "ತಂದೆ" | ಅಬ್ಬ | "ಹಬ್ಬ" |
| | ಕೆಂಪು | "ಕೆಂಪು" | ಕೆಮ್ಮು | "ಕೆಮ್ಮು" |

**ತ ಮತ್ತು ದ**

| | | | | |
|---|---|---|---|---|
| ಪದಾದಿ: | ತರ | "ವಿವಿಧ" | ದರ | "ಭೂವಿ" |
| | ತಂಡ | "ಗುಂಪು" | ದಂಡ | "ಶುಲ್ಕ" |
| ಪದಮಧ್ಯ: | ಕತೆ | "ಕಥೆ" | ಕದ | "ಬಾಗಿಲು" |
| | ಭೀತಿ | "ಭಯ" | ಬೀದಿ | "ಬೀದಿ" |

**ಟ ಮತ್ತು ಡ**



| | | | | |
|---|---|---|---|---|
| ಪದಾದಿ: | ಟೊಳ್ಳು | "ತೂತು" | ಡೊಳ್ಳು | "ಡೊಂಕ" |
| | ಟಕ್ಕ | "ಕಳ್ಳ" | ಡಕ್ಕ | "ವಾದ್ಯ" |
| ಪದಮಧ್ಯ: | ಕುಂಟಿ | "ಕುಂಟಿ" | ಕುಂಡಿ | "ಕುರುಡು" |
| | ಗೋಟು" | ಅಡಕೆಯ ವಿಧ" | ಗೋಂಡು | "ಗೋಂದು" |

**ಚ ಮತ್ತ ಜ**

| | | | | |
|---|---|---|---|---|
| ಪದಾದಿ: | ಚವ್ರ | "ಕ್ಷೌರ" | ಜವ್ರ | "ಹೆಸರು" |
| | ಚೀಪು | "ಚೀಪು" | ಜೀಪು | "ವಾಹನ" |
| ಪದಮಧ್ಯ: | ಕಾಚ | "ಒಳುಡುಪು" | ಕಾಜ | "ಗುಂಡಿಗೆ ಹಾಕಲು ಮಾಡುವ ತೂತು" |
| | ಮಂಚ | "ಮಂಚ" | ಮಂಜ | "ಹೆಸರು" |

**ಕ ಮತ್ತು ಗ**

| | | | | |
|---|---|---|---|---|
| ಪದಾದಿ: | ಕೆರೆ | "ಚಪ್ಪಲಿ" | ಗೆರೆ | "ಗೆರೆ" |
| | ಕವಿ | "ಕವಿ" | ಗವಿ | "ಗವಿ" |
| ಪದಮಧ್ಯ: | ಮೊಕ | "ಮುಖ" | ಮಗ | "ಮಗ" |
| | ಮಣ್ಕ | "ಪ್ರಾಯಕ್ಕೆ ಬಂದ ಮೇಕೆ" | ಮಳ್ಗ | "ಮಳಿಗೆ" |

**ಮ ಮತ್ತು ನ**

| | | | | |
|---|---|---|---|---|
| ಪದಾದಿ: | ಮರ | "ಮರ" | ನರ | "ನರ" |
| | ಮಗ | "ಮಗ" | ಮನ | "ಮನ" |
| ಪದಮಧ್ಯ: | ಮಾವ | "ಮಾವ" | ಮಾನ | "ಮಾನ" |
| | ಆಮೆ | "ಪ್ರಾಣಿ" | ಆನೆ | "ಆನೆ" |

**ಮ ಮತ್ತು ಣ**

| | | | | |
|---|---|---|---|---|
| ಪದಾದಿ: | ಆಮೆ | "ಆಮೆ" | ಆಣೆ | "ಭಾಷೆ" |
| ಪದಮಧ್ಯ: | ಬಾಮ | "ಹೆಸರು" | ಬಾಣ | "ಬಾಣ" |

**ನ ಮತ್ತು ಣ**

| | | | | |
|---|---|---|---|---|
| ಪದಾದಿ: | ಮನ | "ಮನ" | ಮಣ | "ತೂಕ" |
| ಪದಮಧ್ಯ: | ಬನ | "ಕಾಡು" | ಬಣ | "ಗುಂಪು" |
| | ಆನೆ | "ಆನೆ" | ಆಣೆ | "ಭಾಷೆ" |

**ಸ ಮತ್ತು ಲ**

| | | | | |
|---|---|---|---|---|
| ಪದಾದಿ: | ಸಂಗ | "ಸಂಘ" | ಲಂಗ | "ಲಂಗ" |
| | ಸಾಲು | "ಸಾಲು" | ಲಾಲಿ | "ತೊಟ್ಟಿಲ ಪದ" |

| | | | | |
|---|---|---|---|---|
| ಪದಮಧ್ಯ: | ಕಾಸು | "ಹಣ" | ಕಾಲು | "ಕಾಲು" |
| | ಕೋಸು | "ತರಕಾರಿ" | ಕೋಲು | "ದೊಣ್ಣೆ" |

ಸ ಮತ್ತು ರ

| | | | | |
|---|---|---|---|---|
| ಪದಾದಿ: | ಸಾನೆ | "ಹೆಚ್ಚು" | ರಾಣಿ | "ರಾಣಿ" |
| | ಸಮ | "ಸಮ" | ರಮ | "ಹೆಸರು" |
| ಪದಮಧ್ಯ: | ಮಸಿ | "ಇದ್ದಿಲು" | ಮರಿ | "ಮರಿ" |
| | ಕಾಸು | "ಹಣ" | ಕಾರು | "ವಾಹನ" |

ಲ ಮತ್ತು ಳ

| | | | | |
|---|---|---|---|---|
| ಪದಾದಿ: | ಬೆಲೆ | "ಬೆಲೆ" | ಬೆಳೆ | "ಬೆಳೆ" |
| ಪದಮಧ್ಯ: | ಎಲೆ | "ಎಲೆ" | ಎಳೆ | "ದಾರದ ಎಳೆ" |

ರ ಮತ್ತು ಲ

| | | | | |
|---|---|---|---|---|
| ಪದಾದಿ: | ರಾಗ | "ರಾಗ" | ಲಾಗ | "ಪಲ್ಟಿ" |
| | ರಾಸು | "ಗುಂಪು" | ಲಾಸು | "ನಷ್ಟ" |
| ಪದಮಧ್ಯ: | ಸೂರು | "ಚಾವಣಿ" | ಸೂಲು | "ಉಸಿರು" |
| | ಕಾರು | "ವಾಹನ" | ಕಾಲು | "ಕಾಲು" |
| | ಬರ | "ಕ್ಷಾಮ" | ಬಲ | "ಶಕ್ತಿ" |
| | ಜರ | "ಜ್ವರ" | ಜಲ | "ನೀರು" |

ರ ಮತ್ತು ಳ

| | | | | |
|---|---|---|---|---|
| ಪದಾದಿ: | ಕುರಿ | "ಕುರಿ" | ಅಳ್ಳ | "ಹಳ್ಳ" |
| ಪದಮಧ್ಯ: | ಬರ | "ಕ್ಷಾಮ" | ಬಳೆ | "ಬಳೆ" |

**ವ ಮತ್ತು ಯ**

ಪದಾದಿ: ವಾದ "ವಾದ" ಯೋದ "ಸೈನಿಕ"

ವಲ "ಒಲ" ಯಲೆ "ಎಲೆ"

ಪದಮಧ್ಯ: ವಾಟ "ಸರಿಯಾಗಿ" ಯಾಟೆ "ಕೋಳಿ"

**ಪಪ ಮತ್ತು ಬಬ**

ಅಪ್ಪ "ತಂದೆ" ಅಬ್ಬ "ಹಬ್ಬ"

ದಪ್ಪ "ದಪ್ಪ" ದಬ್ಬ "ಡಬ್ಬಿ"

**ತತ ಮತ್ತು ದದ**

ಬುತ್ತಿ "ಗಂಟು" ಬುದ್ದಿ "ಬುದ್ಧಿ"

ಮತ್ತು "ಅಮಲು" ಮದ್ದು "ಔಷಧಿ"

**ಟಟ ಮತ್ತು ಡಡ**

ದಟ್ಟ "ಮಂದ" ದಡ್ಡ "ಪೆದ್ದ"

ಬತ್ತಿ "ಬತ್ತಿ" ಬಡ್ಡಿ "ಬಡ್ಡಿ"

**ಚಚ ಮತ್ತು ಜಜ**

ಅಚ್ಚು "ಮುದ್ರಣ" ಅಜ್ಜು "ಅದ್ದು"

ಕಚ್ಚೆ "ಪಂಚೆ" ಕಜ್ಜಿ "ಕಜ್ಜಿ"

**ಕಕ ಮತ್ತು ಗಗ**

ಕುಕ್ಕೆ "ಬುಟ್ಟಿ" ಕುಗ್ಗು "ಕುಗ್ಗು"

ಮುಕ್ಕು "ತಿನ್ನು" ಮುಗ್ಗು "ಕೆಡು"

ಮಕ್ಕ "ಮಕ್ಕಳು" ಮಗ್ಗ "ಮಗ್ಗ"

**ಮಮ ಮತ್ತು ನನ**

ಗುಮ್ಮ "ದೆವ್ವ" ಗುನ್ನ "ಗುರುತು"

ಗಮ್ಮು "ಗೋಂದು" ಗನ್ನು "ಬಂದೂಕು"

ಅಮ್ಮ "ಅಮ್ಮ" ಅನ್ನ "ಅನ್ನ"

ತಮ್ಮ "ತಮ್ಮ" ತನ್ನ "ತನ್ನ"

**ಮಮ ಮತ್ತು ಣಣ**

ಎಮ್ಮೆ "ಎಮ್ಮೆ" ಎಣ್ಣೆ "ಎಣ್ಣೆ"

ಕಮ್ಮು "ಕಮ್ಮು" ಕಣ್ಣು "ಕಣ್ಣು"

**ನನ ಮತ್ತು ಣಣ**

ಕನ್ನ "ಕನ್ನ" ಕಣ್ಣು "ಕಣ್ಣು"

ಅನ್ನ "ಅನ್ನ" ಅಣ್ಣ "ಅಣ್ಣ"

**ಸಸ ಮತ್ತು ಲಲ**

ಬಸ್ಸು "ಬಸ್ಸು" ಬಿಲ್ಲು "ಬಿಲ್ಲು"

ಕಸ್ಸು "ಹತ್ತಿಸು" ಕಲ್ಲು "ಕಲ್ಲು"

**ಲಲ ಮತ್ತು ಳಳ**

ಕಲ್ಲು "ಕಲ್ಲು" ಕಳ್ಳು "ಕರಳು"

ಪಲ್ಲಿ "ಪಲ್ಲಿ" ಪಳ್ಳಿ "ಹಳ್ಳಿ"

**ವವ ಮತ್ತು ಯಯ**

ಅವ್ವ "ತಾಯಿ" ಅಯ್ಯ "ತಾತ"

ಊವು "ಹೂ" ಉಯ್ಯಿ "ಉಯ್ಯಿ"

ಪ ಮತ್ತು ಪಪ

ಚೀಪು "ಚೀಪು" ಚಿಪ್ಪು "ಚಿಪ್ಪು"

ಕಪಿ "ಕೋತಿ" ಕಪ್ಪೆ "ಕಪ್ಪೆ"

ತ ಮತ್ತು ತತ

ಕೋತಿ "ಕೋತಿ" ಕೊತ್ತಿ "ಬೆಕ್ಕು"

ಚಿತೆ "ಶವ" ಚಿತ್ತ "ಮನಸ್ಸು"

ಟ ಮತ್ತು ಟಟ

ಮಟ "ಮಠ" ಮಟ್ಟ "ಸಮ"

ಪಟ "ಸಾಲು" ಪಟ್ಟ "ಪಟ್ಟ"

ಚ ಮತ್ತು ಚಚ

ಕಾಚ "ಒಳಹುಡುಪು" ಕಚ್ಚೆ "ಪಂಚೆ"

ಆಚೆ "ಹೊರಗೆ" ಅಚ್ಚೆ "ಹಚ್ಚೆ"

ಬ ಮತ್ತು ಬಬ

ಅಬೆ "ಹವೆ" ಅಬ್ಬ "ಹಬ್ಬ"

ಗೂಬೆ "ಗೂಬೆ" ಗುಬ್ಬಿ "ಗುಬ್ಬಿ"

ದ ಮತ್ತು ದದ

ಗದೆ "ಗದೆ" ಗದ್ದೆ "ಗದ್ದೆ"

ಸದ "ಸದ" ಸಬ್ದ "ಶಬ್ಧ"

ಟ ಮತ್ತು ಟಟ

ಆಟ "ಆಟ" ಅಟ್ಟ "ಅಟ್ಟ"

| | | | |
|---|---|---|---|
| ಊಟ | "ಊಟ" | ಉಟ್ಟ | "ತೊಡು" |

**ಡ ಮತ್ತು ಡಡ**

| | | | |
|---|---|---|---|
| ಗಿಡ | "ಸಸಿ" | ಗಿಡ್ಡ | "ಕುಳ್ಳ" |
| ಸೆಡೆ | "ಸೆಡೆ" | ಸಡ್ಡು | "ಗುಡಿಸಲು" |

**ಜ ಮತ್ತು ಜಜ**

| | | | |
|---|---|---|---|
| ಅಜ | "ಅವನು" | ಅಜ್ಜ | "ತಾತ" |
| ಗಜ | "ಅಳತೆ" | ಗೆಜ್ಜೆ | "ಗೆಜ್ಜೆ" |

**ಗ ಮತ್ತು ಗಗ**

| | | | |
|---|---|---|---|
| ಮಗ | "ಮಗ" | ಮೊಗ್ಗು | "ಮೊಗ್ಗು" |
| ಅಗೇವು | "ಅಗೇವು" | ಅಗ್ಗ | "ಹಗ್ಗ" |

**ಮ ಮತ್ತು ಮಮ**

| | | | |
|---|---|---|---|
| ತಿಮಿ | "ತಿವಿ" | ತಿಮ್ಮ | "ಹೆಸರು" |
| ಕಿಮಿ | "ಕಿಮಿ" | ಕಮ್ಮಿ | "ಕಡಿಮೆ" |

**ನಮತ್ತು ನನ**

| | | | |
|---|---|---|---|
| ಮೊನೆ | "ತುದಿ" | ಮೊನ್ನೆ | "ಮೊನ್ನೆ" |
| ಕೆನೆ | "ಕೆನೆ" | ಕೆನ್ನೆ | "ಕೆನ್ನೆ" |

**ಣ ಮತ್ತು ಣಣ**

| | | | |
|---|---|---|---|
| ಬೆಣೆ | "ಬೆಣೆ" | ಬೆಣ್ಣೆ | "ಬೆಣ್ಣೆ" |
| ಅಣೆ | "ಅಣೆ" | ಎಣ್ಣೆ | "ಎಣ್ಣೆ" |

**ಸ ಮತ್ತು ಸಸ**

ಬಸಿ "ಸೋಸು" ಬಸ್ಸು "ಬಸ್ಸು"

ವಸಿ "ಸ್ವಲ್ಪ" ವಸ್ಸು "ಒದಿಸು"

**ಲ ಮತ್ತು ಲಲ**

ಇಲಿ "ಇಲಿ" ಎಲ್ಲಿ "ಎಲ್ಲಿ"

ಬೇಲಿ "ಬೇಲಿ" ಬೆಲ್ಲ "ಬೆಲ್ಲ"

**ಳ ಮತ್ತು ಳಳ**

ಕುಳ "ಮನೆತನ" ಕುಳ್ಳ "ಕುಳ್ಳ"

ಗುಳ "ಗುಳ" ಗುಳ್ಳೆ "ಗುಳ್ಳೆ"

**ವ ಮತ್ತು ವವ**

ನವೆ "ಕಡಿತ" ನೋವ್ವು "ನೋವು"

ಅವ "ಅವನು" ಅವ್ವ "ತಾಯಿ"

**ಯ ಮತ್ತು ಯಯ**

ಆಯ "ಅನುಕೂಲ" ಅಜ್ಜ "ಅಜ್ಜ"

ಬಯ "ಭಯ" ಬಯ್ಯಿ "ಬಯ್ಯುವುದು"

ಈ ರೀತಿಯಾದ ಸ್ವರ ಮತ್ತು ವ್ಯಂಜನಗಳ ಧ್ವನಿಮಾಗಳು ಮಳವಳ್ಳಿ ಕನ್ನಡದಲ್ಲಿ ಬಳಕೆಗೊಳ್ಳುವುದು. ಇವುಗಳು ಉಚ್ಚರಿತ ಮತ್ತು ಅರ್ಥದ ನೆಲೆಗಳು ಬೇರೆ ಕನ್ನಡಗಳಿಗಿಂತ ಭಿನ್ನವಾದವು ಎಂಬುದುನ್ನು ಈ ರೀತಿಯಾಗಿ ನೋಡಬಹುದು.

ಮಳವಳ್ಳಿ ಕನ್ನಡದಲ್ಲಿ ಹತ್ತು ಸ್ವರಗಳ ಜೊತೆಗೆ ಐದು ಪ್ರಾದೇಶಿಕ ಸ್ವರಗಳು ಇರುವುದು ಕಂಡುಬರುತ್ತದೆ. ಈ ಐದು ಪ್ರಾದೇಶಿಕ ಸ್ವರಗಳು ತಮ್ಮದೇ ಆದ ಬಳಕೆಯ ಕ್ರಮಗಳನ್ನು

ಹೊಂದಿವೆ ಎನ್ನುವುದನ್ನು ಅನೇಕ ಉದಾಹರಣೆಯ ಮೂಲಕ ಗುರುತಿಸಬಹುದು. ಎ, ಏ, ಒ, ಓ, ಆ ಈ ಐದು ಸ್ವರಗಳಿಗೆ ಮತ್ತಷ್ಟು ಉದಾಹರಣೆಗಳನ್ನು ಕಾಣಬಹುದು.

| **ಮಳವಳ್ಳಿ ಕನ್ನಡ** | **ಬರಹ ಕನ್ನಡ** |
| --- | --- |
| ತ್ವಾಟ | ತೋಟ |
| ಮ್ಯಾಲೆ | ಮೇಲೆ |
| ಗ್ವಾಡೆ | ಗೋಡೆ |
| ಕ್ವಾಟೆ | ಕೋಟೆ |
| ಕ್ವರೆ | ಕೊರೆ |
| ತ್ವರೆ | ತೊರೆ |
| ತ್ಯಾಮ | ತೇವ |
| ಬ್ಯಾರೆ | ಬೇರೆ |
| ಬ್ಯಾಳೆ | ಬೇಳೆ |
| ಕ್ಯಳ್ಗೆ | ಕೆಳಗೆ |
| ತ್ಯರ | ತೆರ |
| ತ್ವಳೆ | ತೊಳೆ |

ಮಳವಳ್ಳಿ ಪ್ರದೇಶದ ಜನರಲ್ಲಿ ಸ್ಪರ್ಶ ವ್ಯಂಜನಗಳ ಉಚ್ಚಾರಣೆಯಲ್ಲಿ ಮಹಾ ಪ್ರಾಣಾಕ್ಷರಗಳು ಕಂಡು ಬರುವುದಿಲ್ಲ. ಎರಡು ವ್ಯಂಜನಗಳ ದ್ವಿತ್ವಗಳು ಮಳವಳ್ಳಿ ಪರಿಸರದ ಜನರಾಡುವ ಮಾತಿನಲ್ಲಿ ಎರಡು ರೀತಿಯ ವ್ಯಂಜನ ದ್ವಿತ್ವಗಳನ್ನು ಕಾಣಬಹುದು. ೧.ಎರಡು ವ್ಯಂಜನಗಳಿಂದ ಕೂಡಿದ ದ್ವಿತ್ವಗಳು. ೨.ಮೂರು ವ್ಯಂಜನಗಳಿಂದ ಕೂಡಿದ ದ್ವಿತ್ವಗಳು. ಮೂರು ವ್ಯಂಜನಗಳ ಒತ್ತುಗಳು ಕಾಗುಣಿತದ ವಲಯಕ್ಕೆ ಬಂದರೆ ಒತ್ತಕ್ಷರಗಳು ಮುಖ್ಯವೆನಿಸುತ್ತವೆ. ವ್ಯಂಜನಗಳಲ್ಲಿ ಸಜಾತೀಯ ಮತ್ತು ವಿಜಾತೀಯ ಒತ್ತಕ್ಷರಗಳಿರುತ್ತವೆ. ಇಲ್ಲಿ ವ್ಯಂಜನದ ಒತ್ತಕ್ಷರಗಳನ್ನು ಗುರುತಿಸುವಾಗ ಕನಿಷ್ಠತಮ ಪ್ರಕೃತಿ/ ಧಾತು ರೂಪವನ್ನು

ಮಾತ್ರ ಪರಿಗಣಿಸದೆ ಎರಡು ವಿರಾಮಗಳ ಮಧ್ಯದ ಉಚ್ಚಾರಣೆಯನ್ನು ಕನಿಷ್ಟ ಘಟಕವನ್ನಾಗಿ ತೆಗೆದುಕೊಳ್ಳಲಾಗಿದೆ. ಇದೇ ಅಂಶ ಎರಡು ದ್ವಿತ್ವ ವ್ಯಂಜನಕ್ಕೂ ಅನ್ವಯಿಸುತ್ತದೆ.

ಎರಡು ವ್ಯಂಜನಗಳ ಒತ್ತಕ್ಷರಕ್ಕೆ ಉದಾಹರಣೆ

| | |
|---|---|
| ತ್ ಗ್ | ಎತ್ಗಳು |
| ದ್ ರ್ | ಯದ್ರ್‌ಬೇಡ |
| ತ್ ರ್ | ಪಾತ್ರ್ ಸೂರೆ |
| ದ್ ರ್ | ಸಿಕುದ್ರೆ |
| ದ್ ರ್ | ತಗ್‌ದ್ರು |

ಮೂರು ವ್ಯಂಜನಗಳ ಒತ್ತಕ್ಷರಕ್ಕೆ ಉದಾಹರಣೆ

| | |
|---|---|
| ಪ್ ಲ್ ಮ್ | ಚಾಪ್ಲ್ಮೀನು |
| ಪ್ ರ್ ಚ್ | ಕಪ್ರ್ಚೆಟ್ಟಿ |
| ಬ್ ಣ್ ದ್ | ಕಬ್ಣದಿರ್ಚೆ |
| ಬ್ ರ್ ಗ್ | ಸಾಬ್ರ್ಗಳೆ |
| ತ್ ರ್ ಮ್ | ಪುರೋತ್ರ್‌ಮನ್ಗೆ |
| ದ್ ರ್ ಬ್ | ಅದ್ರ್‌ಸಾಯ್‌ದಿಂದ |
| ದ್ ಸ್ ಕ್ | ಸೆರ್ಗೊದ್‌ಸ್ಕಾಂಡು |
| ಕ್ ಸ್ ತ್ | ಅಕಸ್‌ಸ್ತಿಮಿ |
| ಗ್ ಲ್ ಮ್ | ಯಗ್ಲ್‌ಮ್ಯಾಲೆ |

### ೩.೪. ಧ್ವನಿಪರಿವರ್ತನೆ

ಪರಿಸರಕ್ಕೆ ಒಡ್ಡಿದ ಪ್ರತಿಯೊಂದು ವಸ್ತುವು ವ್ಯತ್ಯಾಸ ಹೊಂದಲೇ ಬೇಕು. ಪರಿವರ್ತನೆ ಪ್ರಕೃತಿಯ ನಿಯಮ. ಪ್ರಾಕೃತಿಕವಾಗಿಯೂ ಪರಿವರ್ತನೆಯಾಗುತ್ತದೆ ಅಂದ ಮೇಲೆ ಪ್ರತಿನಿತ್ಯ ಮನುಷ್ಯರಿಂದ ಬಳಕೆಗೊಳ್ಳುವ ಭಾಷೆಯಲ್ಲಿ ಪರಿವರ್ತನೆಯಾಗದೆ ಇರಲು ಸಾಧ್ಯವೆ. ಜನರು ಬಳಸುವ ಮಾತಿನ ಉಚ್ಚಾರಣೆಯಲ್ಲಿ ಕಾಲದಿಂದ ಕಾಲಕ್ಕೆ ಉಂಟಾಗುವ ಪರಿವರ್ತನೆಯನ್ನು ಆ ಭಾಷೆಯಲ್ಲಿ ಉಂಟಾಗುವ ಧ್ವನಿ ಪರಿವರ್ತನೆ ಅಥವಾ ಧ್ವನಿ ವ್ಯತ್ಯಾಸ ಎಂದು ಕರೆಯುತ್ತಾರೆ. ಹೀಗೆ ಉಂಟಾಗುವ ಪರಿವರ್ತನೆಗಳು ಧ್ವನಿ ಅಥವಾ ಉಚ್ಚಾರಣೆಗೆ ಮಾತ್ರ ಮೀಸಲಾಗಿರದೆ ಅರ್ಥದಲ್ಲಿ, ಕೆಲವೊಮ್ಮೆ ಪ್ರಯೋಗದಲ್ಲಿಯೂ ವ್ಯತ್ಯಾಸ ಉಂಟಾಗುವುದನ್ನು ಕಾಣಬಹುದು. ಹೀಗೆ ಉಂಟಾಗುವ ವ್ಯತ್ಯಾಸಗಳಿಂದ ಕೆಲವು ಸಂದರ್ಭಗಳಲ್ಲಿ ಭಾಷೆ ಅರ್ಥವಾಗದೇ ಇರುವ ಸಾಧ್ಯತೆಯೂ ಉಂಟು. ಮಳವಳ್ಳಿ ಪರಿಸರದಲ್ಲಿ ಮಾತನಾಡುವ ಮಾತಿನಲ್ಲಿ ಕಂಡುಬರುವ ಧ್ವನಿ ವ್ಯತ್ಯಾಸಗಳನ್ನು ಗುರುತಿಸಬಹುದು.

| ಮಳವಳ್ಳಿ ಕನ್ನಡ | ಬರಹ ಕನ್ನಡ |
|---|---|
| ಕಾವ್ಲಿ | ಕಾಲುವೆ |
| ಕಾರ್ಲ | ಕಾಲರ |
| ವೊಸ್ಲು | ಹೊಸ್ತಿಲು |
| ಪರ್ಸಾದ | ಪ್ರಸಾದ |
| ಕಳಾಸು | ಕ್ಲಾಸ್ |
| ಸಿಲೇಟು | ಸ್ಲೇಟ್ |
| ತಿರ್ಸೂಲ | ತ್ರಿಸೂಲ |
| ವಾನ | ವಾಹನ |
| ಕೂದು | ಕುಯಿದು |
| ಪುರೋತ್ರು | ಪುರೋಹಿತರು |
| ಆಲೆ | ಆಗಲೆ |

| | |
|---|---|
| ತಾರ್ಸು | ಸಾರಿಸು |

ಭಾಷೆಯನ್ನು ಬಳಸುವಾಗ ಉಚ್ಚಾರಣೆಯ ಸಂದರ್ಭದಲ್ಲಿ ಪದಮಧ್ಯದ ಅಕ್ಷರಗಳು ಲೋಪವಾಗುವುದನ್ನು ಕಾಣಬುಹುದು. ಇಲ್ಲವೆ ಹಿಂದು, ಮುಂದಿನ ಅಕ್ಷರಗಳಲ್ಲಿ ಸೇರಿ ಉಚ್ಚಾರಗೊಳ್ಳುತ್ತವೆ. ಅದಷ್ಟೆ ಅಲ್ಲದೆ ಕೆಲವೊಮ್ಮೆ ಅಂತ್ಯಾಕ್ಷರಗಳು ಲೋಪವಾಗುವುದನ್ನು ಕಾಣಬಹುದು.

| ಮಳವಳ್ಳಿ ಕನ್ನಡ | ಬರಹ ಕನ್ನಡ |
|---|---|
| ತಾಪತ್ರ | ತಾಪತ್ರಯ |
| ಸಂಸೆ | ಸಂಶಯ |
| ಎರ | ಇರುವೆ |

ಕೆಲವೊಮ್ಮೆ ಆದಿಸ್ವರ ಅಥವಾ ವ್ಯಂಜನ ಬಿಟ್ಟು ಹೋಗಿರುವುದನ್ನು ಕಾಣಬಹುದು.

| ಮಳವಳ್ಳಿ ಕನ್ನಡ | ಬರಹ ಕನ್ನಡ |
|---|---|
| ಅಳ್ಳ | ಪಳ್ಳ, ಪಡುವಲ |
| ಈಳ್ಯ | ವೀಳ್ಯ |
| ಅಪ್ಪೆ | ರೆಪ್ಪೆ |
| ಇಸ | ವಿಷ |
| ಇಂಬಿ | ನಿಂಬಿ |

ಇನ್ನು ಕೆಲವು ಸಾರಿ ಒಂದೇ ಪದದಲ್ಲಿ ಅನೇಕ ಧ್ವನಿಪರಿವರ್ತನೆಗಳಾಗಿರುವುದನ್ನು ಕಾಣಬಹುದು. ಮೊದಲು ಮಧ್ಯ ಸ್ವರ ಲೋಪವಾಗಿ ವಿಜಾತೀಯ ದ್ವಿತ್ವವಾಗಿ ಮತ್ತೆ ಸಜಾತಿಯ ದ್ವಿತ್ವವಾಗಿರುವುದನ್ನು ಕಾಣಬಹುದು.

ಮಳ್ಳು<ಮರ್ಳು<ಮರಳು

ಅಳ್ಳು<ಅರ್ಳು<ಹರಳು

ಕೊಳ್ಳಿ<ಕೊಡ್ಲಿ<ಕೊಡಲಿ

**ಲಕಾರ ಮತ್ತು ರಕಾರ ವ್ಯತ್ಯಾಸ**

| **ಮಳವಳ್ಳಿ ಕನ್ನಡ** | **ಬರಹ ಕನ್ನಡ** |
| --- | --- |
| ಸಿವಲಾತ್ರಿ | ಶಿವರಾತ್ರಿ |
| ಮಾಲಾಮಿ | ಮಾರನವಮಿ |
| ಸಂಕಲಾತಿ | ಸಂಕ್ರಾಂತಿ |
| ಪಲಿಕ್ರಮಿ | ಪರಾಕ್ರಮಿ |

**ವಾ<ಹೊ<ಹೋ**

ವಾದ್ರು ವಾಗ್ತಾರೆ, ವಾದಾಗ, ವಾತ, ವತಾರೆ(ಹೊತ್ತಾರೆ)

**ಜಕಾರ ಮತ್ತು ದಕಾರದ ವ್ಯತ್ಯಾಸ**

| **ಮಳವಳ್ಳಿ ಕನ್ನಡ** | **ಬರಹ ಕನ್ನಡ** |
| --- | --- |
| ಜಿನ | ದಿನ |
| ಜವ್ನ | ದವನ |
| ಜೋತ್ರ | ದೋತ್ರ |

**ವಾಕಾರ ಮತ್ತು ಓಕಾರದ ವ್ಯತ್ಯಾಸ**

| **ಮಳವಳ್ಳಿ ಕನ್ನಡ** | **ಬರಹ ಕನ್ನಡ** |
| --- | --- |
| ಸ್ವಾನ | ಸೋನೆ |
| ಬ್ವಾನ | ಬೋನ |
| ಗ್ವಾಟೆ | ಗೋಟೆ |

**ಳಕಾರ ಮತ್ತು ಡಕಾರದ ವ್ಯತ್ಯಾಸ**

| **ಮಳವಳ್ಳಿ ಕನ್ನಡ** | **ಬರಹ ಕನ್ನಡ** |
| --- | --- |
| ಕಳ್ಳೆ | ಕಡಲೆ |

| | |
|---|---|
| ಗುಳ್ಳು | ಗುಡಿಸಲು |
| ಸಳ್ಳ | ಸಡಿಲ |
| ಸೊಳ್ಳು | ಸೊಡಿಲು |

### ೩.೫. ನಿರ್ದೇಶಕ ಸರ್ವನಾಮಗಳು

ಮಳವಳ್ಳಿ ಕನ್ನಡದಲ್ಲಿ ಬಳಕೆಗೊಳ್ಳುವ ನಿರ್ದೇಶಕ ಸರ್ವನಾಮಗಳು ಬಹಳ ವಿಶಿಷ್ಟವಾದವು. ಈ ಪ್ರದೇಶದಲ್ಲಿ ಬಳಸುವ ನಿರ್ದೇಶಿತ ಸರ್ವನಾಮಗಳಲ್ಲಿ ಹೆಚ್ಚು 'ಚ' ಕಾರವನ್ನು ಬಳಸಿ ಪದಗಳನ್ನು ಉಪಯೋಗಿಸುವುದನ್ನು ಕಾಣಬಹುದು. ಬರಹ ಕನ್ನಡದಲ್ಲಿ ಬಳಸುವ ರೂಪಕ್ಕಿಂತಲೂ ವಿಭಿನ್ನವಾಗಿ ಬಳಕೆಗೊಳ್ಳುವುದನ್ನು ಕಾಣಬಹುದು.

| ಮಳವಳ್ಳಿ ಕನ್ನಡ | ಬರಹ ಕನ್ನಡ |
|---|---|
| ಆಚೊರಿ | ಅಲ್ಲಿ |
| ಈಚೊರಿ | ಇಲ್ಲಿ |
| ಬಲ್ಚೊರಿ | ಬಲಗಡೆ |
| ಎಡ್ಚೊರಿ | ಎಡಗಡೆ |
| ವಚ್ಚೊರಿ | ಒಂದು ಕಡೆ |
| ಮುಂಚೋರಿ | ಮುಂದೆ |
| ಇನ್ಚೋರಿ | ಹಿಂದೆ |
| ಕಡ್ಚೋರಿ | ಕಡೆ |
| ಯಾಚೋರಿ, ಎಚ್ಚೋರಿ | ಎಲ್ಲಿ |

### ೩.೬. ಪ್ರಶ್ನಾರ್ಥಕಗಳು

ಮಳವಳ್ಳಿ ಕನ್ನಡದಲ್ಲಿ ಬಳಕೆಗೊಳ್ಳುವ ಪ್ರಶ್ನಾರ್ಥಕಗಳು ಬರಹ ಕನ್ನಡಕ್ಕಿಂತ ಭಿನ್ನವಾಗಿ ಈ ಪರಿಸರದಲ್ಲಿ ಬಳಕೆಗೊಳ್ಳುವುದನ್ನು ಕಾಣಬಹುದು. ಮಳವಳ್ಳಿ ಪರಿಸರದ ಕನ್ನಡದಲ್ಲಿ

ಪ್ರಶ್ನಾರ್ಥಕಗಳು ಬಳಕೆಗೊಳ್ಳುವ ಪದಮಧ್ಯ ಅಕ್ಷರಗಳು 'ಂ' ಅನುಸ್ವರದಿಂದ ಕೂಡಿರುತ್ತದೆ ಎಂಬುದನ್ನು ಉದಾಹಾರಣೆಗಳೊಂದಿಗೆ ಕಾಣಬಹುದು. ಈ ಅನುಸ್ವರ ಸಹಿತವಾದ ಬಳಕೆಯ ಕ್ರಮವು ಹಳೆಗನ್ನಡದ ಶಾಸನಗಳಲ್ಲಿ ಬಳಕೆಯಲ್ಲಿರುವುದನ್ನು ಕಾಣಬಹುದು. ಹಲ್ಮಿಡಿ ಶಾಸನದಲ್ಲಿ ಅನುಸ್ವಾರ ಸಮುಚ್ಚಗಳು ಹೆಚ್ಚು ಬಳಕೆಯಲ್ಲಿರುವುದನ್ನು ಈ ಶಾಸನದಲ್ಲಿ ಗಮನಿಸಬಹುದು.

ಅದೇ ರೀತಿ ಮಳವಳ್ಳಿ ಕನ್ನಡವೂ ಕೂಡ ಅನುಸ್ವರ ಸಹಿತ ರೂಪಗಳನ್ನು ಪ್ರಶ್ನಾರ್ಥಕ ರೂಪಗಳಲ್ಲಿ ಇಂದಿಗೂ ಉಳಿಸಿಕೊಂಡಿರುವುದನ್ನು ಕೆಳಗಿನ ಉದಾಹರಣೆಗಳ ಮೂಲಕ ಕಾಣಬಹುದು.

| **ಮಳವಳ್ಳಿ ಕನ್ನಡ** | **ಬರಹ ಕನ್ನಡ** |
|---|---|
| ಅಂಗೆ | ಹಾಗೆ |
| ಇಂಗೆ | ಹೀಗೆ |
| ಯೆಂಗೆ | ಹೇಗೆ |
| ಅಂಗಾರೆ | ಹಾಗಾದರೆ |
| ಇಂಗಾರೆ | ಹೀಗಾದರೆ |

### ೩.೭. ವಿಧ್ಯರ್ಥಕ ರೂಪಗಳು

ಒಂದು ಕ್ರಿಯೆಯ ವಿಷಯದಲ್ಲಿ ವಿಧಿ ನಿಷೇಧ ಸಂಭಾವನೆಗಳನ್ನು ತಿಳಿಸುವುದಕ್ಕಾಗಿ ವಿಧ್ಯರ್ಥಕ ರೂಪಗಳನ್ನು ಧಾತುಗಳಿಗೆ ಬಳಸಲಾಗುತ್ತದೆ. ಈ ವಿಧ್ಯರ್ಥಕ ರೂಪಗಳು ಮಳವಳ್ಳಿ ಕನ್ನಡದಲ್ಲಿ ಹೇಗೆ ಬಳಕೆಗೊಳ್ಳುತ್ತದೆ ಎಂಬುವುದನ್ನು ಕಾಣಬಹುದು. ಮಳವಳ್ಳಿ ಕನ್ನಡದಲ್ಲಿ ವಿಧ್ಯರ್ಥಕ ರೂಪಗಳು ಣ ಕಾರವಾಗಿಯೂ, ಬರಹ ಕನ್ನಡವಲ್ಲಿ ಅದು ಎ ಕಾರವಾಗಿಯು ಬಳಕೆಯಾಗುವುದನ್ನು ಕಾಣಬಹುದು. ಈ ಕ್ರಿಯೆಯು ಸಂಭಾವನಾತ್ಮಕ ಹಂತದಲ್ಲಿ ಈ ಬದಲಾವಣೆಯನ್ನು ಗುರುತಿಸಬಹುದು.

**ಣಕಾರ ಮತ್ತು ಎಕಾರ ಬಳಕೆ**

| **ಮಳವಳ್ಳಿ ಕನ್ನಡ** | **ಬರಹ ಕನ್ನಡ** |
|---|---|
| ವಾಗಾಮೆ, ವೊಗ್ಮೆ | ಹೋಗೋಣ |

| | |
|---|---|
| ಬರಾಮೆ, ಬರ್ನೆ | ಬರೋಣ |
| ತಿನ್ನೂಮೆ, ತಿನ್ನೆ | ತಿನ್ನೋಣ |
| ಕರಿಮೆ | ಕರೆಯೋಣ |

ಆದರೆ ನಿಷೇಧಾರ್ಥಕ ರೂಪಗಳಲ್ಲಿ ಅವು **ಅಲಿ** ಎಂಬ ಧಾತುವಿಗೆ ಬರುವುದನ್ನು ಕಾಣಬಹುದು. ಅದು ಬರಹ ಕನ್ನಡದಲ್ಲಿ ಇಲ್ಲ ಎಂದು ಬಳಕೆಗೊಳ್ಳುತ್ತದೆ. ಮಳವಳ್ಳಿ ಕನ್ನಡ **ಅಲಿ** ಎಂಬ ರೂಪ ಬಳಕೆಗೊಳ್ಳುವುದನ್ನು ಗಮನಿಸಬಹುದು.

| ಮಳವಳ್ಳಿ ಕನ್ನಡ | ಬರಹ ಕನ್ನಡ |
|---|---|
| ವೊಗಲಿ | ಹೋಗುವುದಿಲ್ಲ |
| ಬರಲಿ | ಬರುವುದಿಲ್ಲ |
| ತಿನ್ನಲಿ | ತಿನ್ನುವುದಿಲ್ಲ |
| ಕರ್ಯಲಿ | ಕರೆಯುವುದಿಲ್ಲ |

### ೩.೮. ಸಂಬೋಧನ ಪ್ರಯೋಗ

ಸಂಬೋಧನ ಪ್ರಯೋಗ ಮಳವಳ್ಳಿ ಕನ್ನಡದಲ್ಲಿ ಹೇಗೆ ಬಳಕೆಗೊಳ್ಳುತ್ತವೆ ಎಂಬುವನ್ನು ಕಾಣಬಹುದು.

ಬವ್ವಾ

ಬಮ್ಮಿ

ಓಲಾ

ಬಲಾ

ಇಂತಹ ಪದಗಳನ್ನು ಉಚ್ಚರಿಸುವಾಗ ಮೊದಲಕ್ಷರದ ಮೇಲೆ ಒತ್ತುಕೊಟ್ಟು ಕೊನೆಯಲ್ಲಿ ಒಂದು ರೀತಿಯ ಗೀತಾತ್ಮ ಎಳೆತವನ್ನು ಕಾಣಬಹುದು.

ಮೇಲ್ಜಾತಿಯವರು ಕೆಳಜಾತಿಯ ವ್ಯಕ್ತಿಗಳನ್ನು ಕರೆಯುವ ಸಂದರ್ಭದಲ್ಲಿ ಈ ಸಂಬೋಧನ ರೂಪಗಳನ್ನು ಬಳಸುತ್ತಾರೆ. ಹೆಂಗಸರನ್ನು ಬಮ್ಮಿ ಎನುತಲು, ಗಂಡಸರನ್ನು ಬಲಾ, ಓಲಾ ಎನುತಲು ಮೇಲ್ಜಾತಿಯ ಜನರು ಕೆಳಜಾತಿಯ ಜನರನ್ನು ಏಕವಚನ ರೂಪದಲ್ಲಿ ಬಳಸುತ್ತಾರೆ.

ಕೆಳಜಾತಿಯ ಜನರು ಮೇಲ್ಜಾತಿಯ ಜನರನ್ನು ಕರೆಯುವ ಸಂದರ್ಭದಲ್ಲಿ ಬವ್ವಾ, ಬುದ್ಧಿ, ಸ್ವಾಮಿ ಎಂದು ಬಹುವಚನ ರೂಪಗಳನ್ನು ಬಳಸುವುದನ್ನು ಕಾಣಬಹುದು.

ಕೆಲ್ಸಕ್ ಬರ್ದೆ ಎಲ್ಲಿಗೋಗಿದ್ದಮ್ಮಿ

ಬಮ್ಮಿ ಕೆಲ್ಸಕ್ಕೆ

ನಮ್ ಗದ್ದೆತಕೆ ಬಲಾ

ವಲ್ತಕೆ ಓಲಾ ಅಟ್ಟಿಲ್ದಿಕಂದ್ ಎನ್ ಮಾಡಿಯೇ

ಮಳವಳ್ಳಿ ಪ್ರದೇಶದಲ್ಲಿ ಕೆಳಜಾತಿಯ ಜನರು ಮೇಲ್ಜಾತಿವರನ್ನು ಸಂಬೋಧಿಸಬೇಕಾದರೆ ಗೌರವ ಸೂಚಕವಾಗಿ 'ಏಳಿ, ಬುದ್ದಿ' ಎಂಬ ಪದಗಳನ್ನು ಬಳಸಿ ಮಾತನಾಡುವುದನ್ನು ಕಾಣಬಹುದು.

| **ಮಳವಳ್ಳಿ ಕನ್ನಡ** | **ಬರಹ ಕನ್ನಡ** |
|---|---|
| ಅವ್ನಿಯೇಳಿ | ಇದ್ದೇನೆ ಸ್ವಾಮಿ |
| ಇಲ್ಲೇಳಿ | ಇಲ್ಲ ಸ್ವಾಮಿ |
| ವಾದಾರೇಳಿ | ಹೋಗುತ್ತಿರ |
| ಬತ್ತಿಮೇಳಿ | ಬರುತ್ತೇವೆ |
| ಆಯ್ತೇಳಿ | ಮಾಡುತ್ತೇನೆ, ಹೌದು |

ನಾ ಇಲ್ಲೆ ಅವ್ನಿಯೇಳಿ

ನಾ ಎಲ್ಲೂಗ್ಗ ವೋಗಲ್ನೇಳಿ

ನಾ ಕದ್ದೀಲೇಳಿ

ನಾ ತಪ್ ಮಾಡ್ನಿಲೇಳಿ

ಊರ್ಗೆ ವಾದಾರೇಳಿ

ಎಲ್ಗೆ ವಾದಾರೇಳಿ

ನಾಮ್ ಬತ್ತಿಮೇಳಿ

ನಾಮು ಅಟ್ಟಿತಕ್ಕೆ ಬತ್ತಿಮೇಳಿ

ನನ್ ಕೆಲ್ಸ ಆಯ್ತೇಳಿ

ನಂದ್ ಇಟ್ಟುಂಡು ಆಯ್ತೇಳಿ

### ೩.೯. ಮಳವಳ್ಳಿ ಕನ್ನಡ ಮತ್ತು ಮೂಲದ್ರಾವಿಡ ಭಾಷೆಯ ರೂಪ

ಭಾಷಾ ವಿದ್ವಾಂಸರು ಗುರುತಿಸಿರುವಂತೆ ದ್ರಾವಿಡ ಭಾಷೆಯಲ್ಲಿ ಹತ್ತು ಸ್ವರ ಧ್ವನಿಮಾಗಳು ಮತ್ತು ಇಪ್ಪತ್ತುಮೂರು ವ್ಯಂಜನ ಧ್ವನಿಮಾಗಳು ಪ್ರಧಾನವಾಗಿರುವುದನ್ನು ಗುರುತಿಸಿದ್ದಾರೆ. ಈ ಸ್ವರಗಳು ಮತ್ತು ವ್ಯಂಜನಗಳು ಮಳವಳ್ಳಿ ಕನ್ನಡದಲ್ಲಿ ಹೇಗೆ ಬಳಕೆಗೊಳ್ಳುತ್ತದೆ ಎನ್ನುವುದನ್ನು ಕಾಣಬಹುದು. ದ್ರಾವಿಡ ಭಾಷೆಗೂ ಮಳವಳ್ಳಿ ಕನ್ನಡ ಭಾಷೆಗೂ ಇರುವ ಸಂಬಂಧ ಮತ್ತು ವ್ಯತ್ಯಾಸಗಳನ್ನು ಇಲ್ಲಿ ವಿವರಿಸಲಾಗಿದೆ.

### ೩.೯.೧. ಸ್ವರಗಳು

ದ್ರಾವಿಡ ಭಾಷೆಯ ಹತ್ತು ಸ್ವರ ಧ್ವನಿಮಾಗಳಲ್ಲಿ ಐದು ಹ್ರಸ್ವ ಸ್ವರ ಧ್ವನಿಮಾಗಳಾಗಿದ್ದರೆ, ಉಳಿದ ಐದು ದೀರ್ಘ ಸ್ವರ ಧ್ವನಿಮಾಗಳಾಗಿವೆ. ಸ್ವರ ಧ್ವನಿಮಾಗಳನ್ನು ಈ ಕೆಳಕಂಡಂತೆ ಗುರುತಿಸಲಾಗಿದೆ.

**ಅ**

| **ಮೂಲದ್ರಾವಿಡ ಕನ್ನಡ** | **ಮಳವಳ್ಳಿ ಕನ್ನಡ** |
|---|---|
| ಅಕ್ಕ್ | ಅಕ್ಕ್ |
| ಕಣ್ | ಕಣ್ |

| | |
|---|---|
| ಅಣ್ | ಅಣ್ |
| ಪಲ್ | ಪಲ್ |

ಆ

| ಮೂಲದ್ರಾವಿಡ | ಕನ್ನಡ | ಮಳವಳ್ಳಿ ಕನ್ನಡ |
|---|---|
| ಪಾಲ್ | ಪಾಲ್ |
| ಕಾಲ್ | ಕಾಲ್ |
| ಕಾಣ್ | ಕಾಣ್ |

ಇ

| ಮೂಲದ್ರಾವಿಡ ಕನ್ನಡ | ಮಳವಳ್ಳಿ ಕನ್ನಡ |
|---|---|
| ಇಟ್ | ಇಟ್ |
| ತಿನ್ | ತಿನ್ |

ಈ

| ಮೂಲದ್ರಾವಿಡ ಕನ್ನಡ | ಮಳವಳ್ಳಿ ಕನ್ನಡ |
|---|---|
| ನೀರ್ | ನೀರ್ |
| ಮೀನ್ | ಮೀನ್ |
| ಈರ್ | ಈರ್ |

ಉ

| ಮೂಲದ್ರಾವಿಡ ಕನ್ನಡ | ಮಳವಳ್ಳಿ ಕನ್ನಡ |
|---|---|
| ಉಳ್ | ಉಳ್ |
| ಪುಳಿ | ಪುಳಿ |
| ಕುಪ್ಪೆ | ಕುಪ್ಪೆ |

ಊ

| ಮೂಲದ್ರಾವಿಡ ಕನ್ನಡ | ಮಳವಳ್ಳಿ ಕನ್ನಡ |
|---|---|
| ಊರ್ | ಊರ್ |
| ಪೂವ್ | ಪೂವ್ |
| ನೂಲ್ | ನೂಲ್ |

ಎ

| ಮೂಲದ್ರಾವಿಡ ಕನ್ನಡ | ಮಳವಳ್ಳಿ ಕನ್ನಡ |
|---|---|
| ಎಲಿ | ಎಲೆ/ಎಲಿ |
| ಕೆವಿ | ಚೆಮಿ/ಕೆಮಿ |
| ವೆರಳ್ | ವೆರಳ್ |

ಏ

| ಮೂಲದ್ರಾವಿಡ ಕನ್ನಡ | ಮಳವಳ್ಳಿ ಕನ್ನಡ |
|---|---|
| ಏಳ್ | ಏಳ್ |
| ತೇಲ್ | ತೇಲ್ |

ಒ

| ಮೂಲದ್ರಾವಿಡ ಕನ್ನಡ | ಮಳವಳ್ಳಿ ಕನ್ನಡ |
|---|---|
| ಒನ್ದು | ಒನ್ದು |
| ತೊಟ್ | ತೊಟ್ |

ಓ

| ಮೂಲದ್ರಾವಿಡ ಕನ್ನಡ | ಮಳವಳ್ಳಿ ಕನ್ನಡ |
|---|---|
| ಓಡ್ | ಓಡ್ |
| ಕೋಲ್ | ಕೋಲ್ |

೩.೯.೨. ವ್ಯಂಜನಗಳು

ಕ್ ಮತ್ತು ಗ್

| ಮೂಲದ್ರಾವಿಡ ಕನ್ನಡ | ಮಳವಳ್ಳಿ ಕನ್ನಡ |
|---|---|
| ಕಲ್ಲ್ | ಕಲ್ಲ್ |
| ಕಯ್ | ಕಯ್ |
| ಕಾಯ್ | ಕಾಯ್ |
| ಗರಿ | ಗರಿ |
| ಗುಪ್ಪ | ಗುಪ್ಪೆ |
| ಕೆಯ್ | ಕೆಯ್/ಗೆಯ್ |

**ಚ್ ಮತ್ತು ಜ್**

| ಮೂಲದ್ರಾವಿಡ ಕನ್ನಡ | ಮಳವಳ್ಳಿ ಕನ್ನಡ |
|---|---|
| ಚಳಿ | ಸಳಿ |
| ಚಿಪ್ಪು | ಚಿಪ್ಪು |
| ಚಕ್ಕೆ | ಚಕ್ಕೆ |
| ಅಂಜು | ಅಂಜು |
| ಮಂಜು | ಮಂಜು |

**ಟ್ ಮತ್ತು ಡ್**

| ಮೂಲದ್ರಾವಿಡ ಕನ್ನಡ | ಮಳವಳ್ಳಿ ಕನ್ನಡ |
|---|---|
| ಆಡ್ | ಆಡ್ |
| ಕಡ್ | ಕಡ್ |
| ಗಿಡ್ | ಗಿಡ್ |

**ತ್ ಮತ್ತು ದ್**

| ಮೂಲದ್ರಾವಿಡ ಕನ್ನಡ | ಮಳವಳ್ಳಿ ಕನ್ನಡ |
|---|---|
| ತಲೆ | ತಲೆ |
| ತೂಂಗ್ | ತೂಂಗ್ |
| ತೊಗಲ್ | ತೊಗಲ್ |
| ಗದ್ದಿಗ್ | ಗದ್ದೆ |

**ಪ್ ಮತ್ತು ಬ್**

| ಮೂಲದ್ರಾವಿಡ ಕನ್ನಡ | ಮಳವಳ್ಳಿ ಕನ್ನಡ |
|---|---|
| ಪಲ್ | ಪಲ್ |
| ಪಾಲ್ | ಪಾಲ್ |
| ಪುಳಿ | ಪುಳಿ |
| ಬೇರ್ | ಬೇರ್ |
| ಬಿಳ್ | ಬಿಳ್ |
| ಬರ್ | ಬರ್ |

**ಅನುನಾಸಿಕ ವ್ಯಂಜನಗಳು**

**ಙ್**

| **ಮೂಲದ್ರಾವಿಡ ಕನ್ನಡ** | **ಮಳವಳ್ಳಿ ಕನ್ನಡ** |
|---|---|
| ಅಂಗಡಿ | ಅಂಗ್ಡಿ |
| ತಿಂಗಳ್ | ತಿಂಗ್ಳು |
| ತೊಂಗ್ | ತೊಂಗ್ |

**ಞ್**

| **ಮೂಲದ್ರಾವಿಡ ಕನ್ನಡ** | **ಮಳವಳ್ಳಿ ಕನ್ನಡ** |
|---|---|
| ಅಂಜು | ಅಂಜು |
| ಮಂಜು | ಮಂಜು |

**ಣ**

| **ಮೂಲದ್ರಾವಿಡ ಕನ್ನಡ** | **ಮಳವಳ್ಳಿ ಕನ್ನಡ** |
|---|---|
| ಕಣ್ | ಕಣ್ |
| ಪೆಣ್ | ಪೆಣ್ |
| ಹಣ್ | ಅಣ್ |

**ನ್**

| **ಮೂಲದ್ರಾವಿಡ ಕನ್ನಡ** | **ಮಳವಳ್ಳಿ ಕನ್ನಡ** |
|---|---|
| ನೀನ್ | ನೀನ್ |
| ನೀರ್ | ನೀರ್ |
| ತಾನ್ | ತಾನ್ |

**ಮ್**

| **ಮೂಲದ್ರಾವಿಡ ಕನ್ನಡ** | **ಮಳವಳ್ಳಿ ಕನ್ನಡ** |
|---|---|
| ಮೀನ್ | ಮೀನ್ |
| ಅಮ್ಮ್ | ಅಮ್ಮ್ |

**ಯ್ ಮತ್ತು ವ್**

| **ಮೂಲದ್ರಾವಿಡ ಕನ್ನಡ** | **ಮಳವಳ್ಳಿ ಕನ್ನಡ** |
|---|---|
| ಯಾಕ್ | ಯಾಕ್ |

| | |
|---|---|
| ಮೇಯ್ | ಮೇಯ್ |
| ವಾಯ್ | ವಾಯ್ |
| ಕಿವಿ | ಕಿಮಿ |

**ರ್**

| **ಮೂಲದ್ರಾವಿಡ ಕನ್ನಡ** | **ಮಳವಳ್ಳಿ ಕನ್ನಡ** |
|---|---|
| ಎರ್ಮೆ | ಎಮ್ಮೆ |
| ವೇರ್ | ವೇರ್ |

**ಲ್**

| **ಮೂಲದ್ರಾವಿಡ ಕನ್ನಡ** | **ಮಳವಳ್ಳಿ ಕನ್ನಡ** |
|---|---|
| ಪುಲಿ | ಪುಲಿ |
| ತಲ್ | ತಲ್ |

**ಳ್**

| **ಮೂಲದ್ರಾವಿಡ ಕನ್ನಡ** | **ಮಳವಳ್ಳಿ ಕನ್ನಡ** |
|---|---|
| ಬಿಳ್ | ಬಿಳ್ |
| ಪಳ್ಳಿ | ಪಳ್ಳಿ |

ಮೂಲ ದ್ರಾವಿಡದ ಪ ಕಾರ ಮಳವಳ್ಳಿ ಕನ್ನಡದಲ್ಲಿ ಪ ಕಾರವಾಗಿಯೇ ಬಳಕೆಯಲ್ಲಿರುವುದನ್ನು ಗುರುತಿಸಬಹುದು. ವಿಶೇಷವಾಗಿ ಪಕಾರವು ದಲಿತರಲ್ಲಿ ಬಳಕೆಯಾಗುತ್ತಿರುವುದನ್ನು ಗಮನಿಸಬಹುದು.

ದ್ರಾವಿಡ ಕನ್ನಡದಲ್ಲಿ ಶಬ್ದಗಳು ಸಾಮಾನ್ಯವಾಗಿ ವ್ಯಂಜನಾಂತ್ಯವಾಗಿರುವುದನ್ನು ಭಾಷಾ ವಿದ್ವಾಂಸರು ಗುರುತಿಸುತ್ತಾರೆ. ಈ ಲಕ್ಷಣ ಮಳವಳ್ಳಿ ಕನ್ನಡದಲ್ಲೂ ಬಳಕೆಯಲ್ಲಿದೆ. ಈ ರೀತಿ ಬಳಕೆಯಲ್ಲಿರುವುದನ್ನು ಸ್ವರ ಮತ್ತು ವ್ಯಂಜನಗಳ ಧ್ವನಿಮಾಗಳ ಮೂಲಕ ಮೇಲಿನ ಉದಾಹರಣೆಯ ಮೂಲಕ ಗುರುತಿಸಬಹುದು.

ಮಳವಳ್ಳಿ ಕನ್ನಡದಲ್ಲಿ ದ್ರಾವಿಡ ಭಾಷೆಯ ರೂಪವಾದ ಇ ಸ್ವರವು ಎ ಸ್ವರವಾಗಿ ಬದಲಾಗಿರುವುದನ್ನು ಗುರುತಿಸಿಕೊಳ್ಳಬಹುದು. 'ಎ'ಕಾರದ ಪ್ರಯೋಗ ಈ ಪರಿಸರದ ಭಾಷೆಯಲ್ಲಿ ಇಂದಿಗೂ ಉಳಿದುಕೊಂಡು ಬಂದಿರುವುದನ್ನು ಕಾಣಬಹುದು.

| **ಮಳವಳ್ಳಿ ಕನ್ನಡ** | **ಬರಹ ಕನ್ನಡ** |
|---|---|
| ಎರ | ಇರುವೆ |

| | |
|---|---|
| ಕೆಂಚೆರ | ಕೆಂಪು ಇರುವೆ |
| ಕಟ್ಟೆರ | ಕಪ್ಪು ಇರುವೆ |
| ಬೆಳಿ | ಬಿಳಿ |
| ಬೆಳ್ಳಸ | ಬಿಳಿ |

ಮೂಲದ್ರಾವಿಡದ ಎಕಾರ ಮಳವಳ್ಳಿ ಕನ್ನಡದಲ್ಲಿ ಬಳಕೆಯಲ್ಲಿರುವುದನ್ನು ಕಾಣಬಹುದು. ಅದರಲ್ಲೂ ಈ ಎ ಕಾರವು ಮಳವಳ್ಳಿ ತಾಲೋಕಿನ ಬೆಳಕವಾಡಿ, ರಾವಣಿ, ಪುರಿಗಾಲಿ ಸುತ್ತಮುತ್ತಲ ಪರಿಸರದಲ್ಲಿ ಉಳಿದುಕೊಂಡಿರುವುದನ್ನು ಗುರುತಿಸಬಹುದು.

**ಸ ಮತ್ತು ಶಕಾರ ಬಳಕೆ**

| ಮಳವಳ್ಳಿ ಕನ್ನಡ | ಬರಹ ಕನ್ನಡ |
|---|---|
| ಐಸಿರಿ | ಐಶ್ವರ್ಯ |
| ಸಬ್ದ | ಶಬ್ಧ |
| ಸಾಸನ | ಶಾಸನ |
| ಸಂಕ್ರ | ಶಂಕರ |

**ಯಾ ಮತ್ತು ವಕಾರಗಳ ಬಳಕೆ**

| ಮಳವಳ್ಳಿ ಕನ್ನಡ | ಬರಹ ಕನ್ನಡ |
|---|---|
| ಯಾಸ | ವೇಷ |
| ಯಾಳ್ಯ | ವೇಳೆ |
| ಯಂಕ್ಟೇಸ | ವೆಂಕಟೇಶ |

**ಟ ಮತ್ತು ತಕಾರಗಳ ಬಳಕೆ**

| ಮಳವಳ್ಳಿ ಕನ್ನಡ | ಬರಹ ಕನ್ನಡ |
|---|---|
| ಟಮಟೆ | ತಮಟೆ |

| | |
|---|---|
| ಟಾಕು | ತಾಕು(ಕೈತಾಕು) |

ಮಳವಳ್ಳಿ ಕನ್ನಡದಲ್ಲಿ ಯ, ಲ, ವ ಗಳು ಅನುನಾಸಿಕಗಳಾಗಿ ಉಚ್ಚಾರಗೊಳ್ಳುವುದನ್ನು ಕಾಣಬಹುದು.

| ಮಳವಳ್ಳಿ ಕನ್ನಡ | ಬರಹ ಕನ್ನಡ |
|---|---|
| ಆಮ್ಗೆ | ಅವಿಗೆ |
| ಇದ್ವಾಂಸ | ವಿದ್ವಾಂಸ |
| ಕಿಮಿ | ಕಿವಿ |
| ಜೀಮ | ಜೀವ |
| ತಿಮಿ | ತಿವಿ |
| ನೀಮು | ನೀವು |
| ನಾಮು | ನಾವು |

### ೩.೯.೩. ಲಿಂಗ ಮತ್ತು ವಚನ ವ್ಯವಸ್ಥೆ

ಕನ್ನಡ ವ್ಯಾಕರಣ ಶಾಸ್ತ್ರದಲ್ಲಿ ಲಿಂಗ, ವಚನ ವ್ಯವಸ್ಥೆಗೆ ವಿಶೇಷವಾದ ಸ್ಥಾನವಿದೆ. ದ್ರಾವಿಡ ಕನ್ನಡದಲ್ಲಿ ಮೂರು ಬಗೆಯ ಲಿಂಗಗಳು, ಎರಡು ಬಗೆಯ ವಚನಗಳು ಇರುವುದು ಕಂಡುಬರುತ್ತದೆ. ಮಳವಳ್ಳಿ ಕನ್ನಡದಲ್ಲಿ ಮೂರು ಲಿಂಗಗಳು, ಎರಡು ವಚನಗಳು, ಬಳಕೆಗೊಳ್ಳುತ್ತವೆ.

ದ್ರಾವಿಡ ಭಾಷೆಯಲ್ಲಿ ಬಳಕೆಗೊಳ್ಳುವ ಲಿಂಗ, ವಚನ ವ್ಯವಸ್ಥೆಗಳ ಬಗ್ಗೆ ವಿದ್ವಾಂಸರ ಅಭಿಪ್ರಾಯಗಳನ್ನು ಆದರಿ ಇಲ್ಲಿ ಚರ್ಚಿಸಲಾಗಿದೆ. ಯಾವ ಶಬ್ದ ಒಂದು ವಸ್ತು ಮತ್ತು ವ್ಯಕ್ತಿಯನ್ನು ಸೂಚಿಸುತ್ತವೊ ಅವನ್ನು ಏಕ ವಚನ ಎನುತಲು, ಎರಡು ವಸ್ತು, ವ್ಯಕ್ತಿಯನ್ನು ಸೂಚಿಸುವುದನ್ನು ಬಹುವಚನ ಎಂದು ಕರೆಯಲಾಗುತ್ತದೆ.

ಲಿಂಗವ್ಯವಸ್ಥೆಯಲ್ಲಿ ಜೀವ ಇರುವ ಮತ್ತು ಜೀವ ಇಲ್ಲದ ಎಂದು ಎರಡು ರೀತಿಯಲ್ಲಿ ದ್ರಾವಿಡ ಭಾಷೆಯಲ್ಲಿ ವಿಂಗಡಿಸಲಾಗಿದೆ ಎನ್ನುವುದನ್ನು ಭಾಷಾ ವಿದ್ವಾಂಸರು ಗುರುತಿಸಿದ್ದಾರೆ. ಅದಲ್ಲದೆ ಸ್ತ್ರೀ ಲಿಂಗ, ಪುಲ್ಲಿಂಗ, ನಪುಂಸಕ ಲಿಂಗಗಳ ಬಗ್ಗೆಯು ಸಹ ಮಾತನಾಡುತ್ತಾರೆ. ದ್ರಾವಿಡ ಭಾಷೆಯಲ್ಲಿ ಬಳಕೆಗೊಳ್ಳುವ ಲಿಂಗ ಮತ್ತು ವಚನ ವ್ಯವಸ್ಥೆಯನ್ನು ಉದಾಹರಣೆಯ ಮೂಲಕ ನೋಡಬಹುದು.

| | **ಏಕ ವಚನ** | **ಬಹುವಚನ** |
|---|---|---|
| **ಸ್ತ್ರೀ ಲಿಂಗ** | ಅವಳ್ | ಅವರ್ |
| **ಪುಲ್ಲಿಂಗ** | ಅವನ್ | ಅವರ್ |
| **ನಪುಂಸಕಲಿಂಗ** | ಅದ್, ಅವ್ | ಅವು, ಅವ |

ಮಳವಳ್ಳಿ ಕನ್ನಡದಲ್ಲಿ ಬಳಕೆಗೊಳ್ಳುವ ವಚನಗಳು ಮತ್ತು ಲಿಂಗ ವ್ಯವಸ್ಥೆಗಳ ಬಗ್ಗೆ ಈ ಕೆಳಗಿನ ಉದಾಹಾರಣೆಯ ಮೂಲಕ ಕಾಣಬಹುದು.

| | **ಏಕ ವಚನ** | **ಬಹುವಚನ** |
|---|---|---|
| **ಸ್ತ್ರೀ ಲಿಂಗ** | ಅಮಿ/ಅವಳ್ | ಅವರ್ |
| **ಪುಲ್ಲಿಂಗ** | ಅಮ/ಅವನ್ | ಅವರ್ |
| **ನಪುಂಸಕಲಿಂಗ** | ಅದು/ಅದ್ | ಅವ್ |

| | **ಏಕ ವಚನ** | **ಬಹುವಚನ** |
|---|---|---|
| **ಸ್ತ್ರೀ ಲಿಂಗ** | ಅಮಿ ಬಮ್ಮಿ / ಅವಳ್ ಕರಿ | ಅವರ್ |
| **ಪುಲ್ಲಿಂಗ** | ಅಮ ಸರಿಲ್ಲ / ಅವನ್ ಬಾ ಅನ್ನು | ಅವರ್ |
| **ನಪುಂಸಕಲಿಂಗ** | ಅದು ಬತ್ತಾದೆ / ಅದ್ ಬತ್ತು | ಅವ್ |

### ೩.೯.೪.ಪದಗಳ ರಚನೆ

ಕನ್ನಡ ನುಡಿಯಲ್ಲಿ ಮುಖ್ಯವಾಗಿ ನಾಮಪದ, ಕ್ರಿಯಾಪದ, ಗುಣಪದಗಳೆಂಬ ಮೂರು ರೀತಿಯ ಪದಗಳನ್ನು ಗುರ್ತಿಸಬಹುದು. ಕೆಲಸಗಳಲ್ಲಿ ತೊಡಗಿರುವ ವ್ಯಕ್ತಿ, ವಸ್ತು ಮೊದಲಾದುವನ್ನು ಹೆಸರಿಸುವುದನ್ನು ನಾಮಪದ ಎಂಬುದಾಗಿ ಕರೆಯಲಾಗಿದೆ. ಕೆಲಸಗಳನ್ನು ತಿಳಿಸುವ ಪದವನ್ನು ಕ್ರಿಯಾಪದಗಳು ಎನ್ನಬಹುದು. ವ್ಯಕ್ತಿ, ವಸ್ತುಗಳ ಗುಣಗಳನ್ನು ತಿಳಿಸುವುದು ಗುಣಪದದ ಲಕ್ಷಣವಾಗಿದೆ. ಕನ್ನಡ ಪದರಚನೆಯನ್ನು ಈ ಮೂರು ನೆಲೆಯಲ್ಲಿ ಅರ್ಥೈಸಬಹುದು. ಈ ಪದಗಳು ಮೂರು ರೀತಿಯ ಕೆಲಸಗಳನ್ನು ಮತ್ತು ಮೂರು ರೀತಿಯ ಅರ್ಥಗಳನ್ನು ತಮ್ಮದೆ ಆದ ಒಳ ರಚನೆಯನ್ನು ಪಡೆದುಕೊಂಡಿವೆ. ಆದ್ದರಿಂದಾಗಿ ಈ ಮೂರು ಪದಗಳು ಬೇರೆ ಬೇರೆಯಾಗಿ ತಮ್ಮದೆ ಆದ ರೀತಿಯಲ್ಲಿ ಬಳಕೆಯಾಗುತ್ತಿರುವುದನ್ನು ಕಾಣಬಹುದು. ಅದೇ ರೀತಿಯಾಗಿ ಮಳವಳ್ಳಿ ಪ್ರದೇಶದ ಕನ್ನಡ ನುಡಿಯಲ್ಲಿ ಮೂರು ರೀತಿಯ ಪದಗಳು ಬಳಕೆಗೊಳ್ಳುವುದನ್ನು ಕಾಣಬಹುದು. ಆ ಪದಗಳು ಹೇಗೆ ಬಳಕೆಗೊಳ್ಳುತ್ತವೆ ಮತ್ತು ಅವು ತಮ್ಮದೆ ಆದ ಒಳರಚನೆಯನ್ನು ಪಡೆದುಕೊಂಡಿವೆ ಎಂಬುದನ್ನು ಗುರ್ತಿಸಲಾಗಿದೆ.

ಈ ರೀತಿಯಾಗಿ ಮಳವಳ್ಳಿ ಕನ್ನಡ ನುಡಿಯ ಪದರಚನೆಯನ್ನು ಮೇಲೆ ಹೇಳಿದ ಹಾಗೆ ವಿವರಿಸಬಹುದು. ಅದು ಅರ್ಥದ ನೆಲೆಯಲ್ಲಿ, ಬಳಕೆಯ ನೆಲೆಯಲ್ಲಿ, ರಚನೆಯ ನೆಲೆಯಲ್ಲಿ ಹೇಗೆ ಬಳಕೆಗೊಳ್ಳುತ್ತವೆ ಎಂಬುವುದನ್ನು ಕಾಣಬಹುದು.

ಮಳವಳ್ಳಿ ಕನ್ನಡದಲ್ಲಿ ನಾಮಪದ, ಕ್ರಿಯಾಪದ, ಗುಣಪದಗಳು ಹೇಗೆ ಬಳಕೆಯಾಗುತ್ತವೆ ಎಂಬುವುದನ್ನು ಕಾಣಬಹುದು. ಈ ಮೂರು ರೀತಿಯ ಪದರಚನೆಯಲ್ಲಿ ಧಾತುಗಳು ಬಳಕೆಯಾಗುವುದನ್ನು ಕಾಣಬಹುದು. ಈ ಧಾತುಗಳಿಗೆ ಯಾವ ಪ್ರತ್ಯಯಗಳನ್ನು ಸೇರಿಸದೆ ಅವನ್ನು ನೇರವಾಗಿ ನಾಮಪದ, ಕ್ರಿಯಾಪದ, ಗುಣಪದಗಳಾಗಿ ವಾಕ್ಯಗಳಲ್ಲಿ ಬಳಸಲು ಸಾದ್ಯ ಎಂಬುವುದನ್ನು ಮಳವಳ್ಳಿ ಕನ್ನಡ ನುಡಿಯಲ್ಲಿ ಕಾಣಬಹುದು.

ಮೂಲದ್ರಾವಿಡ ಭಾಷೆಯಲ್ಲಿ ಈ ಮೂರು ರೀತಿಯ ಒಳರಚನೆಗಳು ಬಳಕೆಗೊಳ್ಳುತ್ತಿದ್ದವು ಎನ್ನುವ ಮಾತನ್ನು ಗಮನಿಸಬಹುದು. ಈ ಮೂರು ರೀತಿಯ ಪದಗಳ ಒಳರಚನೆಯಲ್ಲೂ ನಾಮಧಾತು, ಕ್ರಿಯಾಧಾತು ಮತ್ತು ಗುಣಧಾತು ಎಂಬ ಮೂರು ಬೇರೆ ಬೇರೆ ರೀತಿಯ ಧಾತುಗಳು ಬಳಕೆಯಾಗುತ್ತಿರುವುದು ಇಂದಿಗೂ ಮಳವಳ್ಳಿ ಕನ್ನಡದಲ್ಲಿ ಕಾಣಬಹುದು.

**ನಾಮಧಾತು**

| ಮೂಲದ್ರಾವಿಡ | ಮಳವಳ್ಳಿ ಕನ್ನಡ |
| --- | --- |
| ಸೊಳ್ | ಸೊಳ್/ಸೊಳ್ಳು |
| ಜೂರತ್ | ಜೂರತ್ |
| ದೊಳ್ | ದೊಳ್ |
| ತೊಕ್ | ತೊಕ್ |

**ಕ್ರಿಯಾಧಾತು**

| ಮೂಲದ್ರಾವಿಡ | ಮಳವಳ್ಳಿ ಕನ್ನಡ |
| --- | --- |
| ಸೀಟ್ | ಸೀಟ್ |
| ಕೆಂದ್ | ಕೆಂದ್ |
| ಕೂಡ್ | ಕೂಡ್ |
| ಕಾಣ್ | ಕಾಣ್ |

**ಗುಣಧಾತು**

| ಮೂಲದ್ರಾವಿಡ | ಮಳವಳ್ಳಿ ಕನ್ನಡ |
| --- | --- |
| ಕರ್ | ಕರ್ |
| ಕಿರ್ | ಕಿರ್ |
| ಗಿಡ್ | ಗಿಡ್ |
| ಚೆಂಪ್ | ಚೆಂಪ್ |

ಈ ರೀತಿಯಾಗಿ ಮೂಲದ್ರಾವಿಡದಲ್ಲಿ ಬಳಕೆಗೊಳ್ಳುತ್ತಿದ್ದವು ಎನ್ನಲಾದ ಭಾಷಾ ವಿದ್ವಾಂಸರ ಊಹೆಗಳು ಮಳವಳ್ಳಿ ಕನ್ನಡ ನುಡಿಯೊಳಗೆ ಬಳಕೆಯಲ್ಲಿರುವುದು ನಿಜ. ಭಾಷಾ

ವಿದ್ವಾಂಸರು ಗುರ್ತಿಸಿರುವ ಈ ರೀತಿಯ ಲಕ್ಷಣಗಳನ್ನು ಮಳವಳ್ಳಿ ಕನ್ನಡ ತನ್ನ ಪದ ರಚನೆಯ ಹಂತಗಳಲ್ಲಿ ಮೂಲದ್ರಾವಿಡದ ಭಾಷಾ ಲಕ್ಷಣಗಳನ್ನು ಉಳಿಸಿಕೊಂಡಿರುವುದನ್ನು ಕಾಣಬಹುದು.

## ೩.೧೦. ಮಳವಳ್ಳಿ ಕನ್ನಡದಲ್ಲಿನ ಮಾರ್ಪಾಡುಗಳು

ಎಲ್ಲಾ ಭಾಷೆಗಳಲ್ಲೂ ಭಾಷೆ ಬದಲಾವಣೆ ಹೊಂದುವುದು ಅದರ ಜೀವಂತಿಕೆಯ ಲಕ್ಷಣ. ಈ ರೀತಿಯ ಮಾರ್ಪಾಟು ಆ ಭಾಷೆಯ ವಿಸ್ತಾರತೆಯನ್ನು ತೋರುತ್ತದೆ. ನಿಜವಾದ ಭಾಷೆಗಳು ಕಾಲದಿಂದ ಕಾಲಕ್ಕೆ ಬದಲಾಣೆಯಾಗುವುದು ಆ ಭಾಷೆಯ ಉಳಿವಿನ ಸಂಕೇತ. ಅದೇ ರೀತಿ ಮಳವಳ್ಳಿ ಕನ್ನಡದಲ್ಲಿಯೂ ಮಾರ್ಪಾಡುಗಳು ಯಾವ ರೀತಿ ನಡೆದಿದೆ ಎಂಬುದನ್ನು ಉದಾಹಾರಣೆಯೊಂದಿಗೆ ಕಾಣಬಹುದು.

| **ಮಳವಳ್ಳಿ ಕನ್ನಡ** | **ಬರಹ ಕನ್ನಡ** |
|---|---|
| ಅಮುಕು | ಅವುಕು |
| ಮರ್ಗಳ್ | ಮರಗಳು |
| ಕಾಡ್ಗೆ | ಕಾಡಿಗೆ |
| ಒಳ್ಗೆ | ಒಳಗೆ |

| **ಹಳೆಗನ್ನಡ** | **ಬರಹ ಕನ್ನಡ** | **ಮಳವಳ್ಳಿ ಕನ್ನಡ** |
|---|---|---|
| ಪಾಲ್ | ಹಾಲು | ಆಲು |
| ಪಣ್ | ಹಣ್ಣು | ಅಣ್ಣು |
| ಪೊಗೞ್ | ಹೊಗಳ್ | ವೊಗ್ಳು |
| ಪುಲಿ | ಹುಲಿ | ಉಲಿ |
| ಪೋ | ಹೋಗು | ವೋಗು |

ಹಳೆಗನ್ನಡದಲ್ಲಿದ್ದ **ಱಕಾರ**-**ರಕಾರ** ವ್ಯತ್ಯಾಸ ಮತ್ತು **ೞಕಾರ**-**ಳಕಾರ** ವ್ಯತ್ಯಾಸ ಮಳವಳ್ಳಿ ಕನ್ನಡದ ಉಚ್ಚಾರದಲ್ಲಿ ಮಾಯವಾಗಿರುವುದನ್ನು ಕಾಣಬಹುದು.

| ಹಳೆಗನ್ನಡ | ಬರಹ ಕನ್ನಡ | ಮಳವಳ್ಳಿ ಕನ್ನಡ |
|---|---|---|
| ಊಱು | ಊರು | ಊರು |
| ಊರು | ಊರು | ಊರು |
| ಎೞೆ | ಎಳೆ | ಎಳೆ |
| ಎಳೆ | ಎಳೆ | ಎಳೆ |

ಇದಲ್ಲದೆ ಬೇರೆ ಕೆಲವು ಬದಲಾವಣೆಗಳು ಮಳವಳ್ಳಿ ಕನ್ನಡದಲ್ಲಿ ನಡೆದಿರುವುದನ್ನು ಕಾಣಬಹುದು. ಮಳವಳ್ಳಿ ಕನ್ನಡದಲ್ಲಿ ಚಕಾರ ಮತ್ತು ಜಕಾರಗಳ ನಂತರ ಬರುವ ಅಕಾರ ಎಕಾರವಾಗಿ ಮಾರ್ಪಟ್ಟಿರುವುದನ್ನು ಕಾಣಬಹುದು.

| ಬರಹ ಕನ್ನಡ | ಮಳವಳ್ಳಿ ಕನ್ನಡ |
|---|---|
| ಚಂಡು | ಚೆಂಡು |
| ಚಪ್ಪರ | ಚೆಪ್ರ |
| ಚಲ್ಲು | ಚೆಲ್ಲು |
| ಜರಿ | ಜೆರಿ |
| ಜಗಲಿ | ಜೆಗ್ಲಿ |

ಮಳವಳ್ಳಿ ಕನ್ನಡದಲ್ಲಿ ಪದಮಧ್ಯದಲ್ಲಿ ವ್ಯಂಜನಗಳು ಬಳಕೆಗೊಳ್ಳುವುದನ್ನು ಕಾಣಬಹುದು. ಈ ವ್ಯಂಜನ ರೂಪವು ಉಚ್ಚಾರಣ ಹಂತದಲ್ಲಿ ಗೋಚರಿಸುತ್ತದೆ. ಅದೇ ಪದವನ್ನು ಬರಹ ರೂಪಕ್ಕೆ ತಂದಾಗ ಅದು ಎ ಮತ್ತು ಉಕಾರವಾಗಿ ಬಳಕೆಯಾಗಿರುವ ರೀತಿ ಅನಿಸುತ್ತದೆ.

| ಬರಹ ಕನ್ನಡ | ಮಳವಳ್ಳಿ ಕನ್ನಡ |
|---|---|
| ಹರಕೆ | ಅರ್ಕೆ |
| ಹುಡುಕು | ಉಡ್ಕು |
| ಹುರುಪು | ಉರ್ಪು |

| | |
|---|---|
| ನಡತೆ | ನಡ್ತೆ |
| ಕಿರುಚು | ಕಿರ್ಚು |

ಈ ಅಧ್ಯಾಯದಲ್ಲಿ ಮಳವಳ್ಳಿ ಕನ್ನಡದಲ್ಲಿ ಬಳಕೆಗೊಳ್ಳುವ ಸ್ವರ, ವ್ಯಂಜನಗಳ ಬಳಕೆ ಮತ್ತು ವಿಶಿಷ್ಟರೂಪಗಳನ್ನು ಗುರುತಿಸಿ ವಿವರಿಸಲಾಗಿದೆ. ಮಳವಳ್ಳಿ ಕನ್ನಡ ಇಂದಿಗೂ ಉಳಿಸಿಕೊಂಡು ಬಂದಿರುವ ವಿಶಿಷ್ಟ ರೂಪಗಳ ಜೊತೆಗೆ ಬರಹ ಕನ್ನಡ ಮತ್ತು ಮೂಲದ್ರಾವಿಡ ಕನ್ನಡದೊಂದಿಗೆ ಹೋಲಿಸಿ ವಿಶ್ಲೇಷಿಸಲಾಗಿದೆ.

**ಕೊನೆ ಟಿಪ್ಪಣಿ**

೧. ಜನಭಾಷೆ ಮತ್ತು ಪ್ರಭುತ್ವ ಭಾಷೆಗಳ ಸಂಘರ್ಷ – ರಂಗನಾಥ ಕಂಟನಕುಂಟೆ,

ಪ್ರ : ಕೆ. ಎಸ್. ಮುದ್ದಪ್ಪ ಸ್ಮಾರಕ ಟ್ರಸ್ಟ್, ಬೆಂಗಳೂರು.

೨. ಜನಭಾಷೆ ಮತ್ತು ಪ್ರಭುತ್ವ ಭಾಷೆಗಳ ಸಂಘರ್ಷ – ರಂಗನಾಥ ಕಂಟನಕುಂಟೆ,

ಪ್ರ : ಕೆ. ಎಸ್. ಮುದ್ದಪ್ಪ ಸ್ಮಾರಕ ಟ್ರಸ್ಟ್, ಬೆಂಗಳೂರು.

# ಅಧ್ಯಾಯ ನಾಲ್ಕು

## ಮಳವಳ್ಳಿ ಕನ್ನಡ ಮತ್ತು ಬರಹ ಕನ್ನಡ

ಬೇರೆ ಬೇರೆ ಊರು ಮತ್ತು ಜಾತಿಗಳಿಗೆ ಸೇರಿರುವ ಕನ್ನಡಿಗರೆಲ್ಲರೂ ಸೇರಿರುವಂತಹ ಸಂದರ್ಭಗಳಲ್ಲಿ ಸಭೆ-ಸಮಾರಂಭಗಳಲ್ಲಿ ಮತ್ತು ಶಾಲಾ ಕಾಲೇಜುಗಳಲ್ಲಿ ಬಳಕೆಯಾಗುವಂತಹ ಕನ್ನಡದ ಒಳನುಡಿಯೊಂದಿದೆ. ಬರಹಗಳಲ್ಲೂ ಸಾಮಾನ್ಯವಾಗಿ ಇದೇ ಒಳನುಡಿ ಬಳಕೆಯಾಗುತ್ತದೆ. ಅದನ್ನು ಇಲ್ಲಿ ಬರಹ ಕನ್ನಡ ಎಂದು ಕರೆಯಲಾಗಿದೆ.

ಕರ್ನಾಟಕದ ಎಲ್ಲಾ ಕಡೆಗಳಲ್ಲೂ ಈ ಬರಹ ಕನ್ನಡಕ್ಕಿಂತ ಬೇರಾಗಿರುವ ಮಾತಿನ ಕನ್ನಡ ಎಂಬ ಒಳನುಡಿ ಬಳಕೆಯಲ್ಲಿದೆ. ಇದು ಊರಿನಿಂದ ಊರಿಗೆ ಮತ್ತು ಜಾತಿಯಿಂದ ಜಾತಿಗೆ ಬೇರಾಗಿರುತ್ತದೆ. ಇಂತಹ ಮಾತಿನ ಒಳನುಡಿಗಳನ್ನು ಮುಖ್ಯವಾಗಿ ಆಯಾ ಪ್ರಾದೇಶಿಕತೆಗೆ ಅನುಗುಣವಾಗಿ ವಿಂಗಡಿಸಲಾಗಿದೆ ಆ ರೀತಿಯ ಒಳನುಡಿಗಳಲ್ಲಿ ಮಳವಳ್ಳಿ ಕನ್ನಡವೂ ಒಂದು.

ಮೈಸೂರು ಪ್ರಾಂತ್ಯದ ಕನ್ನಡಗಳಲ್ಲಿ ಹಲವು ಬಗೆಗಳಿವೆ. ಅವುಗಳಲ್ಲಿ ಮಳವಳ್ಳಿ ಕನ್ನಡವೂ ಒಂದು ಒಳನುಡಿ. ಪ್ರದೇಶವನ್ನು ಅವಲಂಬಿಸಿ ಧಾರವಾಡ ಕನ್ನಡ, ಮೈಸೂರು ಕನ್ನಡ, ಗುಲ್ಬರ್ಗ ಕನ್ನಡ ಇನ್ನೂ ಹಲವು ಪ್ರದೇಶದ ಒಳನುಡಿ ಕನ್ನಡಗಳನ್ನು ಕಾಣಬಹುದು. ಅದೇ ರೀತಿ ಒಂದೇ ಪ್ರದೇಶದಲ್ಲಿ ಬಳಸುವ ಒಳನುಡಿಗಳು ಜಾತಿ, ಮತಗಳನ್ನು ಅವಲಂಬಿಸಿ ಬ್ರಾಹ್ಮಣ ಕನ್ನಡ, ಗೌಡ ಕನ್ನಡ ಎಂಬ ಒಳನುಡಿಗಳನ್ನು ಕಾಣಬಹುದು.

ಬರಹ ಕನ್ನಡ ಎಂದು ನಾವು ಯಾವ ಕನ್ನಡವನ್ನು ಇಂದು ಕರೆಯುತ್ತಿದ್ದೇವೊ ಅದು ಕನ್ನಡ ಒಳನುಡಿಯಾಗಿ ಬೆಳೆದು ಬಂದ ಮೈಸೂರು ಕನ್ನಡದಿಂದ ಬೆಳೆದುಬಂದಿದೆ. ಆದ್ದರಿಂದ ಇಂದು ಬರಹ ಕನ್ನಡವು ಅನೇಕ ವಿಷಯಗಳಲ್ಲಿ ಮೈಸೂರು ಕನ್ನಡವನ್ನು ಹೋಲುವುದನ್ನು ಕಾಣಬಹುದು.

ಮಳವಳ್ಳಿ ಕನ್ನಡವನ್ನು ಬರಹ ಕನ್ನಡದೊಂದಿಗೆ ಹೋಲಿಸಿ ನೋಡಿದಾಗ ಈ ವಿಷಯಗಳನ್ನು ಗಮನದಲ್ಲಿರಿಸಿಕೊಳ್ಳುವುದು ಒಳ್ಳೆಯದು. ಮಳವಳ್ಳಿ ಕನ್ನಡ ಮತ್ತು ಬರಹ ಕನ್ನಡಗಳಲ್ಲಿ ಕಾಣಿಸುವ ವ್ಯತ್ಯಾಸಗಳಲ್ಲಿ ಹೆಚ್ಚಿನವೂ ಮೈಸೂರು ಪ್ರಾಂತ್ಯದ ಒಳನುಡಿಗಳಿಗೂ ಬರಹ ಕನ್ನಡಕ್ಕೂ ಇರುವ ವ್ಯತ್ಯಾಸಗಳೇ, ಮಳವಳ್ಳಿ ಕನ್ನಡದಲ್ಲೂ ಮೂಡಿಬಂದಿರುವುದನ್ನು ಕಾಣಬಹುದು.

ಈ ಒಂದು ಅಧ್ಯಾಯದಲ್ಲಿ ಮಂಡ್ಯ ಜಿಲ್ಲೆಯ ಮಳವಳ್ಳಿ ತಾಲೋಕಿನಲ್ಲಿ ಬಳಕೆಯಲ್ಲಿರುವ ಮಳವಳ್ಳಿ ಕನ್ನಡಕ್ಕೂ, ಬರಹ ಕನ್ನಡಕ್ಕೂ ನಡುವಿರುವ ವ್ಯತ್ಯಾಸವನ್ನು ವಿವರಿಸಲಾಗಿದೆ. ಇದೇ

ರೀತಿಯಾಗಿ ಈ ಅಧ್ಯಾಯದಲ್ಲಿ ಬರಹ ಕನ್ನಡ ಮತ್ತು ಮಳವಳ್ಳಿ ಕನ್ನಡಗಳ ನಡುವಿನ ವ್ಯತ್ಯಾಸ ಮತ್ತು ಭಿನ್ನತೆಯನ್ನು ವಿವರಿಸಲಾಗಿದೆ.

**೪.೧.ಉಚ್ಚಾರಗಳು**

ಮಳವಳ್ಳಿ ಕನ್ನಡದಲ್ಲಿ ಬಳಕೆಯಾಗುವ ಉಚ್ಚಾರಗಳು ಕೆಲವು ವಿಚಾರಗಳಲ್ಲಿ ಬರಹ ಕನ್ನಡಕ್ಕಿಂತ ವಿಭಿನ್ನವಾಗಿರುವುದನ್ನು ಕಾಣುತ್ತೇವೆ. ಈ ವಿಭಿನ್ನತೆ ಕಳೆದ ಒಂದು ಒಂದೂವರೆ ಸಾವಿರ ವರ್ಷಗಳಲ್ಲಿ ಕನ್ನಡ ಒಳನುಡಿಗಳಲ್ಲಿ ಆದ ಬೇರೆ ಬೇರೆ ಮಾರ್ಪಾಡುಗಳು ನಡೆದಿರುವುದು ಮುಖ್ಯ ಕಾರಣ.

ಬರಹ ಕನ್ನಡದ ಹಾಗೆ ಮಳವಳ್ಳಿ ಕನ್ನಡದಲ್ಲೂ ಪದಗಳ ಕೊನೆಯಲ್ಲಿ **ಅನು** ಎಂಬ ಪ್ರತ್ಯಯ ಬಿದ್ದು ಹೋಗಿರುವುದನ್ನು ಕಾಣುತ್ತೇವೆ. ಆದರೆ ಅದರ ಹಿಂದಿದ್ದ ಸ್ವರಕ್ಕೆ ಬದಲಾಗಿ ಮಳವಳ್ಳಿ ಕನ್ನಡದಲ್ಲಿ ಅನುನಾಸಿಕವು ಸೇರಿಕೊಂಡು ಪದ ಉಚ್ಚಾರವಾಗುವುದನ್ನು ಕಾಣಬಹುದು. ಮಳವಳ್ಳಿ ಕನ್ನಡದಲ್ಲಿ ನಕಾರ ಕಾಣಿಸಿಕೊಂಡಿರುವುದನ್ನು ಗುರ್ತಿಸಬಹುದು.

| **ಮಳವಳ್ಳಿ ಕನ್ನಡ** | **ಬರಹ ಕನ್ನಡ** |
|---|---|
| ಮಾಡ್ದ್ನ | ಮಾಡಿದ |
| ಬಂದ್ನ | ಬಂದ |
| ಮಜ | ಮಗ |
| ತಿಂದ್ನ | ತಿಂದ |

ಮೂರು ಸುಲಭ ಉಚ್ಚಾರಗಳಿರುವ ಪದಗಳ ಮೂರನೆಯ ಪದಗಳಲ್ಲಿ **ಕ್, ಚ್, ತ್ ಮತ್ತು ಪ್** ವ್ಯಂಜನಗಳು ಬಂದಿವೆಯಾದರು ಅವು ಸಾಮಾನ್ಯವಾಗಿ ಮಳವಳ್ಳಿ ಕನ್ನಡದಲ್ಲಿ ಮಧ್ಯದಕ್ಷರು ವ್ಯಂಜನಾಂತವಾಗಿಯೂ, ಅಂತ್ಯಾಕ್ಷರ ಎ ಕಾರಾಂತವಾಗಿಯು ಬಳಕೆಯಾಗುವುದನ್ನು ಈ ರೀತಿ ಪಟ್ಟಿಮಾಡಬಹುದು.

**ಮಧ್ಯದಕ್ಷರ ವ್ಯಂಜನಾಂತಕ್ಕೆ ಉದಾಹರಣೆ**

| **ಮಳವಳ್ಳಿ ಕನ್ನಡ** | **ಬರಹ ಕನ್ನಡ** |
|---|---|
| ಕೊಳ್ಕು | ಕೊಳಕು |

| | |
|---|---|
| ಅರ್ಚು | ಅರಚು |
| ಕಳ್ಚು | ಕಳಚು |
| ಹೊಳ್ಪು | ಹೊಳಪು |

**ಅಂತ್ಯಾಕ್ಷರ ಎ ಕಾರಾಂತಕ್ಕೆ ಉದಾಹರಣೆ**

| ಮಳವಳ್ಳಿ ಕನ್ನಡ | ಬರಹ ಕನ್ನಡ |
|---|---|
| ಕುಡ್ಕೆ | ಕುಡಿಕೆ |
| ಕೊರ್ತೆ | ಕೊರತೆ |

ಪದಗಳ ಮೊದಲನೆಯ ಉಚ್ಚಾರದಲ್ಲಿ ಎಕಾರ ಇಲ್ಲವೇ ಒಕಾರ ಬಂದಿದ್ದು ಅದರ ನಂತರ ಒಂದು ವ್ಯಂಜನ ಮತ್ತು ವ್ಯಂಜನದ ನಂತರ ಇಕಾರ ಬಂದಿದೆಯಾದರೆ ಮೊದಲನೆಯ ಉಚ್ಚಾರದ ಎಕಾರ ಇಕಾರವಾಗುತ್ತದೆ. ಈ ಬದಲಾವಣೆ ಬರಹ ಕನ್ನಡದಲ್ಲಿ ನಡೆದಿದೆ ಆದರೆ ಮಳವಳ್ಳಿ ಕನ್ನಡದಲ್ಲಿ ನಡೆದಿಲ್ಲದಿರುವುದನ್ನು ಈ ರೀತಿ ಪಟ್ಟಿ ಮಾಡಬಹುದು.

**ಎ ಕಾರ ಮತ್ತು ಇ ಕಾರ ಬಳಕೆ**

| ಮಳವಳ್ಳಿ ಕನ್ನಡ | ಬರಹ ಕನ್ನಡ |
|---|---|
| ಚೆಮಿ/ಕಿಮಿ | ಕಿವಿ |
| ಎದ್ರು | ಎದಿರು |
| ಬೆಳಿ | ಬಿಳಿ |
| ಎರ | ಇರುವೆ |
| ನೆರ್ಗೆ | ನೆರಿಗೆ |

ಚಕಾರ ಮತ್ತು ಜಕಾರಗಳ ನಂತರ ಬರುವ ಅಕಾರ ಮಳವಳ್ಳಿ ಕನ್ನಡದಲ್ಲಿ ಎಕಾರವಾಗಿ ಬರುವುದನ್ನು ಕಾಣಬಹುದು.

| ಮಳವಳ್ಳಿ ಕನ್ನಡ | ಬರಹ ಕನ್ನಡ |
|---|---|
| ಚೆದ್ರು | ಚದುರು |
| ಚೆಂಡು | ಚಂಡು |
| ಚೆಪ್ರ | ಚಪ್ಪರ |
| ಚೆಂಡಿ | ಚಂಡಿ |
| ಚೆಲ್ಲು | ಚಲ್ಲು |

| ಮಳವಳ್ಳಿ ಕನ್ನಡ | ಬರಹ ಕನ್ನಡ |
|---|---|
| ಜೆಗ್ಲಿ | ಜಗಲಿ |
| ಜೆಡೆ | ಜಡೆ |
| ಜೆರಿ | ಜರಿ |
| ಜೆಂಬ | ಜಂಬ |
| ಜೆಡ್ಡು | ಜಡ್ಡು |

ಬರಹ ಕನ್ನಡದಲ್ಲಿ ಬಳಕೆಯಲ್ಲಿರುವ **ಇಸು** ಎಂಬ ಪ್ರತ್ಯಯ ಮಳವಳ್ಳಿ ಕನ್ನಡದಲ್ಲಿ **ಸು** ಎಂಬ ರೂಪದಲ್ಲಿ ಉಚ್ಚಾರಗೊಳ್ಳುವುದನ್ನು ಕಾಣಬಹುದು.

| ಮಳವಳ್ಳಿ ಕನ್ನಡ | ಬರಹ ಕನ್ನಡ |
|---|---|
| ಬಿಡ್ಸು | ಬಿಡಿಸು |
| ಕಟ್ಸು | ಕಟ್ಟಿಸು |
| ಮಾಡ್ಸು | ಮಾಡಿಸು |
| ತಿನ್ಸು | ತಿನಿಸು |
| ಕೇಳ್ಸು | ಕೇಳಿಸು |

ನಂಬ್ಸು ನಂಬಿಸು

ಈ ರೀತಿಯಾಗಿ ಮಳವಳ್ಳಿ ಕನ್ನಡದಲ್ಲಿ ಪದಗಳ ಉಚ್ಚಾರ ಬೇರೆ ಬೇರೆ ಸಂದರ್ಭಗಳಲ್ಲಿ ಬಳಕೆಗೊಳ್ಳುವುದನ್ನು ಕಾಣಬಹುದು. ಇದು ಬರಹ ಕನ್ನಡ ಮತ್ತು ಮಳವಳ್ಳಿ ಕನ್ನಡದ ನಡುವಿನ ಉಚ್ಚಾರದಲ್ಲಿ ಕಾಣಿಸುವ ವ್ಯತ್ಯಾಸಗಳನ್ನು ಆ ಪ್ರದೇಶದ ಜನರು ಬಳಸುವ ಪದ ಮತ್ತು ಉಚ್ಚಾರಗಳನ್ನು ಈ ರೀತಿಯಾಗಿ ಗುರ್ತಿಸಬಹುದು.

## ೪.೨. ಪದಗಳ ರಚನೆ

ಕನ್ನಡ ನುಡಿಯಲ್ಲಿ ಮುಖ್ಯವಾಗಿ ನಾಮಪದ, ಕ್ರಿಯಾಪದ, ಗುಣಪದಗಳೆಂಬ ಮೂರು ರೀತಿಯ ಪದಗಳನ್ನು ಗುರ್ತಿಸಬಹುದು. ಕೆಲಸಗಳಲ್ಲಿ ತೊಡಗಿರುವ ವ್ಯಕ್ತಿ, ವಸ್ತು ಮೊದಲಾದುವನ್ನು ಹೆಸರಿಸುವುದನ್ನು ನಾಮಪದ ಎಂಬುದಾಗಿ ಕರೆಯಲಾಗಿದೆ. ಕೆಲಸಗಳನ್ನು ತಿಳಿಸುವ ಪದವನ್ನು ಕ್ರಿಯಾಪದಗಳು ಎನ್ನಬಹುದು. ವ್ಯಕ್ತಿ, ವಸ್ತುಗಳ ಗುಣಗಳನ್ನು ತಿಳಿಸುವುದು ಗುಣಪದದ ಲಕ್ಷಣವಾಗಿದೆ. ಕನ್ನಡ ಪದರಚನೆಯನ್ನು ಈ ಮೂರು ನೆಲೆಯಲ್ಲಿ ಅರ್ಥೈಸಬಹುದು. ಈ ಪದಗಳು ಮೂರು ರೀತಿಯ ಕೆಲಸಗಳನ್ನು ಮತ್ತು ಮೂರು ರೀತಿಯ ಅರ್ಥಗಳನ್ನು ತಮ್ಮದೆ ಆದ ಒಳ ರಚನೆಯನ್ನು ಪಡೆದುಕೊಂಡಿವೆ. ಆದ್ದರಿಂದಾಗಿ ಈ ಮೂರು ಪದಗಳು ಬೇರೆ ಬೇರೆಯಾಗಿ ತಮ್ಮದೆ ಆದ ರೀತಿಯಲ್ಲಿ ಬಳಕೆಯಾಗುತ್ತಿರುವುದನ್ನು ಕಾಣಬಹುದು. ಅದೇ ರೀತಿಯಾಗಿ ಮಳವಳ್ಳಿ ಪ್ರದೇಶದ ಕನ್ನಡ ನುಡಿಯಲ್ಲಿ ಮೂರು ರೀತಿಯ ಪದಗಳು ಬಳಕೆಗೊಳ್ಳುವುದನ್ನು ಕಾಣಬಹುದು. ಆ ಪದಗಳು ಹೇಗೆ ಬಳಕೆಗೊಳ್ಳುತ್ತವೆ ಮತ್ತು ಅವು ತಮ್ಮದೆ ಆದ ಒಳರಚನೆಯನ್ನು ಪಡೆದುಕೊಂಡಿವೆ ಎಂಬುದನ್ನು ಗುರ್ತಿಸಲಾಗಿದೆ.

ಈ ರೀತಿಯಾಗಿ ಮಳವಳ್ಳಿ ಕನ್ನಡ ನುಡಿಯ ಪದರಚನೆಯನ್ನು ಮೇಲೆ ಹೇಳಿದ ಹಾಗೆ ವಿವರಿಸಬಹುದು. ಅದು ಅರ್ಥದ ನೆಲೆಯಲ್ಲಿ, ಬಳಕೆಯ ನೆಲೆಯಲ್ಲಿ, ರಚನೆಯ ನೆಲೆಯಲ್ಲಿ ಹೇಗೆ ಬಳಕೆಗೊಳ್ಳುತ್ತವೆ ಎಂಬುವುದನ್ನು ಕಾಣಬಹುದು.

ಮಳವಳ್ಳಿ ಕನ್ನಡದಲ್ಲಿ ನಾಮಪದ, ಕ್ರಿಯಾಪದ, ಗುಣಪದಗಳು ಹೇಗೆ ಬಳಕೆಯಾಗುತ್ತವೆ ಎಂಬುವುದನ್ನು ಕಾಣಬಹುದು. ಈ ಮೂರು ರೀತಿಯ ಪದರಚನೆಯಲ್ಲಿ ಧಾತುಗಳು ಬಳಕೆಯಾಗುವುದನ್ನು ಕಾಣಬಹುದು. ಈ ಧಾತುಗಳಿಗೆ ಯಾವ ಪ್ರತ್ಯಯಗಳನ್ನು ಸೇರಿಸದೆ ಅವನ್ನು ನೇರವಾಗಿ ನಾಮಪದ, ಕ್ರಿಯಾಪದ, ಗುಣಪದಗಳಾಗಿ ವಾಕ್ಯಗಳಲ್ಲಿ ಬಳಸಲು ಸಾದ್ಯ ಎಂಬುವುದನ್ನು ಮಳವಳ್ಳಿ ಕನ್ನಡ ನುಡಿಯಲ್ಲಿ ಕಾಣಬಹುದು.

ಮೂಲದ್ರಾವಿಡ ಭಾಷೆಯಲ್ಲಿ ಈ ಮೂರು ರೀತಿಯ ಒಳರಚನೆಗಳು ಬಳಕೆಗೊಳ್ಳುತ್ತಿದ್ದವು ಎನ್ನುವ ಮಾತನ್ನು ಗಮನಿಸಬಹುದು. ಈ ಮೂರು ರೀತಿಯ ಪದಗಳ ಒಳರಚನೆಯಲ್ಲೂ ನಾಮಧಾತು, ಕ್ರಿಯಾಧಾತು ಮತ್ತು ಗುಣಧಾತು ಎಂಬ ಮೂರು ಬೇರೆ ಬೇರೆ ರೀತಿಯ ಧಾತುಗಳು ಬಳಕೆಯಾಗುತ್ತಿರುವುದು ಇಂದಿಗೂ ಮಳವಳ್ಳಿ ಕನ್ನಡದಲ್ಲಿ ಕಾಣಬಹುದು.

### ೪.೨.೧. ನಾಮಧಾತು

| ಬರಹ ಕನ್ನಡ | ಮಳವಳ್ಳಿ ಕನ್ನಡ |
|---|---|
| ದೀಪ | ಸೊಳ್/ಸೊಳ್ಳು |
| ಧೈರ್ಯ | ಜೂರತ್ |
| ತೂತು | ದೊಳ್ |
| ಗುಟ್ಟು | ತೊಕ್ |

**ಕ್ರಿಯಾಧಾತು**

| ಬರಹ ಕನ್ನಡ | ಮಳವಳ್ಳಿ ಕನ್ನಡ |
|---|---|
| ಒರೆಸು | ಸೀಟ್ |
| ವಾಸಿ/ ಗುಣ | ಕೆಂದ್ |
| ಸೇರಿಸು | ಕೂಡ್ |
| ಕಾಣು | ಕಾಣ್ |

**ಗುಣಧಾತು**

| ಬರಹ ಕನ್ನಡ | ಮಳವಳ್ಳಿ ಕನ್ನಡ |
|---|---|
| ಕಪ್ಪು | ಕರ್ |
| ಚಿಕ್ಕ | ಕಿರ್ |

ಕುಳ್ಳ ಗಿಡ್

ಕೆಂಪು ಚೆಂಪ್

ಈ ರೀತಿಯಾಗಿ ಮೂಲದ್ರಾವಿಡದಲ್ಲಿ ಬಳಕೆಗೊಳ್ಳತ್ತಿದ್ದವು ಎನ್ನಲಾದ ಭಾಷಾ ವಿದ್ವಾಂಸರ ಊಹೆಗಳು ಮಳವಳ್ಳಿ ಕನ್ನಡ ನುಡಿಯೊಳಗೆ ಬಳಕೆಯಲ್ಲಿರುವುದು ನಿಜ. ಭಾಷಾ ವಿದ್ವಾಂಸರು ಗುರ್ತಿಸಿರುವ ಈ ರೀತಿಯ ಲಕ್ಷಣಗಳನ್ನು ಮಳವಳ್ಳಿ ಕನ್ನಡ ತನ್ನ ಪದ ರಚನೆಯ ಹಂತಗಳಲ್ಲಿ ಮೂಲದ್ರಾವಿಡದ ಭಾಷಾ ಲಕ್ಷಣಗಳನ್ನು ಉಳಿಸಿಕೊಂಡಿರುವುದನ್ನು ಕಾಣಬಹುದು.

ಬರಹ ಕನ್ನಡದಲ್ಲಿ ರಚನೆಗಳಿಲ್ಲದ ಪದಗಳು ಮತ್ತು ರಚನೆಗಳಿರುವ ಪದಗಳು ಎಂಬುದಾಗಿ ಎರಡು ಬಗೆಯ ಪದಗಳು ಬಳಕೆಯಲ್ಲಿರುವುದನ್ನ ಕಾಣಬಹುದು. ಉದಾಹಾರಣೆಗಾಗಿ ಮರ, ತಲೆ, ಕುಣಿ ಮೊದಲಾದವು ರಚನೆಗಳಿಲ್ಲದ ಪದಗಳು ಮತ್ತು ಮುನ್ನುಡಿ, ಕುಣಿತ, ಮೆಟ್ಟಿಲು ಮೊದಲಾದವು ರಚನೆಗಳಿರುವ ಪದಗಳು.

ರಚನೆಗಳಿರುವ ಪದಗಳಲ್ಲೂ ಎರಡು ಬಗೆಗಳಿವೆ. ಅವು ಎರಡು ಪದವನ್ನು ಒಟ್ಟು ಸೇರಿಸಿ ಪಡೆದ ಸಮಾಸ ಪದಗಳಿರಬಹುದು, ಇಲ್ಲವೆ ಪದಕ್ಕೆ ಪ್ರತ್ಯಯವನ್ನು ಸೇರಿಸಿ ಪಡೆದ ಪದವಿರಬಹುದು. ಉದಾಹಾರಣೆಗೆ ಮುನ್ನುಡಿ ಎಂಬುದನ್ನು ಮುನ್(ಮುಂದಿನ) ಮತ್ತು ನುಡಿ ಎಂಬ ಎರಡು ಪದಗಳನ್ನು ಪ್ರತ್ಯಯವನ್ನು ಸೇರಿಸಿ ಪಡೆಯಲಾಗಿದೆ. ಹಾಗೆ ಮೆಟ್ಟಿಲು ಎಂಬ ಪದವನ್ನು ಮೆಟ್ಟು ಎಂಬ ಪದದೊಂದಿಗೆ ಅಲು ಪ್ರತ್ಯಯವನ್ನು ಸೇರಿಸಿ ಪಡೆಯಲಾಗಿದೆ.

ಮಳವಳ್ಳಿ ಕನ್ನಡದಲ್ಲಿ ಇವೇ ಎರಡು ಬಗೆಗಳು ಬಳಕೆಯಲ್ಲಿದ್ದು ಅವು ಬರಹ ಕನ್ನಡಕ್ಕಿಂತ ಬೇರಾಗಿಲ್ಲ. ಆದರೆ ಈ ರೀತಿ ಪಡೆದಿರುವ ಪದಗಳಲ್ಲಿ ಕಾಣಿಸುವ ಪ್ರತ್ಯಯಗಳ ರೂಪ ಮತ್ತು ಬಳಕೆಗಳಲ್ಲಿ ಕೆಲವು ವ್ಯತ್ಯಾಸಗಳಿವೆ. ಇದಲ್ಲದೆ ಬರಹ ಕನ್ನಡದಲ್ಲಿ ಬಳಕೆಯಾಗದ ಕೆಲವು ಪ್ರತ್ಯಯಗಳೂ ಮಳವಳ್ಳಿ ಕನ್ನಡದಲ್ಲಿವೆ.

ಕ್ರಿಯಾ ಪದಗಳಿಗೆ **ಅಟೆ** ಪ್ರತ್ಯಯವನ್ನು ಸೇರಿಸಿ ಮಳವಳ್ಳಿ ಕನ್ನಡದಲ್ಲಿ ಹಲವು ವಿಶೇಷಣ ಪದಗಳನ್ನು ಪಡೆಯಲು ಬರುತ್ತದೆ. ಇಂತಹ ಪದಗಳು ತಿಳಿಸುವ ವಿಶೇಷಣ ಉತ್ತಮ ಪುರುಷಕ್ಕೆ ಹೊಂದುವುದಿಲ್ಲ ಎಂಬ ಅರ್ಥವು ಈ ಪದಗಳಿಗಿವೆ.

**೪.೨.೨. ಕ್ರಿಯಾಪದ**

| **ಕ್ರಿಯಾಪದ** | **ವಿಶೇಷಣಪದ** |
|---|---|
| ಒದ್ಗ | ಎರೆಗದ್ದೆ |
| ಕರ್ಕಲು | ಕರ್ಲುಭೂಮಿ |
| ಕವುತ್ತೆ | ರೊಣ್ಗಲ್ಲು |
| ಪಸ್ಗೆ | ಕೆಂದೆತ್ತು |

ವಿಶೇಷಣಪದಗಳಿಗೂ ಇದೇ ಪ್ರತ್ಯಯವನ್ನು ಸೇರಿಸಿ ಅವು ತಿಳಿಸುವ ಪ್ರತ್ಯಯ ಉತ್ತಮಪುರುಷನಿಗೆ ಇಷ್ಟವಾದುದಲ್ಲ ಎಂಬ ಅರ್ಥವನ್ನು ಪಡೆಯಬಹುದು.

**೪.೨.೩. ವಿಶೇಷಣಪದ**

**ಅಟೆ ಪ್ರತ್ಯಯದೊಂದಿಗೆ**

| **ವಿಶೇಷಣಪದ** | |
|---|---|
| ಕೆಂಪು | ಕೆಂಪಟೆ |
| ಕಪ್ಪು | ಕಪ್ಪಟೆ |
| ಕಸಿ | ಕಸ್ಕಟೆ |
| ಚಪ್ಪಟೆ | ಚಪ್ಪಟೆ |
| ಕಡಿ | ಕಡ್ದಕಟ್ಟೆ |

ಕ್ರಿಯಾಪದಗಳಿಗೆ **ಊಮ** ಪ್ರತ್ಯಯವನ್ನು ಸೇರಿಸಿ ಅವು ತಿಳಿಸುವ ಕೆಲಸ ಚಿಟ್ಟು ಹಿಡಿಸುವಂತಹದು ಎಂಬ ಅರ್ಥ ಬರುವಂತೆ ಮಳವಳ್ಳಿ ಕನ್ನಡದಲ್ಲಿ ಹಲವು ನಾಮಪದಗಳನ್ನು ಪಡೆಯಲಾಗುತ್ತದೆ.

| **ಕ್ರಿಯಾಪದ** | **ನಾಮಪದ** |
|---|---|
| ಉಯ್ | ಉಯ್ಯೂಮ |

| | |
|---|---|
| ಒಗೆ | ಒಗೆಯೂಮ |
| ಬರೆ | ಬರೆಯೂಮ |
| ವಲಿ | ವಲಿಯೂಮ |
| ತೆಗಳು | ತೆಗಳೂಮ |

## ೪.೩. ಬಹುವಚನ ಪ್ರತ್ಯಯ

ಮಳವಳ್ಳಿ ಕನ್ನಡದಲ್ಲಿ ಬಹುವಚನವನ್ನು ತಿಳಿಸುವುದಕ್ಕಾಗಿ ನಾಮಪದಗಳೊಂದಿಗೆ ಬರುವ ಪ್ರತ್ಯಯಕ್ಕೆ ಅ ಉಚ್ಚಾರದಲ್ಲಿ ಕೊನೆಗೊಳ್ಳುವ ಪದಗಳ ಬಳಿಕ **ಗಳ್** ರೂಪದಲ್ಲಿರುವುದನ್ನು ಕಾಣಬಹುದು.

ಆದರೆ ಬರಹ ಕನ್ನಡದಲ್ಲಿ ಇಂತಹ ಎರಡು ಬಗೆಯ ಪದಗಳೊಂದಿಗೂ ಬಹುವಚನ ಪ್ರತ್ಯಯಕ್ಕೆ ಅನೇಕ ಕಡೆಗಳಲ್ಲಿ **ಗಳು** ಎಂಬ ರೂಪ ಇರುವುದನ್ನು ಕಾಣಬಹದು.

| **ಮಳವಳ್ಳಿ ಕನ್ನಡ** | **ಬರಹ ಕನ್ನಡ** |
|---|---|
| ಮರ–ಮರ್ಗಳ್ | ಮರಗಳು |
| ಬಣ್ಣ–ಬಣ್ಗಳ್ | ಬಣ್ಣಗಳು |
| ಕಣ್ಣು–ಕಣ್ಗಳ್ | ಕಣ್ಣುಗಳು |
| ಕೋತಿ–ಕೋತ್ಗಳ್ | ಕೋತಿಗಳು |
| ಮನೆ–ಮನ್ಗಳ್ | ಮನೆಗಳು |

ಮಳವಳ್ಳಿ ಕನ್ನಡದಲ್ಲಿ ಈ ಪ್ರತ್ಯಯದ ನಂತರ ಸ್ವರದಿಂದ ಮೊದಲಾಗುವ ಮತ್ತೊಂದು ಪ್ರತ್ಯಯ ಬಂದರೆ ಅದಕ್ಕೆ ಅ ಮತ್ತು ಉವ ರೂಪ ಬರುತ್ತದೆ.

**ಮಳವಳ್ಳಿ ಕನ್ನಡ :** ಯಲ್ಲಾ ಮರ್ವ್ವ ತರ್ದು ಆಕಿದ್ರೊ

**ಬರಹ ಕನ್ನಡ :** ಎಲ್ಲರು ಮರಗಳನ್ನು ಕಡಿದು ಹಾಕಿದ್ದಾರೆ

**ಮಳವಳ್ಳಿ ಕನ್ನಡ :** ಯಲ್ಲಾ ಅಕ್ಕಿವೆ ಆರ್ ವೊದ್ವೊ

**ಬರಹ ಕನ್ನಡ :** ಎಲ್ಲಾ ಹಕ್ಕಿಗಳೂ ಹಾರಿ ಹೋದವು

ಮನುಷ್ಯರನ್ನು ಸೂಚಿಸುವ ಪದಗಳಲ್ಲಿ ಪುರುಷರನ್ನು ಸೂಚಿಸುವ ಪದಗಳು **ಅ**ಕಾರದಲ್ಲಿ ಕೊನೆಗೊಳ್ಳಬೇಕಾದಲ್ಲಿ ಮತ್ತು ಸ್ತ್ರೀಯರನ್ನು ಸೂಚಿಸುವ ಪದಗಳು ಇಕಾರ ಇಲ್ಲವೇ **ಎ**ಕಾರದಲ್ಲಿ ಕೊನೆಗೊಳ್ಳುವುದಿದ್ದಲ್ಲಿ ಅವುಗಳ ನಂತರ ಬರಹ ಕನ್ನಡದಲ್ಲಿ **ಗಳು** ಪ್ರತ್ಯಯದ ಬದಲು **ರು** ಪ್ರತ್ಯಯ ಬರುತ್ತದೆ. ಆದರೆ ಮಳವಳ್ಳಿ ಕನ್ನಡದಲ್ಲಿ ಇಂತಹ ಪದಗಳೊಂದಿಗೆ **ಅಂದಿರು** ಪ್ರತ್ಯಯಗಳು ಬರುತ್ತದೆ.

| **ಮಳವಳ್ಳಿ ಕನ್ನಡ** | **ಬರಹ ಕನ್ನಡ** |
|---|---|
| ಅಕ್ಕಂದ್ರು | ಅಕ್ಕಂದಿರು |
| ಅಣ್ಣಂದ್ರು | ಅಣ್ಣಂದಿರು |
| ಮಾವಂದ್ರು | ಮಾವಂದಿರು |
| ಕಳ್ಳಂದ್ರು | ಕಳ್ಳರು |
| ಕುರ್ಡಂದ್ರು | ಕುರುಡರು |

ಈ ರೀತಿಯಾಗಿ ಮಳವಳ್ಳಿ ಕನ್ನಡದಲ್ಲಿ ಬಹುವಚನ ಬಳಕೆಯಾಗುವುದನ್ನು ಕಾಣಬಹುದು.

### ೪.೪. ಸಂಬಂಧವಾಚಕ ಪ್ರತ್ಯಯಗಳು

ಮಳವಳ್ಳಿ ಕನ್ನಡದಲ್ಲಿ ಸಂಬಂಧ ವಾಚಕಗಳು ಹೇಗೆ ವಿಭಿನ್ನವಾಗಿ ಬರಹ ಕನ್ನಡಕ್ಕಿಂತ ಬಳಕೆಗೊಳ್ಳುತ್ತವೆ ಎಂಬುದನ್ನು ವಿವರಿಸಲಾಗಿದೆ. ಮಳವಳ್ಳಿ ಕನ್ನಡದಲ್ಲಿ ಸಂಬಂಧ ವಾಚಕ ಪ್ರತ್ಯಯಗಳು ಹೇಗೆ ಬಳಕೆಗೊಳ್ಳುತ್ತವೆ ಎಂಬುವುದನ್ನು ಕಾಣಬಹುದು. ಇದರ ಜೊತೆಗೆ ಸಂಬಂಧ ವಾಚಕ ಪ್ರತ್ಯಯಗಳು ಬರಹ ಕನ್ನಡಕ್ಕಿಂತ ಮಳವಳ್ಳಿ ಕನ್ನಡ ಹೇಗೆ ಭಿನ್ನ ನೆಲೆಯಲ್ಲಿ ಬಳಕೆಗೊಂಡಿದೆ ಎಂಬುವುದನ್ನು ವಿರಿಸಲಾಗಿದೆ.

ಸಂಬಂಧವಾಚಕ ಪ್ರತ್ಯಯಗಳ ರೂಪದಲ್ಲಿ ಮತ್ತು ಸ್ವಲ್ಪ ಮಟ್ಟಿಗೆ ಅವುಗಳ ಬಳಕೆಯಲ್ಲಿ ಮಳವಳ್ಳಿ ಕನ್ನಡ ಮತ್ತು ಬರಹ ಕನ್ನಡಗಳ ನಡುವೆ ವ್ಯತ್ಯಾಸಗಳಿರುವುದನ್ನು ಕಾಣಬಹುದು.

ಬರಹ ಕನ್ನಡದ **ಅನ್ನು** ಪ್ರತ್ಯಯದ ಬದಲು ಮಳವಳ್ಳಿ ಕನ್ನಡದಲ್ಲಿ **ಅ** ಪ್ರತ್ಯಯ ಬರುತ್ತದೆ.

**ಮಳವಳ್ಳಿ ಕನ್ನಡ :** *ಕಣ್ಣ ಅಂಗೆ ಉಜ್ಬೇಡ*

**ಬರಹ ಕನ್ನಡ :** ಕಣ್ಣನ್ನು ಹಾಗೆ ಉಜ್ಜಬಾರದು.

**ಮಳವಳ್ಳಿ ಕನ್ನಡ :** *ನೀ ಅವ್ವನ್ನ ಕರಿ*

**ಬರಹ ಕನ್ನಡ :** ನೀನು ತಾಯಿಯನ್ನು ಬರಲು ಹೇಳು

**ಮಳವಳ್ಳಿ ಕನ್ನಡ :** *ಆ ಉಳ್ವ ಮುಟ್ಟುದ್ಯಾಕೆ?*

**ಬರಹ ಕನ್ನಡ :** ಆ ಹುಳವನ್ನು ಮುಟ್ಟಿದ್ದು ಯಾಕೆ?

ಆದರೆ ಈ ಪ್ರತ್ಯಯದ ನಂತರ ಸ್ವರದಲ್ಲಿ ಮೊದಲಾಗುವ ಬೇರೊಂದು ಪ್ರತ್ಯಯ ಬಂದಿದೆಯಾದರೆ ಅದು ಮಳವಳ್ಳಿ ಕನ್ನಡದಲ್ಲೂ ಅನ್ನು ರೂಪದಲ್ಲೇ ಕಾಣಿಸಿಕೊಳ್ಳುತ್ತದೆ.

**ಮಳವಳ್ಳಿ ಕನ್ನಡ :** *ಅವ್ವನ ಕರಿ*

**ಬರಹ ಕನ್ನಡ :** ತಾಯಿಯನ್ನು ಬರಲು ಹೇಳು

**ಮಳವಳ್ಳಿ ಕನ್ನಡ :** *ಕತ್ರಿಸ್ಬೇಕ್ಕಾದ್ದು ಈ ಮರನೇ?*

**ಬರಹ ಕನ್ನಡ :** ಕಡಿಯಲುಬೇಕಾದದ್ದು ಈ ಮರವನ್ನೇ?

ಮಳವಳ್ಳಿ ಕನ್ನಡದಲ್ಲಿ ಎರಡು ನಾಮಪದಗಳ ನಡುವಿನ ಸಂಬಂಧವನ್ನು ತಿಳಿಸುವ **ಅ** ಪ್ರತ್ಯಯ (ಷಷ್ಠಿ ವಿಭಕ್ತಿ ಪ್ರತ್ಯಯ) ಮತ್ತು ಮೇಲೆ ವಿವರಿಸಿದ **ಅ** ಪ್ರತ್ಯಯ (ಕ್ರಿಯಾ ವಿಭಕ್ತಿಪ್ರತ್ಯಯ) ಇವೆರಡರ ನಡುವೆ ಕೆಲವು ಕಡೆಗಳಲ್ಲಿ ವ್ಯತ್ಯಾಸಗಳು ಇಲ್ಲದೆ ಹಾಗೆ ಕಂಡುಬರುತ್ತದೆ. ಆದರೆ, ಅಕಾರದಲ್ಲಿ ಕೊನೆಗೊಳ್ಳುವ **ಮರ, ಅಟ್ಟ, ಆಟ** ಮೊದಲಾದ ಪದಗಳ ಬಳಿಕ ಷಷ್ಠಿ ವಿಭಕ್ತಿಪ್ರತ್ಯಯ ಸೇರಿದಾಗ ದಕಾರ ಬರುತ್ತಿದ್ದು, ಇದು ಮೇಲಿನ **ಅ** ಪ್ರತ್ಯಯ ಸೇರಿದಾಗ ಬರುವುದಿಲ್ಲ.

| **ಷಷ್ಠಿ ವಿಭಕ್ತಿಪ್ರತ್ಯಯ** | **ಕ್ರಿಯಾ ವಿಭಕ್ತಿಪ್ರತ್ಯಯ** |
|---|---|
| ಮರದ ಗೆಜ್ಜ್ಲ | ಮರ್ವ ತರಿ |
| ಆಟ್ದ ಜಿನ | ಆಟ್ವ ನೋಡು |

| | |
|---|---|
| ಬಣ್ದ ಚಿತ್ರ | ಬಣ್ಣ ಅಳ್ಸು |
| ಗುಳಿ ಒಳಗೆ | ಗುಳಿ ಮುಚ್ಚು |

ಇದಲ್ಲದೆ ಮೇಲೆ ತಿಳಿಸಿದ ಹಾಗೆ, ಅ ಕ್ರಿಯಾ ವಿಭಕ್ತಿಪ್ರತ್ಯಯ ಬಳಿಕ ಸ್ವರಗಳಲ್ಲಿ ಮೊದಲಾಗುವ ಬೇರೆ ಪ್ರತ್ಯಯಗಳು ಬಂದಿವೆಯಾದರೆ, ಆ ಪ್ರತ್ಯಯ **ಅನ್** ಎಂಬ ರೂಪವನ್ನು ಪಡೆಯುತ್ತದೆ. ಆದರೆ ಷಷ್ಠಿ ವಿಭಕ್ತಿಪ್ರತ್ಯಯ **ಅ** ಪ್ರತ್ಯಯದ ಬಳಿಕ ಬೇರೆ ಪ್ರತ್ಯಯ ಬರುವುದಿಲ್ಲ.

ಬರಹ ಕನ್ನಡದಲ್ಲಿ ಬರುವ ಇಂದ ಪ್ರತ್ಯಯ ಮಳವಳ್ಳಿ ಕನ್ನಡದಲ್ಲಿ **ಒದ** ರೂಪದಲ್ಲಿ ಬರುತ್ತದೆ. **ಉ**ಕಾರದಲ್ಲಿ ಕೊನೆಗೊಳ್ಳುವ ಪದಗಳ ಬಳಿಕವಷ್ಟೇ ಇದಕ್ಕೆ ಇಂದ ರೂಪವಿದೆ. ಇದಲ್ಲದೆ ಬರಹ ಕನ್ನಡದಲ್ಲಿ ಅದರೊಂದಿಗೆ ಬರುವ **ದ್, ಯ್, ಇನ್** ಮೊದಲಾದವುಗಳು ಮಳವಳ್ಳಿ ಕನ್ನಡದಲ್ಲಿ ಬರುವುದಿಲ್ಲ.

| **ಮಳವಳ್ಳಿ ಕನ್ನಡ** | **ಬರಹ ಕನ್ನಡ** |
|---|---|
| ಮರಿಂದ | ಮರದಿಂದ |
| ಮನಿಂದ | ಮನೆಯಿಂದ |
| ಕಾಡಿಂದ | ಕಾಡಿನಿಂದ |
| ಮೇಡಿಂದ | ಮೇಡಿನಿಂದ |
| ಕಲ್ಲಿಂದ | ಕಲ್ಲಿನಿಂದ |

ಈ ನಿಯಮಗಳು ಅಪವಾದವಾಗಿ ಬರಹ ಕನ್ನಡದಲ್ಲಿ ಬರುವ ರಕಾರ ಮಳವಳ್ಳಿ ಕನ್ನಡದಲ್ಲೂ ಬರುತ್ತದೆ.

| **ಮಳವಳ್ಳಿ ಕನ್ನಡ** | **ಬರಹ ಕನ್ನಡ** |
|---|---|
| ಅದ್ರಿಂದ | ಅದರಿಂದ |
| ಎರ್ಡಿಂದ | ಎರಡರಿಂದ |
| ದೊಡ್ಡ್ರಿಂದ | ದೊಡ್ಡದರಿಂದ |

ಬರಹ ಕನ್ನಡದಲ್ಲಿ ಬರುವ **ಕೆ/ಗೆ** ಪ್ರತ್ಯಯಗಳು ಮಳವಳ್ಳಿ ಕನ್ನಡದಲ್ಲಿ **ಗೆ, ಕ್ಕೆ** ಮತ್ತು **ಂಗೆ** ಎಂಬ ರೂಪಗಳಲ್ಲಿ ಬರುವುದನ್ನು ಕಾಣಬಹುದು.

ಇಕಾರ ಇಲ್ಲವೇ ಎಕಾರಗಳಲ್ಲಿ ಕೊನೆಗೊಳ್ಳುವ ಪದಗಳ ಬಳಿಕ ಬರಹ ಕನ್ನಡದಲ್ಲಿ ಈ ಪ್ರತ್ಯಯಗಳಿಗೆ **ಗೆ** ರೂಪ ಇದೆ ಮತ್ತು ಮಳವಳ್ಳಿ ಕನ್ನಡದಲ್ಲೂ ಅದೇ ರೂಪ ಇರುವುದನ್ನು ಕಾಣಬಹುದು.

| **ಮಳವಳ್ಳಿ ಕನ್ನಡ** | **ಬರಹ ಕನ್ನಡ** |
|---|---|
| ಅಜ್ಜಿಗೆ | ಅಜ್ಜಿಗೆ |
| ಅಕ್ಕಿಗೆ | ಹಕ್ಕಿಗೆ |
| ಕೊಡೆಗೆ | ಕೊಡೆಗೆ |
| ಅಟ್ಟಿಗೆ | ಮನೆಗೆ |

ಇದಲ್ಲದೆ ಬರಹ ಕನ್ನಡದಲ್ಲಿ ಬಹುವಚನ ಪದಗಳು **ಉ**ಕಾರದಲ್ಲಿ ಕೊನೆಗೊಳ್ಳುತ್ತಿದ್ದು, ಅವುಗಳ ನಂತರ ಈ ಪ್ರತ್ಯಯಗಳಿಗೆ **ಇಗೆ** ರೂಪವೇ ಇದೆ. ಆದರೆ ಮಳವಳ್ಳಿ ಕನ್ನಡದಲ್ಲಿ ಬಹುವಚನ ಪದಗಳು ಎಕಾರದಲ್ಲಿ ಕೊನೆಗೊಳ್ಳುತ್ತಿದ್ದು, ಅವುಗಳ ನಂತರ ಈ ಪ್ರತ್ಯಯಗಳಿಗೆ **ಗೆ** ಎಂಬ ರೂಪ ಇರುವುದನ್ನು ಕಾಣಬಹುದು.

| **ಮಳವಳ್ಳಿ ಕನ್ನಡ** | **ಬರಹ ಕನ್ನಡ** |
|---|---|
| ಸೊಸೆರ್ಗೆ | ಸೊಸೆಯರಿಗೆ |
| ಅಪ್ವರ್ಗೆ | ತಾಯಂದಿರಿಗೆ |
| ಮಕ್ಳುಗೆ | ಮಕ್ಕಳಿಗೆ |
| ಅಕ್ಗಳ್ಗೆ | ಹಕ್ಕಿಗಳಿಗೆ |
| ಮರ್ಗಳ್ಗೆ | ಮರಗಳಿಗೆ |

**ಅ**ಕಾರದಲ್ಲಿ ಕೊನೆಗೊಳ್ಳುವ ಪದಗಳು ಮನುಷ್ಯರನ್ನು ಗುರುತಿಸುತ್ತಿವೆಯಾದರೆ, ಅವುಗಳ ನಂತರ ಬರಹ ಕನ್ನಡದಲ್ಲಿ ಇಗೆ ರೂಪ ಇದೆ, ಆದರೆ ಮಳವಳ್ಳಿ ಕನ್ನಡದಲ್ಲಿ ಅವು ಅ '

ಎಂಬುದರಲ್ಲಿ ಕೊನೆಗೊಳ್ಳುತ್ತಿದ್ದು, ಅವುಗಳ ನಂತರ ಇದಕ್ಕೆ **ಂಗೆ** ರೂಪ ಇರುವುದನ್ನು ಕಾಣಬಹುದು.

| **ಮಳವಳ್ಳಿ ಕನ್ನಡ** | **ಬರಹ ಕನ್ನಡ** |
|---|---|
| ಅಣ್ಣಂಗೆ | ಅಣ್ಣನಿಗೆ |
| ಅಕ್ಕಂಗೆ | ಅಕ್ಕನಿಗೆ |
| ಕುರುಡಂಗೆ | ಕುರುಡನಿಗೆ |

ಉಳಿದ **ಅ**ಕಾರದಲ್ಲಿ ಕೊನೆಗೊಳ್ಳುವ ಪದಗಳ ನಂತರ ಬರಹ ಕನ್ನಡದಲ್ಲಿ **ಕ್ಕೆ** ರೂಪವಿದ್ದು ಮಳವಳ್ಳಿ ಕನ್ನಡದಲ್ಲಿ ಇದಕ್ಕೆ **ಕೆ** ರೂಪ ಇರುವುದನ್ನು ಕಾಣಬಹುದು.

| **ಮಳವಳ್ಳಿ ಕನ್ನಡ** | **ಬರಹ ಕನ್ನಡ** |
|---|---|
| ಮರ್ಕೆ | ಮರಕ್ಕೆ |
| ಅಟ್ಕೆ | ಅಟ್ಟಕ್ಕೆ |
| ಊಟ್ಕೆ | ಊಟಕ್ಕೆ |

ಬರಹ ಕನ್ನಡದಲ್ಲಿ ಬರುವ ಅಲ್ಲಿ ಪ್ರತ್ಯಯಕ್ಕೆ ಮಳವಳ್ಳಿ ಕನ್ನಡದಲ್ಲಿ **ಅಲ್ಲಿ, ಲಿ** ಮತ್ತು **ಲ್ಲಿ** ಎಂಬ ರೂಪಗಳಿವೆ. **ಂದ** ಪ್ರತ್ಯಯದ ಹಾಗೆ, ಈ ಪ್ರತ್ಯಯವು ಸೇರಿದಾಗಲೂ **ರ್** ಒಂದನ್ನು ಬಿಟ್ಟು ಬೇರೆ **ದ್, ಯ್,** ಇನ್ ಮೊದಲಾದವುಗಳು ಬರುವುದಿಲ್ಲ.

| **ಮಳವಳ್ಳಿ ಕನ್ನಡ** | **ಬರಹ ಕನ್ನಡ** |
|---|---|
| ಮರ್ದಲ್ಲಿ | ಮರದಲ್ಲಿ |
| ಕಾಡಲಿ | ಕಾಡಿನಲ್ಲಿ |
| ಮನೆಲಿ | ಮನೆಯಲ್ಲಿ |
| ಅಕ್ಕಿಲಿ | ಅಕ್ಕಿಯಲ್ಲಿ |
| ಅದ್ರಲ್ಲಿ | ಅದರಲ್ಲಿ |

ಈ ಪ್ರತ್ಯಯಗಳ ಬಳಕೆಯಲ್ಲಿ ಬರಹ ಕನ್ನಡಕ್ಕೂ ಮಳವಳ್ಳಿ ಕನ್ನಡಕ್ಕೂ ನಡುವೆ ಮತ್ತೊಂದು ವ್ಯತ್ಯಾಸ ಇದೆ. ಮಳವಳ್ಳಿ ಕನ್ನಡದಲ್ಲಿ ಈ ಪ್ರತ್ಯಯವನ್ನು ಮನುಷ್ಯರು ಇಲ್ಲವೇ ಇತರ ಪ್ರಾಣಿಗಳನ್ನು ಹೆಸರಿಸುವ ಪದಗಳೊಂದಿಗೆ ಬಳಸಲು ಬರುವುದಿಲ್ಲ.

ಬರಹ ಕನ್ನಡದಲ್ಲೂ ಮನುಷ್ಯರನ್ನು ಹೆಸರಿಸುವ ಪದಗಳೊಂದಿಗೆ ಬಂದಾಗ ಅಲ್ಲಿ ಪ್ರತ್ಯಯಕ್ಕೆ ಸ್ಥಳವನ್ನು ತಿಳಿಸುವ ಅರ್ಥಕ್ಕಿಂತಲೂ ಇರುವ ಇಲ್ಲವೇ, ಅವನು ಹೊಂದಿರುವ ಅರ್ಥವನ್ನು ತಿಳಿಸುತ್ತದೆ.

**ಮಳವಳ್ಳಿ ಕನ್ನಡ :** ನಮ್ಮ ಅಣ್ಣಣತವು ಮೂರ್ ನಾಯಿ ಅವೆ

**ಬರಹ ಕನ್ನಡ :** ನಮ್ಮ ಅಣ್ಣನಲ್ಲಿ ಮೂರು ನಾಯಿಗಳಿವೆ

ಮಳವಳ್ಳಿ ಕನ್ನಡದಲ್ಲಿ ಈ ಅರ್ಥವನ್ನು ಪಡೆಯಲು **ತವು** ಎಂಬ ಪದವನ್ನು ಬಳಸಲಾಗುತ್ತದೆ.

ಈ ರೀತಿಯಾಗಿ ಮಳವಳ್ಳಿ ಕನ್ನಡದಲ್ಲಿ ಸಂಬಂಧವಾಚಕ ಪ್ರತ್ಯಯಗಳ ಬಗೆಗೆ ಕಾಣಬಹುದು. ಬರಹ ಕನ್ನಡಕ್ಕಿಂತ ಮಳವಳ್ಳಿ ಕನ್ನಡದಲ್ಲಿ ಸಂಬಂಧವಾಚಕಗಳು ಬಳಕೆಗೊಳ್ಳುವ ವಿಧಾನ ಮತ್ತು ಭಿನ್ನತೆಯನ್ನು ಗುರ್ತಿಸಲಾಗಿದೆ. ತೃತಿಯ, ಚತುರ್ಥಿ, ಷಷ್ಠಿ ವಿಭಕ್ತಿಪ್ರತ್ಯಯಗಳು ಯಾವ ಯಾವ ಸಂದರ್ಭಗಳಲ್ಲಿ ಭಿನ್ನ ಮಾದರಿಗಳಲ್ಲಿ ಬಳಕೆಗೊಳ್ಳುತ್ತವೆ ಎಂಬುದುನ್ನು ಕಾಣಬಹುದು.

### ೪.೫. ಕಾಲ ಸೂಚಕ ಪ್ರತ್ಯಯಗಳು

ಕನ್ನಡದ ಕ್ರಿಯಾಪದಗಳಲ್ಲಿ ಕ್ರಿಯಾಪದದ ಕಾಲವನ್ನು ಉತ್ತಮ ಪುರುಷನ ಕಾಲಕ್ಕೆ ಸಂಬಂಧಿಸಿದಂತೆ ತಿಳಿಸಲಾಗುತ್ತದೆ. ಒಂದು ವಾಕ್ಯವನ್ನು ಆಡಿರುವ ಸಮಯಕ್ಕಿಂತ ಮೊದಲೇ ಆ ಕ್ರಿಯೆ ನಡೆದಿರುವ ಬಗ್ಗೆ ವಾಕ್ಯ ಹೇಳುತ್ತದೆ. ಅದರ ಕ್ರಿಯಾಪದದಲ್ಲಿ ಭೂತಕಾಲ ಪ್ರತ್ಯಯವನ್ನು ಮತ್ತು ಅದೇ ಕಾಲದ ಇಲ್ಲವೇ ಅದರ ನಂತರ ನಡೆಯುವುದಾದರೆ ಭವಿಷ್ಯತ್ ಕಾಲದ ಪ್ರತ್ಯಯವನ್ನು ಬಳಸಲಾಗುತ್ತದೆ. ಮಳವಳ್ಳಿ ಕನ್ನಡದಲ್ಲೂ ಇದೇ ರೀತಿಯ ಹೋಲಿಕೆ ಬಳಕೆಯಲ್ಲಿರುವುದನ್ನು ಕಾಣಬಹುದು.

೧. **ಮಳವಳ್ಳಿ ಕನ್ನಡ :** ಅಮ ಅಟ್ಗೆ ವೋದ

**ಬರಹಕನ್ನಡ :** ಅವನು ಮನೆಗೆ ಹೋದ.

೨. **ಮಳವಳ್ಳಿ ಕನ್ನಡ :** ಅವ ಅಟ್ಗೆ ವಯ್‌ತನೆ

**ಬರಹ ಕನ್ನಡ :** ಅವನು ಮನೆಗೆ ಹೋಗುತ್ತಾನೆ.

ಮೇಲಿನ ಮೊದಲ ವಾಕ್ಯದಲ್ಲಿ ತಿಳಿಸುವ ಕ್ರಿಯೆ ಆ ವಾಕ್ಯವನ್ನು ಆಡಿರುವ ಕಾಲಕ್ಕಿಂತ ಮೊದಲೇ ನಡೆದಿದೆ. ಹಾಗಾಗಿ ಅದರ ಕ್ರಿಯಾಪದದಲ್ಲಿ **ದ್** ಎಂಬ ಭೂತಕಾಲದ ಪ್ರತ್ಯಯವನ್ನು ಬಳಸಲಾಗಿದೆ.

ಎರಡನೆಯ ವಾಕ್ಯದಲ್ಲಿ ತಿಳಿಸುವ ಕ್ರಿಯೆ ಆ ವಾಕ್ಯವನ್ನು ಆಡಿದ ನಂತರ ನಡೆಯುವಂತಹುದಾಗಿದೆ. ಹಾಗಾಗಿ ಅದರ ಕ್ರಿಯಾಪದದಲ್ಲಿ **ಉತ್ತ** ಎಂಬ ಭವಿಷ್ಯತ್ ಕಾಲದ ಪ್ರತ್ಯಯವನ್ನು ಬಳಸಲಾಗಿದೆ.

ಕನ್ನಡದಲ್ಲಿ ವರ್ತಮಾನವನ್ನು ತಿಳಿಸುವುದಕ್ಕಾಗಿ **ಉತ್ತ** ಎಂಬ ಪ್ರತ್ಯಯ ಬಳಕೆಯಲ್ಲಿರುವುದನ್ನು ಕಾಣಬಹುದು.

### ೪.೫.೧. ಭೂತಕಾಲ ಮತ್ತು ಭವಿಷ್ಯತ್ ಕಾಲ

ಮಳವಳ್ಳಿ ಕನ್ನಡದ ಕ್ರಿಯಾಪದಗಳಲ್ಲಿ ಭೂತಕಾಲ ಮತ್ತು ಭವಿಷ್ಯತ್ ಕಾಲಗಳನ್ನು ಹೇಳುವುದಕ್ಕಾಗಿ ಬರಹ ಕನ್ನಡದಲ್ಲಿರುವಂತಹ **ದ್** ಮತ್ತು **ಉತ್ತ** ಪ್ರತ್ಯಯಗಳೇ ಬಳಕೆಯಲ್ಲಿವೆಯಾದರೂ ಅವುಗಳ ರೂಪದಲ್ಲಿ ಕೆಲವು ವ್ಯತ್ಯಾಸಗಳನ್ನು ಕಾಣಬಹುದು. ಭವಿಷ್ಯತ್‌ಅನ್ನು ತಿಳಿಸುವ **ಉತ್ತ** ಪ್ರತ್ಯಯ ಹೆಚ್ಚು ಕ್ರಿಯಾಪದಗಳೊಂದಿಗೂ **ತ** ರೂಪದಲ್ಲಿ ಬರುತ್ತದೆ.

| **ಮಳವಳ್ಳಿ ಕನ್ನಡ** | **ಬರಹ ಕನ್ನಡ** |
|---|---|
| ಬರಿತ | ಬರೆಯುತ್ತಾನೆ |
| ಕುಡಿತ | ಕುಡಿಯುತ್ತಾನೆ |
| ಮಾಡ್ತ | ಮಾಡುತ್ತಾನೆ |
| ಉಣ್ತ | ಉಣ್ಣುತ್ತಾನೆ |
| ತಿಂತ | ತಿನ್ನುತ್ತಾನೆ |

ಭೂತಕಾಲವನ್ನು ತಿಳಿಸುವ **ದ್** ಪ್ರತ್ಯಯಕ್ಕೆ ಬರಹ ಕನ್ನಡದಲ್ಲಿ ಕಾಣಿಸುವ ಹಾಗೆ ಮಳವಳ್ಳಿ ಕನ್ನಡದಲ್ಲೂ ಯಾವುದೇ ವ್ಯತ್ಯಾಸವಿಲ್ಲದಿರುವುದನ್ನು ಕಾಣಬಹುದು.

| **ಮಳವಳ್ಳಿ ಕನ್ನಡ** | **ಬರಹ ಕನ್ನಡ** |
|---|---|
| ಬಂದ | ಬಂದ |
| ತಿಂದ | ತಿಂದ |
| ಸಿಕ್ಕಿದ | ಸಿಕ್ಕಿದ |
| ವೋದ | ಹೋದ |

ಈ ಎರಡು ಬಗೆಯ ಕ್ರಿಯಾರೂಪಗಳ ಬಳಕೆಯನ್ನು ಕೆಳಗೆ ಕೊಟ್ಟಿರುವ ವಾಕ್ಯಗಳಲ್ಲಿ ಕಾಣಬಹುದು.

೧. **ಮಳವಳ್ಳಿ ಕನ್ನಡ :** ನಾಮು ನಾಳ್ಗೆ ಬತ್ತಿಮಿ
**ಬರಹ ಕನ್ನಡ :** ನಾವು ನಾಳೆಗೆ ಬರುತ್ತೇವೆ

೨. **ಮಳವಳ್ಳಿ ಕನ್ನಡ :** ನಾಮು ಇವತು ಸರ್ನೆ ಬಂದ್ನಮೊ
**ಬರಹ ಕನ್ನಡ :** ಇವತ್ತು ನಾವು ಬೇಗ ಬಂದೆವು

೩. **ಮಳವಳ್ಳಿ ಕನ್ನಡ :** ಇಮ ಓದ್ತಾವ್ನೆ
**ಬರಹ ಕನ್ನಡ :** ಹುಡುಗ ಓದುತ್ತಾನೆ

೪. **ಮಳವಳ್ಳಿ ಕನ್ನಡ :** ಇಮ ವೊದುಗ್ದ
**ಬರಹ ಕನ್ನಡ :** ಹುಡುಗ ಓಡಿದ

ಆದರೆ ಕೆಲವು ಕ್ರಿಯಾ ಪದಗಳಿಗೆ ಭೂತಕಾಲದ ಪ್ರತ್ಯಯದೊಂದಿಗೆ ಬಂದಾಗ ಮಳವಳ್ಳಿ ಕನ್ನಡದಲ್ಲಿ ಬೇರೆ ಬಗೆಯ ರೂಪಗಳಿವೆ. ಉದಾಹರಣೆಗೆ **ತರು** ಮತ್ತು **ಬರು** ಕ್ರಿಯಾಪದಗಳಿಗೆ ಭವಿಷ್ಯತ್ ಕಾಲದ ಪ್ರತ್ಯಯದೊಂದಿಗೆ ಬಂದಾಗ **ತ** ಮತ್ತು **ಬ** ಎಂಬ ಪದಗಳು ಸೇರಿಕೊಂಡಿರುವ ರೂಪವನ್ನು ಕಾಣಬಹುದು. ಮತ್ತು **ಆಗು** ಮತ್ತು **ಹೋಗು** ಕ್ರಿಯಾಪದಗಳ ಗಕಾರ ವಕಾರವಾಗುತ್ತದೆ.

| ಮಳವಳ್ಳಿ ಕನ್ನಡ | ಬರಹ ಕನ್ನಡ |
|---|---|
| ತತ್ತ | ತರುತ್ತಾನೆ |
| ಬತ್ತ | ಬರುತ್ತಾನೆ |
| ಅಯ್ತ | ಆಗುತ್ತದೆ |
| ವಯ್ತ | ಹೋಗುತ್ತದೆ |

ಭೂತಕಾಲ ಪ್ರತ್ಯಯ ಸೇರಿದಾಗ ಕ್ರಿಯಾಪದಗಳ ಕೊನೆಯಲ್ಲಿ ಬರುವ ಇಕಾರ ಉಕಾರವಾಗುತ್ತದೆ ಮತ್ತು ಎಕಾರವಾಗುತ್ತದೆ.

| ಮಳವಳ್ಳಿ ಕನ್ನಡ | ಬರಹ ಕನ್ನಡ |
|---|---|
| ಕುಣ್ದೆ | ಕುಣಿದ |
| ಬರ್ದೆ | ಬರೆದ |
| ನಡ್ದವು | ನಡೆದವು |
| ವಡಿತು | ಒಡೆಯಿತು |

### ೪.೫.೨. ವರ್ತಮಾನ ಕಾಲ

ಒಂದೇ ಸಮಯದಲ್ಲಿ ಜರುಗುವ ಎರಡು ಕ್ರಿಯೆಗಳನ್ನು ತಿಳಿಸುವ ವಾಕ್ಯಗಳನ್ನು ಸೇರಿಸುವುದಕ್ಕಾಗಿ ಬರಹ ಕನ್ನಡದಲ್ಲಿ **ಉತ್ತಾ** ಎಂಬ ಪದವನ್ನು ಬಳಸಲಾಗುತ್ತದೆ. ಆದರೆ ಮಳವಳ್ಳಿ ಕನ್ನಡದಲ್ಲಿ **ಅ** ಮತ್ತು **ತ್ತ, ಕಂಡ್** ಎಂದು ಬಳಕೆಯಾಗುತ್ತದೆ. **ತ್ತ** ಮತ್ತು **ಕಂಡ್** ಎಂಬುದನ್ನು ಕ್ರಿಯಾಪದಕ್ಕೆ ನೇರವಾಗಿ ಸೇರಿಸಲಾಗತ್ತದೆ. ಉದಾಹರಣೆಗಳಲ್ಲಿ ಕಾಣಬಹುದು.

| ಮಳವಳ್ಳಿ ಕನ್ನಡ | ಬರಹ ಕನ್ನಡ |
|---|---|
| ಮಾಡ್ಕ/ ಮಾಡ್ಕಂಡ್ | ಮಾಡುತ್ತಾ |
| ತಿಂತಾ/ತಿಂನ್ಕಂಡ್ | ತಿನ್ನುತ್ತಾ |
| ಕೊಡ್ತ/ಕೊಟ್ಕಂಡ್ | ಕೊಡುತ್ತಾ |

| | |
|---|---|
| ಬತ್ತ | ಬರುತ್ತಾ |
| ಏಳ್ತ | ಹೇಳುತ್ತಾ |

ಈ ಕ್ರಿಯಾರೂಪದಲ್ಲಿ **ಕಂಡ್** ಎಂಬ ರೂಪಕ್ಕೆ **ಕೊಂಡ್** ಎಂಬ ಬೇರೆ ರೂಪವೂ ಇವೆ ಎಂಬುದನ್ನು ಕೆಳಗಿನ ಉದಾಹರಣೆಗಳಲ್ಲಿ ಕಾಣಬಹುದು.

೧. **ಮಳವಳ್ಳಿ ಕನ್ನಡ :** ಅಮ ಏನ್ನೋ ಬರಕೊಂಡ್ ಕುಂತ್ವನೆ
**ಬರಹ ಕನ್ನಡ :** ಅವನು ಏನನ್ನೋ ಬರೆಯುತ್ತಾ ಕೂತಿದ್ದಾನೆ

೨. **ಮಳವಳ್ಳಿ ಕನ್ನಡ :** ಅಮ ನಿಮ್ಗಳ್ನೆಲ್ಲ ಬಯ್ಕೊಂಡ್ ಇರ್ತಿದ್ದ
**ಬರಹ ಕನ್ನಡ :** ಅವನು ನಿಮ್ಮನ್ನೆಲ್ಲ ಬಯ್ಯುತ್ತಾ ಇದ್ದ

೩. **ಮಳವಳ್ಳಿ ಕನ್ನಡ :** ಇಲ್ಲೆಲ್ಲ ಒಂದ್ಸರಿ ಗುಡ್ಸೊಂಡ್ ಹೋಗಿದ್ದ
**ಬರಹ ಕನ್ನಡ :** ಇಲ್ಲೆಲ್ಲಾ ಒಮ್ಮೆ ಗುಡಿಸುತ್ತಾ ಹೋಗಿದ್ದಾರೆ

### ೪.೬.ನಿಷೇಧಾರ್ಥಕಗಳು

ಕ್ರಿಯಾಪದಗಳನ್ನು ನಿಷೇದಾರ್ಥಕವಾಗಿ ಬರಹ ಕನ್ನಡದಲ್ಲಿ ಎರಡು ಬಗೆಯಲ್ಲಿ ಬಳಸಲಾಗುತ್ತದೆ. ಕ್ರಿಯಾಪದಕ್ಕೆ **ಅಲು** ಪ್ರತ್ಯಯವನ್ನು ಸೇರಿಸಿ, ಅದಕ್ಕೆ **ಇಲ್ಲ** ಎಂಬುದನ್ನು ಸೇರಿಸುವುದು ಒಂದು ಬಗೆ. ಈ ರೀತಿ ಹೇಳುವುದಕ್ಕೆ ಹಿಂದಿನ ಕ್ರಿಯೆಯಲ್ಲಿ ನಿಷೇಧಾರ್ಥಕದ ಅರ್ಥವಿರುವುದನ್ನು ಕಾಣಬಹುದು.

ಕ್ರಿಯಾಪದದ ನಾಮಪದರೂಪಕ್ಕೆ ಇಲ್ಲ ಎಂಬುದನ್ನು ಸೇರಿಸುವುದು ಇನ್ನೊಂದು ಬಗೆ. ಇದಕ್ಕೆ ಭವಿಷ್ಯತ್‌ಕಾಲದ ಕ್ರಿಯಾ ನಿಷೇಧಾರ್ಥಕದ ಅರ್ಥವಿದೆ (ಮಾಡುವುದಿಲ್ಲ, ಹೋಗುವುದಿಲ್ಲ)

ಸಾಮಾನ್ಯವಾಗಿ ಕ್ರಿಯಾಪದಕ್ಕೆ **ಅಲು** ಪ್ರತ್ಯಯವನ್ನು ಸೇರಿಸಿರುವ ಕ್ರಿಯಾರೂಪವನ್ನು ಬರಹ ಕನ್ನಡದಲ್ಲಿ ಭವಿಷ್ಯತ್‌ಕಾಲದ ಕ್ರಿಯೆಯನ್ನು ತಿಳಿಸುವ ಜೋಡಿ ರೂಪವಾಗಿ ಬಳಸಲಾಗುತ್ತದೆ. ಆದರೆ ಕನ್ನಡದ ಕೆಲವು ಉಪಭಾಷೆಗಳಲ್ಲಿ **ಅಲು** ಪ್ರತ್ಯಯವನ್ನು ಬಳಸಿರುವ ಕ್ರಿಯಾರೂಪವನ್ನು ಭೂತಕಾಲದ ಕ್ರಿಯೆಯನ್ನು ತಿಳಿಸುವ ಜೋಡಿ ರೂಪವಾಗಿಯೂ ಬಳಸಲಾಗುತ್ತದೆ.

೧. ಮರಯ್ಯ ತರಕಾರಿ ತರಲು ಸಂತೆಗೆ ಹೋದ

೨. ಮರಯ್ಯ ತರಕಾರಿ ತರಲು, ಗೌರಿ ಅಡುಗೆ ಮಾಡಿದಳು

೩. ಮರಯ್ಯ ತರಕಾರಿ ತರಲಿಲ್ಲ.

ಮೇಲಿನ ಮೊದಲ ಉದಾಹರಣೆಯಲ್ಲಿ **ಅಲು** ಪ್ರತ್ಯಯ ಸಂತೆಗೆ ಹೋಗುವ ಕ್ರಿಯೆಯ ನಂತರ ಹೋಗುವ ಕ್ರಿಯೆಯನ್ನು ತಿಳಿಸುತ್ತದೆ. ಆದರೆ ಎರಡನೆಯ ಉದಾಹರಣೆಯಲ್ಲಿ ಅದು ಗೌರಿ ಅಡುಗೆ ಮಾಡುವ ಮೊದಲು ನಡೆಯುವ ಕ್ರಿಯೆಯನ್ನು ತಿಳಿಸುತ್ತಿದೆ. ಮೂರನೆಯ ವಾಕ್ಯದಲ್ಲಿ ಕ್ರಿಯೆಯ ನಿಷೇಧಾರ್ಥವನ್ನು ತಿಳಿಸುತ್ತಿದೆ.

ಮಳವಳ್ಳಿ ಕನ್ನಡದ ನಿಷೇಧಾರ್ಥಕ ಕ್ರಿಯಾರೂಪಗಳು ಮೇಲೆ ವಿವರಿಸಿದ ಬರಹ ಕನ್ನಡದ ರೂಪಗಳಿಂದ ಬೇರಾಗಿವೆ. ಅವುಗಳಲ್ಲಿ ಕ್ರಿಯೆಯನ್ನು ತಿಳಿಸುವ ಕ್ರಿಯಾರೂಪಗಳಿಗೆ ನೇರವಾಗಿ ಇಲ್ಲ ಮತ್ತು **ಅಲಿ** ಪದಗಳನ್ನು ಸೇರಿಸಿ ಅಂತಹ ನಿಷೇಧಾರ್ಥಕಗಳ ರೂಪವನ್ನು ಬಳಸುವುದನ್ನು ಕಾಣಬಹುದು.

೧. **ಮಳವಳ್ಳಿ ಕನ್ನಡ :** ನಾನು ಕೆಲ್ಸ ಮಾಡ್ತಿನಿ
**ಬರಹ ಕನ್ನಡ :** ನಾನು ಕೆಲಸ ಮಾಡುತ್ತೇನೆ

೨. **ಮಳವಳ್ಳಿ ಕನ್ನಡ :** ನಾನು ಕೆಲ್ಸ ಮಾಡಲಿ
**ಬರಹ ಕನ್ನಡ :** ನಾನು ಕೆಲಸ ಮಾಡುವುದಿಲ್ಲ

೩. **ಮಳವಳ್ಳಿ ಕನ್ನಡ :** ನಾನು ಕೆಲ್ಸ ಮಾಡ್ದಿ
**ಬರಹ ಕನ್ನಡ :** ನಾನು ಕೆಲಸ ಮಾಡಿದೆ

೪. **ಮಳವಳ್ಳಿ ಕನ್ನಡ :** ನಾನು ಕೆಲ್ಸ ಮಾಡಿದ್ದಿ
**ಬರಹ ಕನ್ನಡ :** ನಾನು ಕೆಲಸ ಮಾಡಿದ್ದೇನೆ

೫. **ಮಳವಳ್ಳಿ ಕನ್ನಡ :** ನಾನು ಕೆಲ್ಸ ಮಾಡ್ನಿಲ್ಲ
**ಬರಹ ಕನ್ನಡ :** ನಾನು ಕೆಲಸ ಮಾಡಲಿಲ್ಲ

ಮಳವಳ್ಳಿ ಕನ್ನಡದ ಎರಡನೆ ವಾಕ್ಯದಲ್ಲಿ ಭವಿಷ್ಯತ್‌ಕಾಲದ ಕ್ರಿಯೆಯನ್ನು ತಿಳಿಸುವ **ಮಾಡಲಿ** ಎಂಬ ಪದವು ನೇರವಾಗಿ ನಿಷೇಧಾರ್ಥ ಪದವನ್ನು ಸೇರಿಸಲಾಗಿದೆ. ಆದರೆ ಅದರ ಕೆಳಗೆ ಕೊಟ್ಟಿರುವ ಬರಹ ಕನ್ನಡದ **ಮಾಡು** ಕ್ರಿಯಾಪದದ ರೂಪವಾದ ಮಾಡುವುದು ಎಂಬುದಕ್ಕೆ ಇಲ್ಲ ಪದವನ್ನು ಸೇರಿಸಲಾಗಿದೆ.

ಭೂತಕಾಲದ ಕ್ರಿಯಾಪದವನ್ನು ನಿಷೇಧಾರ್ಥಕವಾಗಿ ಮಳವಳ್ಳಿ ಕನ್ನಡದಲ್ಲಿ ಇದಕ್ಕಿಂತ ಸ್ವಲ್ಪ ಮಟ್ಟಿಗೆ ಬೇರಾಗಿ ಬಳಕೆಗೊಳ್ಳುವುದನ್ನು ಐದನೆ ಉದಾಹರಣೆಯಲ್ಲಿ ಕಾಣಬಹುದು.

ಮೂರನೆಯ ಉದಾಹರಣೆಯಲ್ಲಿರುವ ಭೂತಕಾಲವನ್ನು ತಿಳಿಸುವ ಮಾಡ್ದಿ ಎಂಬ ಕ್ರಿಯಾರೂಪಕ್ಕೆ ನೇರವಾಗಿ ಇಲ್ಲ ಎಂಬ ಪದವನ್ನು ಸೇರಿಸುವ ಬದಲು, ನಾಲ್ಕನೆಯ ಉದಾಹರಣೆಯಲ್ಲಿರುವ ಮಾಡಿದ್ದಿ ಎಂಬ ಅದೇ ಕ್ರಿಯಾಪದದ ಸಮಾಸ ರೂಪಕ್ಕೆ (ಮಾಡಿ+ಇದ್ದೆ ಎಂಬುದಕ್ಕೆ) ಈ ಇಲ್ಲ ಪದವನ್ನು ಸೇರಿಸಲಾಗಿದೆ.

ಈ ರೀತಿ ಮಳವಳ್ಳಿ ಕನ್ನಡದ ನಿಷೇಧಾರ್ಥಕ ರೂಪಗಳಲ್ಲಿ ಲಿಂಗಪ್ರತ್ಯಯಗಳು ಕೆಲವು ಕಡೆಗಳಲ್ಲಿ ಇಲ್ಲ ಪದದ ಮೊದಲು ಬರುತ್ತವೆ ಮತ್ತು ಬೇರೆ ಕೆಲವು ಕಡೆಗಳಲ್ಲಿ ಅದರ ಬಳಿಕ ಬರುತ್ತವೆ. ಉದಾಹರಣೆಗೆ ಕೆಳಗೆ ಕೊಟ್ಟಿರುವ ರೂಪಗಳಲ್ಲಿ ಕಾಣಬಹುದು.

| | **ಏಕವಚನ** | **ಬಹುವಚನ** |
|---|---|---|
| **ಉತ್ತಮಪುರುಷ** | ಕೊಡಲ್ಲಿ | ಕೊಡಲ್ಮೊ |
| **ಮಧ್ಯಮಪುರುಷ** | ಕೊಡ್ತಿಲ್ಲ | ಕೊಡಲ್ರ |
| **ಪ್ರಥಮಪುರುಷ** | ಕೊಡಲ್ನ | ಕೊಡಲ್ರು |

ಈ ಮೇಲಿನ ನಿಷೇಧಾರ್ಥಕ ಕ್ರಿಯಾರೂಪಗಳಲ್ಲಿ ಉತ್ತಮಪುರುಷ ಮತ್ತು ಮಧ್ಯಮಪುರುಷರನ್ನು ತಿಳಿಸುವ ಲಿಂಗ ಪ್ರತ್ಯಯಗಳು ಇಲ್ಲ, ಅಲ್ಲ ಪದಗಳ ನಂತರ ಬಂದಿವೆ ಮತ್ತು ಉಳಿದ ಲಿಂಗಪ್ರತ್ಯಯಗಳು ಇಲ್ಲ ಪದದ ಮೊದಲು ಬಂದಿದೆ.

ಭವಿಷ್ಯತ್‌ಕಾಲದ ನಿಷೇಧಾರ್ಥಕ ಕ್ರಿಯಾಪದವನ್ನು ಮಳವಳ್ಳಿ ಕನ್ನಡದಲ್ಲಿ ಈ ರೀತಿಯ ಕ್ರಿಯಾರೂಪಗಳಷ್ಟೆ ಅಲ್ಲದೆ ಬೇರೆ ನಿಷೇಧಾರ್ಥ ಕ್ರಿಯಾರೂಪಗಳು ಬಳಕೆಯಲ್ಲಿವೆ. ಇವನ್ನು ಕ್ರಿಯಾಪದಕ್ಕೆ ಲಿಂಗಪ್ರತ್ಯಯಗಳನ್ನು ನೇರವಾಗಿ ಸೇರಿಸಿ ಪಡೆಯಲಾಗುತ್ತದೆ.

ಉದಾಹಾರಣೆಗಾಗಿ ಮಾಡು ಕ್ರಿಯಾ ಪದಕ್ಕೆ ಉತ್ತಮಪುರುಷದ ಅಲ್ಲಿ ಪ್ರತ್ಯಯವನ್ನು ನೇರವಾಗಿ ಸೇರಿಸಿ ಮಾಡೆ ಕ್ರಿಯಾರೂಪವನ್ನು ಪಡೆಯಲು ಬರುತ್ತದೆ. ಅದಕ್ಕೆ ಮಾಡುವುದಿಲ್ಲ ಎಂಬ ಅರ್ಥ ಮಳವಳ್ಳಿ ಕನ್ನಡದಲ್ಲಿ ಬರುತ್ತದೆ.

೧. **ಮಳವಳ್ಳಿ ಕನ್ನಡ** : ನಾನು ಆ ಕೆಲ್ಸವ್ವ ಮಾಡಲಿ
**ಬರಹ ಕನ್ನಡ** : ನಾನು ಆ ಕೆಲಸವನ್ನು ಮಾಡುವುದಿಲ್ಲ

೨. **ಮಳವಳ್ಳಿ ಕನ್ನಡ** : ನಾಮು ಆ ಕೆಲ್ಸವ್ವ ಮಾಡಲ್ಮೊ
**ಬರಹ ಕನ್ನಡ** : ನಾವು ಆ ಕೆಲಸವನ್ನು ಮಾಡುವುದಿಲ್ಲ

೩. **ಮಳವಳ್ಳಿ ಕನ್ನಡ** : ಅವು ಆ ಕೆಲ್ಸವ್ವ ಮಾಡಲ್ರು
**ಬರಹ ಕನ್ನಡ** : ಅವರು ಆ ಕೆಲಸವನ್ನು ಮಾಡುವುದಿಲ್ಲ

ಈ ನಿಷೇಧಾರ್ಥಕ ಕ್ರಿಯಾರೂಪಗಳು ಉತ್ತಮ ಮತ್ತು ಮಧ್ಯಮಪುರುಷರೊಂದಿಗೆ ಬೇರಾಗಿರುವ ಪ್ರಥಮಪುರುಷನನ್ನು ತಿಳಿಸುವಲ್ಲಿ ಪುಲ್ಲಿಂಗ ಮತ್ತು ನಪುಂಸಕ ಎಂಬ ವ್ಯತ್ಯಾಸವನ್ನಷ್ಟೆ ತೋರಿಸುತ್ತವೆ. ಇದಕ್ಕಾಗಿ ಕ್ರಿಯಾಪದಗಳೊಂದಿಗೆ ಪುಲ್ಲಿಂಗವನ್ನು ತಿಳಿಸಲು **ಅಮ** ಪ್ರತ್ಯಯವನ್ನು ನಪುಂಸಕಲಿಂಗವನ್ನು ತಿಳಿಸಲು ಅದು ಎಂಬ ಪ್ರತ್ಯಯವನ್ನು ಬಳಸಲಾಗುತ್ತದೆ.

೧. **ಮಳವಳ್ಳಿ ಕನ್ನಡ :** ಅಮ ಯಲ್ಲೂ ವೋಗಲ್ನ
**ಬರಹ ಕನ್ನಡ :** ಅವನು ಎಲ್ಲಿಗೂ ಹೋಗುವುದಿಲ್ಲ

೨. **ಮಳವಳ್ಳಿ ಕನ್ನಡ :** ಅದು ಯಲ್ಲೂ ವೋಗಲ್ದು
**ಬರಹ ಕನ್ನಡ :** ಅದು ಎಲ್ಲಿಗೂ ಹೋಗುವುದಿಲ್ಲ

೩. **ಮಳವಳ್ಳಿ ಕನ್ನಡ :** ಅವ್ವ ಯಲ್ಲೂ ವೋಗಲ್ಲು
**ಬರಹ ಕನ್ನಡ :** ತಾಯಿ ಎಲ್ಲಿಗೂ ಹೋಗುವುದಿಲ್ಲ

## ೪.೭.ಕ್ರಿಯಾಪದಗಳ ವಿಶೇಷ ರೂಪಗಳು

ಒಂದು ವಾಕ್ಯದಲ್ಲಿ ಬರುವ ಕ್ರಿಯಾಪದವು ಒಬ್ಬ ವ್ಯಕ್ತಿ ಇಲ್ಲವೇ ವಸ್ತುವಿನ ವಿಶೇಷಣ ಎಂಬುದಾಗಿ ತಿಳಿಸಬೇಕಿದ್ದಲ್ಲಿ ಆ ವಾಕ್ಯದ ಕ್ರಿಯಾಪದವನ್ನು ಅದರ ವಿಶೇಷಣರೂಪಕ್ಕೆ ಬದಲಾಯಿಸಬೇಕಾಗುತ್ತದೆ. ಉದಾಹರಣೆಗೆ ಕೆಳಗಿನ ಉದಾಹರಣೆಗಳನ್ನು ಗಮನಿಸಬಹುದು.

೧. **ಮಳವಳ್ಳಿ ಕನ್ನಡ :** ಕೆಂಪಿ ಮಂಡ್ಯದಿಂದ ಒಂದು ಸೀರೆ ತಂದವ್ಳೆ
**ಬರಹ ಕನ್ನಡ :** ಕೆಂಪಿ ಮಂಡ್ಯದಿಂದ ಒಂದು ಸೀರೆ ತಂದಿದ್ದಾಳೆ.

೨. **ಮಳವಳ್ಳಿ ಕನ್ನಡ :** ಆ ಸೀರೆ ಲಾಯಕದೆ
**ಬರಹ ಕನ್ನಡ :** ಆ ಸೀರೆ ಚನ್ನಾಗಿದೆ

೩. **ಮಳವಳ್ಳಿ ಕನ್ನಡ :** ಕೆಂಪಿ ಮಂಡ್ಯದಿಂದ ತಂದ್ ಸೀರೆ ಲಾಯಕದೆ
**ಬರಹ ಕನ್ನಡ :** ಕೆಂಪಿ ಮಂಡ್ಯದಿಂದ ತಂದ ಸೀರೆ ಚನ್ನಾಗಿದೆ

ಮೊದಲ ಉದಾಹರಣೆಯಲ್ಲಿ ತಿಳಿಸಿರುವ ಕ್ರಿಯೆಯನ್ನು, ಎರಡನೆ ಉದಾಹರಣೆಯಲ್ಲಿ ಬಂದಿರುವ ಸೀರೆ ಎಂಬ ಪದದ ವಿಶೇಷಣವನ್ನಾಗಿ ಮಾಡಿ ಮೂರನೆಯ ವಾಕ್ಯವನ್ನು ಪಡೆಯಲಾಗಿದೆ. ಇದಕ್ಕಾಗಿ ಮೊದಲ ವಾಕ್ಯದ ಕೊನೆಯಲ್ಲಿ ಬರುವ **ತಂದವ್ಳೆ** ಎಂಬ ಕ್ರಿಯಾರೂಪದ ಬದಲು **ತರು** ಕ್ರಿಯಾಪದದ **ತಂದ** ಎಂಬ ವಿಶೇಷಣರೂಪವನ್ನು ಬಳಸಲಾಗಿದೆ.

ಬರಹ ಕನ್ನಡದಲ್ಲಿ ಮೂರು ಬಗೆಯ ವಿಶೇಷಣರೂಪಗಳು ಬಳಕೆಯಲ್ಲಿವೆ. ಭೂತಕಾಲದ ಕ್ರಿಯೆಯನ್ನು ತಿಳಿಸುವ **ಮಾಡಿದ, ತಂದ, ಕೊಟ್ಟ, ಕೇಳಿದ** ಮೊದಲಾದವು. ಭವಿಷ್ಯತ್‌ಕಾಲದ ಕ್ರಿಯೆಯನ್ನು ತಿಳಿಸುವ **ಮಾಡುವ, ತರುವ, ಕೊಡುವ, ಕೇಳುವ** ಮೊದಲಾದವು ಮತ್ತು ನಿಷೇಧಾರ್ಥಕ ಕ್ರಿಯೆಯನ್ನು ತಿಳಿಸುವ **ಮಾಡದ, ತಾರದ, ಕೊಡದ, ಕೇಳದ** ಮೊದಲಾದವು.

ಮಳವಳ್ಳಿ ಕನ್ನಡದಲ್ಲಿಯೂ ಇಂತಹ ಮೂರು ರೀತಿಯ ವಿಶೇಷಣರೂಪಗಳು ಬಳಕೆಯಾಗುತ್ತವೆ ಎಂಬುದನ್ನು ಕೆಳಗೆ ಕೊಟ್ಟಿರುವ ಉದಾಹರಣೆಯ ಮೂಲಕ ಕಾಣಬಹುದು.

೧. **ಮಳವಳ್ಳಿ ಕನ್ನಡ :** ಪಳ್ಗೆ ಓದ ಅಯ್‌ಕ್ಳು
**ಬರಹ ಕನ್ನಡ :** ಶಾಲೆಗೆ ಹೋದ ಹುಡುಗರು

೨. **ಮಳವಳ್ಳಿ ಕನ್ನಡ :** ಪಳ್ಗೆ ಓಗ್ವ ಅಯ್‌ಕ್ಳು
**ಬರಹ ಕನ್ನಡ :** ಶಾಲೆಗೆ ಹೋಗುವ ಹುಡುಗರು

೩. **ಮಳವಳ್ಳಿ ಕನ್ನಡ :** ಪಳ್ಗೆ ಓಗ್ದ ಅಯ್‌ಕ್ಳು
**ಬರಹ ಕನ್ನಡ :** ಶಾಲೆಗೆ ಹೋಗದ ಹುಡುಗರು

ಬರಹ ಕನ್ನಡ ಮತ್ತು ಮಳವಳ್ಳಿ ಕನ್ನಡಗಳಲ್ಲಿ ಬಳಕೆಯಲ್ಲಿರುವ ಈ ಮೂರು ಬಗೆಯ ವಿಶೇಷರೂಪಗಳ ನಡುವೆ ಕೆಳಗೆ ತಿಳಿಸಿದ ಹಾಗೆ ಎರಡು ಮುಖ್ಯವಾದ ವ್ಯತ್ಯಾಸಗಳಿವೆ.

ಭವಿಷ್ಯತ್‌ಕಾಲವನ್ನು ತಿಳಿಸುವ **ವ್** ಪ್ರತ್ಯಯಕ್ಕೆ ಮಳವಳ್ಳಿ ಕನ್ನಡದಲ್ಲಿ **ಮ್** ಎಂಬ ರೂಪ ಕಾಣಿಸಿಕೊಳ್ಳುತ್ತದೆ. ಅವು ಈ ವಿಶೇಷರೂಪದಲ್ಲೂ ಕಾಣಿಸಿಕೊಳ್ಳತ್ತವೆ ಎಂಬುದು ಒಂದು ವಿಶಿಷ್ಟತೆ. ಬರಹ ಕನ್ನಡದಲ್ಲಿ ಇದು ಬಹಳ ಕಡೆಗಳಲ್ಲೂ **ವ್** ಎಂಬ ಒಂದೇ ರೂಪದಲ್ಲಿ ಬರುತ್ತದೆ. ಆದರೆ ಇದು ಮಳವಳ್ಳಿ ಕನ್ನಡದಲ್ಲಿ **ಮ್** ಎಂಬ ಬೇರೆ ರೂಪ ಬಳಕೆಯಾಗುವುದನ್ನು ಕಾಣಬಹುದು.

| **ಮಳವಳ್ಳಿ ಕನ್ನಡ** | **ಬರಹ ಕನ್ನಡ** |
|---|---|
| ಕೊಡ್ಮ | ಕೊಡುವ |
| ಏಳ್ಮ | ಹೇಳುವ |
| ಓಗ್ಮ | ಹೋಗುವ |
| ಬರ್ಮ | ಬರುವ |

| | |
|---|---|
| ತಿನ್ಮ | ತಿನ್ನುವ |
| ಕಾಣ್ಮ | ಕಾಣುವ |

ನಿಷೇಧಾರ್ಥಕ ವಿಶೇಷಣರೂಪವನ್ನು ಪಡೆಯುವುದಕ್ಕಾಗಿ ಬರಹ ಕನ್ನಡದಲ್ಲಿ **ಅದ** (ಅದ್+ಅ) ಪ್ರತ್ಯಯವನ್ನು ಬಳಸಲಾಗುತ್ತದೆ. ಆದರೆ ಮಳವಳ್ಳಿ ಕನ್ನಡದಲ್ಲಿ **ಅಲಿ** ಪ್ರತ್ಯಯ ಬಳಕೆಯಾಗುವುದನ್ನು ಕಾಣಬಹುದು.

| **ಮಳವಳ್ಳಿ ಕನ್ನಡ** | **ಬರಹ ಕನ್ನಡ** |
|---|---|
| ಮಾಡಲಿ | ಮಾಡದ |
| ಓಗಲಿ | ಹೋಗದ |
| ಕೇಳಲಿ | ಕೇಳದ |
| ತಿನ್ನಲಿ | ತಿನ್ನದ |

ಇದಲ್ಲದೆ ಕೆಳಗೆ ಕೊಟ್ಟಿರುವ ಬೇರೆಯೂ ಎರಡು ವ್ಯತ್ಯಾಸಗಳು ಮಳವಳ್ಳಿ ಕನ್ನಡಕ್ಕೂ ಬರಹ ಕನ್ನಡಕ್ಕೂ ಇರುವ ವ್ಯತ್ಯಾಸವನ್ನು ತಿಳಿಸುತ್ತವೆ.

ಕ್ರಿಯಾಪದಗಳ ಭವಿಷ್ಯತ್‌ಕಾಲದ ವಿಶೇಷರೂಪದದೊಂದಿಗೆ **ಗಂಟ** ಎಂಬುದನ್ನು ಸೇರಿಸಿ ಅವು ತಿಳಿಸುವ ಕ್ರಿಯಾಪದ ಜರುಗುವ ವರೆಗೆ ಎಂಬ ಅರ್ಥವನ್ನು ಮಳವಳ್ಳಿ ಕನ್ನಡದಲ್ಲಿ ತಿಳಿಯಬಹುದು. ಬರಹ ಕನ್ನಡದಲ್ಲಿ ಇದಕ್ಕಾಗಿ **ವರೆಗೆ** ಎಂಬುದೇ ಬಳಕೆಯಾಗುತ್ತಿರುವುದನ್ನು ಕಾಣಬಹುದು.

೧. **ಮಳವಳ್ಳಿ ಕನ್ನಡ :** ಅಮ ಬರುಗಂಟ ಕುಂತ್ಕೊ
**ಬರಹ ಕನ್ನಡ :** ಅವನು ಬರುವವರೆಗೆ ಕುಳಿತುಕೊ

೨. **ಮಳವಳ್ಳಿ ಕನ್ನಡ :** ಈ ಜಂಬ್ರ ಮುಗಿಗಂಟ ಯಾರು ಏಳೊಂಗಿಲ್ಲ
**ಬರಹ ಕನ್ನಡ :** ಈ ಕೆಲಸ ಮುಗಿಯುವವರೆಗೆ ಯಾರು ಏಳಬಾರದು

ಮಳವಳ್ಳಿ ಕನ್ನಡದಲ್ಲಿ ಕ್ರಿಯಾಪದಗಳ ವಿಶೇಷರೂಪಕ್ಕೆ **ಓನು, ಓಳು** ಮತ್ತು **ಓರು** ಪ್ರತ್ಯಯಗಳನ್ನು ಸೇರಿಸಿ ಅವುಗಳ ನಾಮರೂಪಗಳನ್ನು ಪಡೆಯಲು ಬರುತ್ತದೆ. ಆದರೆ

ಬರಹ ಕನ್ನಡದಲ್ಲಿ ಇದಕ್ಕಾಗಿ ಈ ವಿಶೇಷರೂಪಗಳೊಂದಿಗೆ **ಅವನು, ಅವಳು** ಮತ್ತು **ಅವರು** ಎಂಬ ಸರ್ವನಾಮಗಳನ್ನು ಬಳಸಬೇಕಾಗುತ್ತದೆ.

ಮಳವಳ್ಳಿ ಕನ್ನಡದಲ್ಲಿ ಕ್ರಿಯಾಪದಗಳ ವಿಶೇಷರೂಪಕ್ಕೆ **ಓನು, ಓಳು** ಮತ್ತು **ಓರು** ಪ್ರತ್ಯಯಗಳನ್ನು ಸೇರಿಸಿ ಅವುಗಳ ನಾಮಪದರೂಪಗಳನ್ನು ಪಡೆಯಲು ಬರುತ್ತದೆ. ಆದರೆ ಬರಹ ಕನ್ನಡದಲ್ಲಿ ಇದಕ್ಕಾಗಿ ಈ ವಿಶೇಷರೂಪಗಳೊಂದಿಗೆ **ಅವನು, ಅವಳು** ಮತ್ತು **ಅವರು** ಎಂಬ ಸರ್ವನಾಮಪದಗಳನ್ನು ಬಳಸಲಾಗುತ್ತದೆ.

೧. **ಮಳವಳ್ಳಿ ಕನ್ನಡ :** ಪಳ್ಗೆ/ಇಸ್ಕೂಲ್ಗೆ ಒಗ್ದೋನು ಎಲ್ಲಿ ಕುಂತಿದಾನು?

**ಬರಹ ಕನ್ನಡ :** ಶಾಲೆಗೆ ಹೋಗದವನು ಎಲ್ಲಿ ಕುಳಿತಿದ್ದಾನೆ

೨. **ಮಳವಳ್ಳಿ ಕನ್ನಡ :** ಪ್ಯಾಟ್ಗೋದೋಳು ಇನ್ನೂವೆ ಬಂದೆಯಿಲ್ಲ

**ಬರಹ ಕನ್ನಡ :** ಪೇಟೆಗೆ ಹೋದವಳು ಇನ್ನೂ ಬರಲಿಲ್ಲ

೩. **ಮಳವಳ್ಳಿ ಕನ್ನಡ :** ಆಟಕ್ಕೆ ಒದೋರು ತಿರ್ಗ ಬರ್ವಾಗ ಬೆಳ್ಗಾಯ್ತು

**ಬರಹ ಕನ್ನಡ :** ಆಟಕ್ಕೆ ಹೋದವರು ಹಿಂದಿರುಗಿ ಬರುವಾಗ ಬೆಳಗಾಗಿದೆ

ಮನುಷ್ಯರನ್ನು ಹೊರತುಪಡಿಸಿ ಉಳಿದ ವಿಚಾರಗಳನ್ನು ತಿಳಿಸುವಾಗ ಮಾತ್ರ ಮಳವಳ್ಳಿ ಕನ್ನಡದಲ್ಲಿ **ಇದು** ಮತ್ತು **ಅಲ್ಲೊ** ಎಂಬ ಸರ್ವನಾಮಪದಗಳೇ ಬಳಕೆಯಾಗುತ್ತವೆ. ಆದರೆ ಬರಹ ಕನ್ನಡದಲ್ಲಿ ಇದಕ್ಕೆ **ಉದು** ಮತ್ತು **ಅವು** ಸರ್ವನಾಮಪದಗಳು ಬಳಕೆಯಲ್ಲಿರುವುದನ್ನು ಕಾಣಬಹುದು.

೧. **ಮಳವಳ್ಳಿ ಕನ್ನಡ :** ನೀನು ಬರಿದು ಯಾವಾಗ?

**ಬರಹ ಕನ್ನಡ :** ನೀನು ಬರೆಯುವುದು ಯಾವಾಗ?

೨. **ಮಳವಳ್ಳಿ ಕನ್ನಡ :** ನಮ್ ದನ್ಗಳು ಉಲ್ಲು ತಿನ್ನಲ್ಲೊ

**ಬರಹ ಕನ್ನಡ :** ನಮ್ಮ ಹಸುಗಳು ಹುಲ್ಲು ತಿನ್ನುವುದಿಲ್ಲ

ಮಳವಳ್ಳಿ ಕನ್ನಡದಲ್ಲಿ ಮೇಲಿನ ಉದಾಹರಣೆಗಳಿಗೆ ಹಲವಾರು ಅಪವಾದಗಳೂ ಇವೆ. ಇವುಗಳಲ್ಲಿ ಮುಖ್ಯವಾದುವನ್ನು ಕೆಳಗೆ ಕೊಡಲಾಗಿದೆ.

ಭವಿಷ್ಯತ್ ಕಾಲವನ್ನು ತಿಳಿಸುವ ರೂಪಗಳಲ್ಲಿ **ವ್** ಪ್ರತ್ಯಯದ ಹಿಂದೆ **ಉ**ಕಾರವಿದೆಯಾದರೆ, ಕ್ರಿಯಾಪದಕ್ಕೆ ನೇರವಾಗಿ **ದು** ಪ್ರತ್ಯಯ ಸೇರುತ್ತದೆ.

| **ಮಳವಳ್ಳಿ ಕನ್ನಡ** | **ಬರಹ ಕನ್ನಡ** |
|---|---|
| ಆಡುದು | ಹಾಡುವುದು |
| ಕೊಡುದು | ಕೊಡುವುದು |

| | |
|---|---|
| ಏಳುದು | ಹೇಳುವುದು |
| ಕಟ್ಟುದು | ಕಟ್ಟುವುದು |

ಎಕಾರ ಮತ್ತು ಇಕಾರಗಳಲ್ಲಿ ಕೊನೆಗೊಳ್ಳುವ ಕ್ರಿಯಾಪದಗಳ ಭೂತಕಾಲದ ರೂಪಗಳೊಂದಿಗೆ ದ ಪ್ರತ್ಯಯ ಬರುತ್ತದೆ. ಆದರೆ ಈ ಪ್ರತ್ಯಯ ಸೇರಿದಾಗ ವಿಶೇಷರೂಪದ ಕೊನೆಯ ಅಕಾರ ಇಲ್ಲವಾಗುತ್ತದೆ.

| **ಮಳವಳ್ಳಿ ಕನ್ನಡ** | **ಬರಹ ಕನ್ನಡ** |
|---|---|
| ಬರ್ದ್ದು | ಬರೆದುದು |
| ಎಳ್ದ್ದು | ಎಳೆದುದು |
| ಕುಣ್ದ್ದು | ಕುಣಿದುದು |
| ಮುಗ್ದ್ದು | ಮುಗಿದುದು |

**೪.೮.ವಿಶೇಷಣ ಪದಗಳ ಬಳಕೆ**

ಬರಹ ಕನ್ನಡದ ಹಾಗೆ ಮಳವಳ್ಳಿ ಕನ್ನಡದಲ್ಲೂ ವಿಶೇಷಣ ಪದಗಳು ನಾಮಪದಗಳಿಗಿಂತ ಬೇರಾಗಿರುವ ಒಂದು ಗುಂಪಿನಲ್ಲಿ ಬರುತ್ತವೆ. ಆದರೆ ಅವುಗಳ ಬಳಕೆಯಲ್ಲಿ ಕೆಲವು ವ್ಯತ್ಯಾಸಗಳು ಕಾಣಿಸುತ್ತಿದ್ದು ಅವುಗಳಲ್ಲಿ ಮುಖ್ಯವಾದ ಕೆಲವನ್ನು ಕೆಳಗೆ ಕೊಡಲಾಗಿದೆ.

ನಾಮಪದಗಳೊಂದಿಗೆ ಬರುವ ನಾಮವಿಶೇಷಣ ಪದಗಳನ್ನು, ಕ್ರಿಯಾಪದಗಳೊಂದಿಗೆ ಬರುವ ಕ್ರಿಯಾವಿಶೇಷಣ ಪದಗಳಾಗಿ ಮಾರ್ಪಡಿಸಲು ಬರಹ ಕನ್ನಡದಲ್ಲಿ **ಅಗೆ** ಪ್ರತ್ಯಯವನ್ನು ಸೇರಿಸಲಾಗುತ್ತದೆ. ಮಳವಳ್ಳಿ ಕನ್ನಡದಲ್ಲಿ ಈ ಪ್ರತ್ಯಕ್ಕೆ ಗೆ ರೂಪವನ್ನು ಬಳಸಲಾಗುತ್ತದೆ.

**ಗೆ ಮತ್ತು ಅಗೆ ಪ್ರತ್ಯಯ**

| **ಮಳವಳ್ಳಿ ಕನ್ನಡ** | **ಬರಹ ಕನ್ನಡ** |
|---|---|
| ಬೆಳಿ–ಬೆಳ್ಗೆ | ಬಿಳಿ–ಬೆಳ್ಳಗೆ |
| ಕರಿ–ಕರ್ಗೆ | ಕರಿ–ಕರ‍್ರಗೆ |
| ಬಿಸಿ–ಬೆಚ್ಗೆ | ಬಿಸಿ–ಬೆಚ್ಚಗೆ |
| ಮೆದು–ಮೆತ್ಗೆ | ಮಿದು–ಮೆತ್ತಗೆ |

ವಿಶೇಷಣಪದಗಳನ್ನು ನಾಮಪದಗಳ ಜಾಗದಲ್ಲಿ ಬಳಸುವುದಕ್ಕಾಗಿ ಬರಹ ಕನ್ನಡದಲ್ಲಿ ಅವುಗಳೊಂದಿಗೆ ಅವನು, ಅವಳು, ಅವರು ಮತ್ತು ಅವು ಎಂಬ ಸರ್ವನಾಮಪದಗಳನ್ನು ಬಳಸಲಾಗುತ್ತದೆ.

ಮಳವಳ್ಳಿ ಕನ್ನಡದಲ್ಲಿ ಇದಕ್ಕಾಗಿ **ಅಮ, ಓಳು** ಮತ್ತು **ಅವು** ಎಂಬ ಪ್ರತ್ಯಯಗಳು ಬಳಕೆಯಾಗುತ್ತವೆ. ಆದರೆ **ಅದು** ಮತ್ತು **ಅವು** ಎಂಬ ಪ್ರತ್ಯಯಗಳು ಮಾತ್ರ ಬದಲಾಗದೆ ಹಾಗೆಯೇ ಉಳಿಯುತ್ತವೆ. ಈ ಪ್ರತ್ಯಯಗಳನ್ನು ಕ್ರಿಯಾಪದಗಳ ವಿಶೇಷಣರೂಪಗಳೊಂದಿಗೆ ಬಳಸಲಾಗುತ್ತದೆ.

೧. **ಮಳವಳ್ಳಿ ಕನ್ನಡ :** ದೊಡ್ಡಮ ಎಲ್ಗ್ ವೋದ್ನಾ?
**ಬರಹ ಕನ್ನಡ :** ದೊಡ್ಡವನು ಎಲ್ಲಿಗೆ ಹೋಗಿದ್ದಾನೆ
೨. **ಮಳವಳ್ಳಿ ಕನ್ನಡ :** ಮಜ್ಗ್ ಬಂದೋಳು ಬೆಣ್ಣೆ ಕೇಳ್ದುಲು
**ಬರಹ ಕನ್ನಡ :** ಮಜ್ಜಿಗೆಗೆ ಬಂದವಳು ಬೆಣ್ಣೆ ಕೇಳಿದಳು
೩. **ಮಳವಳ್ಳಿ ಕನ್ನಡ :** ಅವು ದೊಡ್ಡವು
**ಬರಹ ಕನ್ನಡ :** ಅವು ದೊಡ್ಡವು

ಕ್ರಿಯಾಪದಗಳ ಬಳಕೆಯಲ್ಲಿ ಕಾಣುವ ಲಿಂಗ ಮತ್ತು ವಚನ ಸಂಬಂಧಕ್ಕೂ, ವಿಶೇಷಣಪದಗಳ ನಾಮಪದರೂಪಗಳಲ್ಲಿ ಕಾಣಿಸುವ ಈ ಲಿಂಗ ಮತ್ತು ವಚನಗಳ ಸಂಬಂಧಗಳಿಗೂ ವ್ಯತ್ಯಾಸವಿದೆಯೆಂಬುದನ್ನು ಗಮನಿಸಬಹುದು. ವಿಶೇಷಣಪದಗಳಲ್ಲಿ ಬಳಕೆಯಾಗುವ ನಾಮಪದಗಳಲ್ಲಿ ಎರಡು ಬಹುವಚನ ರೂಪಗಳಿವೆ. ಆದರೆ ಕ್ರಿಯಾರೂಪಗಳಲ್ಲಿ ಒಂದು ಬಹುವಚನ ರೂಪವಷ್ಟೆ ಇದೆ.

| | | |
|---|---|---|
| ದೊಡ್ಡೋನು | ದೊಡ್ಡೋರು | ಬಂದ, ಬಂದವು |
| ದೊಡ್ಡೋಳು | ದೊಡ್ಡೋರು | ಬಂದ, ಬಂದವು |
| ದೊಡ್ಡದು | ದೊಡ್ಡವು | ಬಂತು, ಬಂದವು |

ಈ ಒಂದು ಅಧ್ಯಾಯದಲ್ಲಿ ಮಳವಳ್ಳಿ ಕನ್ನಡಕ್ಕೂ, ಬರಹ ಕನ್ನಡಕ್ಕೂ ಇರುವ ವ್ಯತ್ಯಾಸವನ್ನು ವಿವರಿಸಲಾಗಿದೆ.

# ಅಧ್ಯಾಯ ಐದು

## ಮಳವಳ್ಳಿ ಕನ್ನಡ ಮತು ಹಳೆಗನ್ನಡ

ಮಳವಳ್ಳಿ ಕನ್ನಡವು ಹಲವು ವಿಷಯಗಳಲ್ಲಿ ಹಳೆಗನ್ನಡದ ಹಾಗೆಯೇ ಕಾಣಿಸುತ್ತದೆ. ಹೀಗೆ ಕಾಣಿಸುವುದಕ್ಕೆ ಮುಖ್ಯವಾಗಿ ಎರಡು ಕಾರಣಗಳಿವೆ. ಬರಹ ಕನ್ನಡದಲ್ಲಿ ನಡೆದ ಕೆಲವು ಮಾರ್ಪಾಡುಗಳು ಮಳವಳ್ಳಿ ಕನ್ನಡದಲ್ಲಿ ನಡೆದಿಲ್ಲವೆಂಬುವುದು ಒಂದು ಕಾರಣ. ಹಳೆಗನ್ನಡವೆಂಬುದು ಮಳವಳ್ಳಿ ಕನ್ನಡದ ಒಳನುಡಿಯಾಗಿದ್ದಿರಬೇಕೆಂಬುದು ಇನ್ನೊಂದು ಕಾರಣ.

ಆದರೆ ಈ ಎರಡು ಕಾರಣಗಳೂ ಮಳವಳ್ಳಿ ಕನ್ನಡವನ್ನು ಹಳೆಗನ್ನಡದ ಹಾಗೆ ಕಾಣಿಸುವಂತೆ ಮಾಡುತ್ತವೆಯಲ್ಲದೆ ಅದನ್ನು ಹಳೆಗನ್ನಡವನ್ನಾಗಿ ಮಾಡುವುದಿಲ್ಲ. ಕನ್ನಡದ ಬೇರೆ ಇವತ್ತಿನ ಒಳನುಡಿಗಳ ಹಾಗೆ ಮಳವಳ್ಳಿ ಕನ್ನಡವೂ ಹೊಸಗನ್ನಡದ ಒಂದು ಒಳನುಡಿಯೇ. ಬರಹ ಕನ್ನಡದಲ್ಲಿ ನಡೆದ ಮಾರ್ಪಾಡುಗಳು ಒಂದು ಬಗೆಯವಾದರೆ, ಮಳವಳ್ಳಿ ಕನ್ನಡದಲ್ಲಿ ನಡೆದ ಮಾರ್ಪಾಡುಗಳು ಇನ್ನೊಂದು ಬಗೆಯವು ಅಷ್ಟೆ.

ಮಳವಳ್ಳಿ ಕನ್ನಡ ಹಳೆಗನ್ನಡದ ಹಾಗೆ ಯಾಕೆ ಕಾಣಿಸುತ್ತದೆ, ಅವುಗಳ ನಡುವಿರುವ ಹೋಲಿಕೆಯೆಂತಹದು ಮತ್ತು ಈ ಹೋಲಿಕೆಗೆ ಎಂತಹ ವಿವರಣೆಗಳನ್ನು ಕೊಡಲು ಬರುತ್ತದೆ ಎಂಬುದನ್ನು ಮತ್ತು ಅವುಗಳ ನಡುವೆ ಇರುವ ವ್ಯತ್ಯಾಸಗಳೆಂತಹವು ಎಂಬುದನ್ನು ಈ ಅಧ್ಯಯದಲ್ಲಿ ತಿಳಿಸಲಾಗಿದೆ.

### ೫.೧. ಹಳೆಗನ್ನಡದ ವಿಶೇಷ

ಬರಹ ಕನ್ನಡವನ್ನು ಪೂರ್ವದ ಹಳೆಗನ್ನಡ, ಹಳೆಗನ್ನಡ, ನಡುಗನ್ನಡ, ಹೊಸಗನ್ನಡ ಎಂಬುದಾಗಿ ನಾಲ್ಕು ವಿಧಗಳಾಗಿ ವಿಂಗಡಿಸಲಾಗಿದೆ. ಈ ವಿಂಗಡಣೆ ನಮಗೆ ಇದುವರೆಗೆ ದೊರೆತಿರುವ ಕನ್ನಡ ಬರಹಗಳು ಯಾವ ಸಮಯದಲ್ಲಿ ತಯಾರಾದವುಗಳು ಎಂಬುದರ ಮೇಲಷ್ಟೆ ಅಲ್ಲ, ಅವು ಯಾವ ಬಗೆಯವು ಎಂಬುದರ ಮೇಲೂ ಅವಲಂಬಿಸಿದೆ.

ಸುಮಾರು ಆರು ಏಳನೇ ಶತಮಾನದ ಶಾಸನಗಳಲ್ಲಿ ಕಾಣಿಸುವ ಕನ್ನಡದ ಒಳನುಡಿಯನ್ನು ಪೂರ್ವದ ಹಳೆಗನ್ನಡವೆಂದು ಕರೆಯಲಾಗಿದೆ. ಇದೆಲ್ಲದೆ, ತುಂಬಾ ಹಿಂದಿನ

ಕಾವ್ಯಗಳಾದ ವಡ್ಡಾರಾಧನೆಯಂತಹುಗಳಲ್ಲಿ ಕಾಣಿಸುವ ಕನ್ನಡದ ಒಳನುಡಿಯನ್ನೂ ಪೂರ್ವದ ಹಳೆಗನ್ನಡವೆಂದು ತಿಳಿಯಲಾಗಿದೆ.

ಹತ್ತನೇ ಶತಮಾನದಿಂದ ಹನ್ನೆರಡು–ಹದಿಮೂರನೆಯ ಶತಮಾನಗಳ ವರೆಗಿನ ಸಮಯದಲ್ಲಿ ಬರೆದಿರುವ ಕಾವ್ಯಗಳಲ್ಲಿ ಕಾಣಿಸುವ ಕನ್ನಡದ ಒಳನುಡಿಯನ್ನು ಶತಮಾನದ ಬಳಿಕವೂ ಹಲವು ಕಾವ್ಯಗಳನ್ನು ಬರೆಯಲಾಗಿದೆ. ಇತ್ತೀಚೆಗೆ, ಎಂದರೆ ಇಪ್ಪತ್ತನೇ ಶತಮಾನದ ಮೊದಲಲ್ಲೂ ಮುದ್ದಣನ ಅದ್ಭುತ ರಾಮಾಯಣದಂತಹ ಕಾವ್ಯವನ್ನು ಇದೇ ಒಳನುಡಿಯಲ್ಲಿ (ಹಳೆಗನ್ನಡದಲ್ಲಿ) ಬರೆಯಲಾಗಿದೆ.

ಹದಿಮೂರನೆಯ ಶತಮಾನದಿಂದ ಹಿಡಿದು ಸುಮಾರು ಹದಿನಾರು–ಹದಿನೇಳನೆಯ ಶತಮಾನಗಳ ವರಗಿನ ಸಮಯದಲ್ಲಿ ಮುಖ್ಯವಾಗಿ ವೀರಶೈವರು ಕಟ್ಟಿದ ವಚನಗಳಲ್ಲಿ ಕಾಣಿಸುವ ಬರಹದ ಒಳನುಡಿಯನ್ನು ನಡುಗನ್ನಡವೆಂದು ಕರೆಯಲಾಗಿದೆ. ಇದರ ಮುಂದಿನ ಬರಹಗಳಲ್ಲಿ ಕಾಣಿಸಿರುವ ಕನ್ನಡ ಒಳನುಡಿಗೆ ಹೊಸಗನ್ನಡ ಎಂಬ ಹೆಸರಿನಿಂದ ಕರೆಯಲಾಗಿದೆ.

**೫.೨.ಉಚ್ಚಾರಗಳು**

ಹಳೆಗನ್ನಡದಲ್ಲಿ ಬಳಕೆಯಾಗುತ್ತಿದ್ದ ಉಚ್ಚಾರಗಳಲ್ಲಿ ಮುಂದೆ ಹಲವಾರು ಮಾರ್ಪಾಡುಗಳು ನಡೆದಿದ್ದು, ಈ ಮಾರ್ಪಾಡುಗಳನ್ನು ಬರಹ ಕನ್ನಡದಲ್ಲಷ್ಟೇ ಅಲ್ಲದೆ ಮಳವಳ್ಳಿ ಕನ್ನಡದಲ್ಲೂ ಕಾಣಬಹುದು. ಇಂತಹ ಮಾರ್ಪಾಡುಗಳಿಂದಾಗಿ ಬರಹ ಕನ್ನಡದ ಹಾಗೆ ಮಳವಳ್ಳಿ ಕನ್ನಡವೂ ಹಳೆಗನ್ನಡಕ್ಕಿಂತ ಬೇರಾಗಿ ಕಾಣಿಸುತ್ತದೆ.

ಉದಾಹರಣೆಗೆ ಹಳೆಗನ್ನಡದಲ್ಲಿದ್ದ **ಱ**ಕಾರ ಮತ್ತು **ೞ**ಕಾರಗಳು ಇವತ್ತಿನ ಬರಹ ಕನ್ನಡದಲ್ಲಿ ಮತ್ತು ಮಳವಳ್ಳಿ ಕನ್ನಡದಲ್ಲಿ ಹೆಚ್ಚಿನ ಕಡೆಗಳಲ್ಲಿ ರಕಾರ ಮತ್ತು ಳಕಾರಗಳಾಗಿ ಮಾರ್ಪಟ್ಟಿರುವುದನ್ನು ಗುರುತಿಸಲಾಗಿದೆ.

**ಱಕಾರ ರಕಾರವಾಗಿರುವುದು**

| **ಹಳೆಗನ್ನಡ** | **ಬರಹ ಕನ್ನಡ** | **ಮಳವಳ್ಳಿ ಕನ್ನಡ** |
|---|---|---|
| ಊಱು | ಊರು | ಊರು |
| ಊರ್ | ಊರು | ಊರ್ |

| | | |
|---|---|---|
| ಕೆಜ಼್ | ಕೆರೆ | ಕೆರೆ |
| ಕಜ಼್ | ಕರೆ | ಕರಿ |
| ಎಜ಼್ | ಎರೆ | ಯರಿ |

**ಟಕಾರ ಳಕಾರವಾಗಿರುವುದು**

| ಹಳೆಗನ್ನಡ | ಬರಹ ಕನ್ನಡ | ಮಳವಳ್ಳಿ ಕನ್ನಡ |
|---|---|---|
| ಉಟಿ | ಉಳಿ | ಉಳಿ |
| ಉಳಿ | ಉಳಿ | ಉಳಿ |
| ಎಳೆ | ಎಳೆ | ಯಳಿ |

ಬರಹ ಕನ್ನಡದಲ್ಲಿ ಹಳೆಗನ್ನಡದ ಪಕಾರ ಹಕಾರವಾಗಿರುವುದನ್ನು ಕಾಣಬಹುದು. ಆದರೆ ಮಳವಳ್ಳಿ ಕನ್ನಡದಲ್ಲಿ ಪ ಕಾರ ಅ ಕಾರವಾಗಿಯೂ, ಕೆಲವು ಕಡೆ ಯ ಕಾರವಾಗಿಯೂ, ಇನ್ನೂ ಕೆಲವು ಕಡೆ ಪಕಾರ ಪಕಾರವಾಗಿಯೂ ಬಳಕೆಗೊಳ್ಳುವುದನ್ನು ಕಾಣಬಹುದು.

| ಹಳೆಗನ್ನಡ | ಬರಹ ಕನ್ನಡ | ಮಳವಳ್ಳಿ ಕನ್ನಡ |
|---|---|---|
| ಪಾಲ್ | ಹಾಲು | ಪಾಲ್/ಆಲು |
| ಪಣ್ | ಹಣ್ಣು | ಪಣ್/ಅಣ್ಣು |
| ಪರಕೆ | ಹರಕೆ | ಪರ್ಕೆ/ಅರ್ಕೆ |
| ಪೆಂಡತಿ | ಹೆಂಡತಿ | ಯಡ್ತಿ |
| ಪಿಡಿ | ಹಿಡಿ | ಇಡಿ |
| ಪುಡಿ | ಪುಡಿ | ಪುಡಿ |

ವ್ಯಂಜನದೊಂದಿಗೆ ಬರುವ ರ ಕಾರ ಬರಹ ಕನ್ನಡ ಮತ್ತು ಮಳವಳ್ಳಿ ಕನ್ನಡ ಈ ಎರಡು ಒಳನುಡಿಗಳಲ್ಲೂ ಬಿದ್ದುಹೋಗಿದೆ ಮತ್ತು ಅದರೊಂದಿಗಿದ್ದ ವ್ಯಂಜನ ಇಮ್ಮಡಿಯಾಗಿದೆ. ಇದಲ್ಲದೆ ಅದರೊಂದಿಗಿದ್ದ ವಕಾರ ಬಕಾರವಾಗಿದೆ.

| ಹಳೆಗನ್ನಡ | ಬರಹ ಕನ್ನಡ | ಮಳವಳ್ಳಿ ಕನ್ನಡ |
|---|---|---|
| ಬಾರ್ಚು | ಬಾಚು | ಬಾಚು |
| ಬಿರ್ಚು | ಬಿಚ್ಚು | ಬಿಚ್ಚು |
| ನುರ್ಗು | ನುಗ್ಗು | ನುಗ್ಗು |
| ಪರ್ಬು | ಹಬ್ಬು | ಅಬ್ಬು |
| ಒರ್ವನ್ | ಒಬ್ಬ | ವಬ್ಬ |
| ಕೊರ್ವು | ಕೊಬ್ಬು | ಕೊಬ್ಬು |

ಎರಡು ಉಚ್ಚಾರಗಳಿರುವ ಪದಗಳ ಕೊನೆಯ ಅನುನಾಸಿಕದ ಮುಂದೆ ಎರಡು ಒಳನುಡಿಗಳಲ್ಲೂ ಒಂದು ಸ್ವರ ಸೇರಿದೆ ಮತ್ತು ಮೊದಲನೆಯ ಉಚ್ಚಾರದಲ್ಲಿ ಹ್ರಸ್ವಸ್ವರ ಇದೆಯಾದರೆ ಆ ಅನುನಾಸಿಕ ಹೆಚ್ಚಾಗಿದೆ. ಇದಲ್ಲದೆ ಎರಡರಲ್ಲೂ ಪದಗಳ ಕೊನೆಯ ಬೇರೆ ಕೆಲವು ವ್ಯಂಜನಗಳ ಬಳಿಕ ಹ್ರಸ್ವಸ್ವರ ಸೇರಿಕೊಂಡಿದೆ.

| ಹಳೆಗನ್ನಡ | ಬರಹ ಕನ್ನಡ | ಮಳವಳ್ಳಿ ಕನ್ನಡ |
|---|---|---|
| ಮೀನ್ | ಮೀನು | ಮೀನ್ |
| ಬೀಳ್ | ಬೀಳು | ಬೀಳ್ |
| ಕಣ್ | ಕಣ್ಣು | ಕಣ್ |
| ಬೆಮರ್ | ಬೆವರು | ಬೆಗ್ರು/ಬೆವ್ರು/ಬೆವರ್ |

ಇಂತಹ ಬೇರೆಯೂ ಹಲವು ಮಾರ್ಪಾಡುಗಳು ಬರಹ ಕನ್ನಡ ಮತ್ತು ಮಳವಳ್ಳಿ ಕನ್ನಡಗಳಿಗೆ ಸಮಾನವಾಗಿದ್ದು ಇವುಗಳಿಂದಾಗಿ ಬರಹ ಕನ್ನಡದ ಹಾಗೆ ಮಳವಳ್ಳಿ ಕನ್ನಡವೂ ಹಳೆಗನ್ನಡಕ್ಕಿಂತ ಬೇರಾಗಿ ಕಾಣಿಸುತ್ತದೆ.

ಇನ್ನೂ ಬೇರೆ ಕೆಲವು ಮಾರ್ಪಾಡುಗಳು ಮಳವಳ್ಳಿ ಕನ್ನಡದಲ್ಲಿ ನಡೆದಿದ್ದು ಬರಹ ಕನ್ನಡದಲ್ಲಿ ನಡೆದಿಲ್ಲ. ಉದಾಹರಣೆಗೆ ಮೂರು ಕಡಿಮೆ ಉಚ್ಚಾರಗಳಿರುವ ಪದಗಳಲ್ಲಿ

ಮೂರನೆಯದರ ಸ್ಪರ್ಷ ಉಚ್ಚಾರ ಮಳವಳ್ಳಿ ಕನ್ನಡದಲ್ಲಿ ಹೆಚ್ಚಾಗಿದೆ. ಆದರೆ ಬರಹ ಕನ್ನಡದಲ್ಲಿ ಹಾಗಯೇ ಉಳಿದಿದೆ.

| **ಹಳೆಗನ್ನಡ** | **ಬರಹ ಕನ್ನಡ** | **ಮಳವಳ್ಳಿ ಕನ್ನಡ** |
|---|---|---|
| ಕೊರತೆ | ಕೊರತೆ | ಕೊರ್ತೆ |
| ಪೊಸತು | ಹೊಸತು | ವಸ್‌ತು |
| ಪೊಳೆಪು | ಹೊಳಪು | ವಳ್‌ಪು |
| ಪರಕೆ | ಹರಕೆ | ಪರಕೆ/ಅರ್ಕೆ |

**೫.೩.ಕ್ರಿಯಾ ರೂಪಗಳು**

ಕ್ರಿಯಾರೂಪಗಳ ಮಟ್ಟಿಗೆ ಮಳವಳ್ಳಿ ಕನ್ನಡ ಹಲವು ವಿಷಯಗಳಲ್ಲಿ ಹಳೆಗನ್ನಡವನ್ನು ಹೋಲುತ್ತಿದ್ದು ಬರಹ ಕನ್ನಡಕ್ಕಿಂತ ಬೇರಾಗಿದೆ. ಈ ರೂಪಗಳಲ್ಲಿ ಕಾಣಿಸುವ ನಿಷೇಧಾರ್ಥಕ ಬಗೆ, ವಿಶೇಷಣ ರೂಪಗಳು, ಸಮಾಸ ರೂಪಗಳಲ್ಲಿ, ಷರತ್ತುಗಳನ್ನು ವಿಧಿಸುವ ರೂಪಗಳಲ್ಲಿ, ಮೊದಲಾದವುಗಳಲ್ಲೆಲ್ಲ ಇಂತಹ ಹೋಲಿಕೆಗಳನ್ನು ಕಾಣಬಹುದು.

ಆದರೆ ಬೇರೆ ಕೆಲವು ವಿಷಯಗಳಲ್ಲಿ ಮಳವಳ್ಳಿ ಕನ್ನಡ ಹಳೆಗನ್ನಡಕ್ಕಿಂತ ಬೇರಾಗಿದ್ದು, ಬರಹ ಕನ್ನಡ ಹಳೆಗನ್ನಡವನ್ನು ಹೋಲುತ್ತದೆ. ಉದಾಹರಣೆಗೆ ಹಳೆಗನ್ನಡದಲ್ಲಿ **ಅಲ್** ಪ್ರತ್ಯಯವನ್ನು ಕ್ರಿಯಾಪದಗಳಿಗೆ ನೇರವಾಗಿ ಸೇರಿಸಲಾಗುತ್ತದೆಯಾದರೆ, ಮಳವಳ್ಳಿ ಕನ್ನಡದಲ್ಲಿ **ಇಮೆ** ರೂಪವನ್ನು ಕಾಣಬುಹುದು.

| **ಹಳೆಗನ್ನಡ** | **ಬರಹ ಕನ್ನಡ** | **ಮಳವಳ್ಳಿ ಕನ್ನಡ** |
|---|---|---|
| ಬರೆಯಲ್ | ಬರೆಯಲು | ಬರಿಮೆ |
| ಬರಲ್ | ಬರಲು | ಬರ್ಮೆ |
| ತಿನಲ್ | ತಿನ್ನಲ್ಲು | ತಿನ್ಮೆ |
| ಒಪ್ಪಲ್ | ಒಪ್ಪಲು | ಒಪ್ಮೆ |

ಮಳವಳ್ಳಿ ಕನ್ನಡಕ್ಕೂ ಹಳೆಗನ್ನಡಕ್ಕೂ ನಡುವೆ ಇರುವ ಕ್ರಿಯಾರೂಪಗಳಲ್ಲಿರುವ ಇಂತಹ ಕೆಲವು ಹೋಲಿಕೆ ಮತ್ತು ವ್ಯತ್ಯಾಸಗಳನ್ನು ಕೆಳಗೆ ತಿಳಿಸಲಾಗಿದೆ.

### ೫.೩.೧.ನಿಷೇಧಾರ್ಥಕ ಕ್ರಿಯಾರೂಪಗಳು

ಒಂದು ಕ್ರಿಯೆಯನ್ನು ನಿಷೇಧಿಸುವುದಕ್ಕಾಗಿ ಮಳವಳ್ಳಿ ಕನ್ನಡದಲ್ಲಿ ಕ್ರಿಯಾಪದಕ್ಕೆ ನಾಮಪ್ರತ್ಯಯವನ್ನು ನೇರವಾಗಿ ಸೇರಿಸುವುದು ಮತ್ತು ಕ್ರಿಯೆಯನ್ನು ತಿಳಿಸುವ ಕ್ರಿಯಾರೂಪದ ನಂತರ ಇಲ್ಲ ಎಂಬ ಪದವು ಬಳಕೆಯಲ್ಲಿದೆ.

ನಾಮಪ್ರತ್ಯಯವನ್ನು ಕ್ರಿಯಾಪದಕ್ಕೆ ನೇರವಾಗಿ ಸೇರಿಸುವ ಮೂಲಕ ಮಳವಳ್ಳಿ ಕನ್ನಡದಲ್ಲಿ ಭವಿಷ್ಯತ್ಕಾಲದ ಕ್ರಿಯೆಯನ್ನು ನಿಷೇಧಿಸಲಾಗುತ್ತದೆ. ಹಳೆಗನ್ನಡದಲ್ಲೂ ಇಂತಹ ಕ್ರಿಯಾರೂಪಗಳು ಬಳಕೆಯಲ್ಲಿದ್ದುವು.

ಆದರೆ ಪ್ರಸ್ತುತ ಬರಹ ಕನ್ನಡದಲ್ಲಿ ಇಂತಹ ಕ್ರಿಯಾರೂಪಗಳು ಬಳಕೆಯಿಂದ ಇಲ್ಲವಾಗಿರುವುದನ್ನು ಕಾಣಬಹುದು. ಇದಕ್ಕೆ ಅಪವಾದವಾಗಿ **ಆಗದು, ಆರೆ** ಎಂಬಂತಹ ಕೆಲವು ಕ್ರಿಯಾರೂಪಗಳಷ್ಟೆ ಉಳಿದುಕೊಂಡಿವೆ.

ಇಂತಹ ನಿಷೇಧಾರ್ಥಕ ಕ್ರಿಯಾರೂಪಗಳು ಮಳವಳ್ಳಿ ಕನ್ನಡದಲ್ಲಿ ಇವತ್ತಿಗೂ ಬಳಕೆಯಲ್ಲಿದ್ದು ಅವನ್ನು ಎಲ್ಲಾ ಬಗೆಯ ಕ್ರಿಯಾಪದಗಳಿಂದಲೂ ಪಡೆಯಲು ಬರುತ್ತದೆ. ಆದರೆ ಅವಕ್ಕೆ ಭವಿಷ್ಯತ್ಕಾಲದ ಕ್ರಿಯೆಗಳನ್ನು ನಿಷೇಧಿಸುವುದಷ್ಟೆ ಅವುಗಳ ಮಹತ್ವ.

೧. **ಮಳವಳ್ಳಿ ಕನ್ನಡ :** ಅಮ ಈ ಪುಸ್ತಕವ ಓದಲ್ನ

**ಬರಹ ಕನ್ನಡ :** ಅವನು ಈ ಪುಸ್ತಕವನ್ನು ಓದುವುದಿಲ್ಲ.

೨. **ಮಳವಳ್ಳಿ ಕನ್ನಡ :** ನಾಮು ಮದ್ವೆಗೆ ಓಗುದಿಲ್ಲ

**ಬರಹ ಕನ್ನಡ :** ನಾವು ಮದುವೆಗೆ ಹೋಗುವುದಿಲ್ಲ

ಮಳವಳ್ಳಿ ಕನ್ನಡದಲ್ಲಿ ಈ ಕ್ರಿಯಾರೂಪಗಳು ಒಂದು ಕ್ರಿಯೆಯ ಭವಿಷ್ಯತ್ಕಾಲದಲ್ಲಿ ನಡೆಯುವುದಿಲ್ಲ ಎಂಬುವುದನ್ನು ತಿಳಿಸುತ್ತವೆಯಲ್ಲದೆ, ವರ್ತಮಾನದಲ್ಲಿ ನಡೆಯುವುದಿಲ್ಲ ಎಂಬುವುದನ್ನು ತಿಳಿಸುವುದಿಲ್ಲ. ಹಳೆಗನ್ನಡದಲ್ಲೂ ಇವಕ್ಕೆ ಇಂತಹದೇ ಅರ್ಥವಿತ್ತು ಎಂಬುವುದನ್ನು ಕೆಳಗೆ ಕೊಟ್ಟಿರುವ ಪಂಪಭಾರತದ ವಾಕ್ಯಗಳಲ್ಲಿ ಕಾಣಬಹುದು.

೧. ನರನೆಡೆಗೊಂಡೊಡಂ ಪುರಿಗಣೆಯಂ ಪಿಡಿಯೆಂ

ಅರ್ಜುನ ಎದುರಾಡಿದರೂ ದಿವ್ಯಾಸ್ತ್ರವನ್ನು ಹಿಡಿಯಲಿಕ್ಕಿಲ್ಲ.

೨. ಇಲ್ಲಿ ಪುಟ್ಟಿ ಪೋಗದು ಪೊಸ ಸುಗ್ಗಿ

ಹೊಸ ಸುಗ್ಗಿ ಇಲ್ಲಿ ಹುಟ್ಟಿ ಹೋಗಲಿಕ್ಕಿಲ್ಲ

ಹಳೆಗನ್ನಡದಲ್ಲಿ ಬಳಕೆಯಲ್ಲಿದ್ದ ನಿಷೇಧಾರ್ಥ ಕ್ರಿಯಾರೂಪಗಳಿಗೂ ಮಳವಳ್ಳಿ ಕನ್ನಡದಲ್ಲಿ ಬಳಕೆಯಲ್ಲಿರುವ ನಿಷೇಧಾರ್ಥ ಕ್ರಿಯಾರೂಪಗಳಿಗೂ ನಡುವೆ ಅವುಗಳ ರಚನೆಯಲ್ಲಿರುವ ಹೋಲಿಕೆಯನ್ನು ಕೆಳಗೆ ಕೊಟ್ಟಿರುವ ಪಟ್ಟಿಯಲ್ಲಿ ಕಾಣಬಹುದು.

| **ಹಳೆಗನ್ನಡ** | **ಬರಹ ಕನ್ನಡ** | **ಮಳವಳ್ಳಿ ಕನ್ನಡ** |
|---|---|---|
| ಪಿಡಿಯೆನ್ | ಹಿಡಿಯುವುದಿಲ್ಲ | ಇಡಿಯಲಿ |
| ಕೇಳರ್ | ಕೇಳುವುದಿಲ್ಲ | ಕೇಳಲಿ |
| ಮಾಡನ್ | ಮಾಡುವುದಿಲ್ಲ | ಮಾಡಲಿ |
| ಬಿಡಳ್ | ಬಿಡುವುದಿಲ್ಲ | ಬಿಡಲಿ |
| ಬಾರೆಮ್ | ಬರುವುದಿಲ್ಲ | ಬರಲಿ |

ಹಳೆಗನ್ನಡದಲ್ಲಿ ಈ ಕ್ರಿಯಾರೂಪಗಳನ್ನು ಬಳಸಿ ಭವಿಷ್ಯತ್ತಿನ, ವರ್ತಮಾನದ ಮತ್ತು ಭೂತಕಾಲದ ಕ್ರಿಯೆಗಳನ್ನು ನಿಷೇಧಿಸಲು ಬರುತ್ತದೆಯೆಂದು ಕೇಶಿರಾಜ ಮೊದಲಾದ ವ್ಯಾಕರಣಕಾರರು ಹೇಳುತ್ತಾರೆ.

ಆದರೆ ಕಾವ್ಯಗಳಲ್ಲಿ ಇವುಗಳ ಬಳಕೆಯನ್ನು ಪರಿಶೀಲಿಸಿದಾಗ ಹೆಚ್ಚಿನಕಡೆಗಳಲ್ಲೂ ಇವಕ್ಕೆ ಭವಿಷ್ಯತ್ಕಾಲದ ಕ್ರಿಯೆಗಳು ನಿಷೇಧಾರ್ಥವಾಗಿ ಕಾಣಿಸುತ್ತದೆ.

ಇದಲ್ಲದೆ ಭೂತಕಾಲದ ಕ್ರಿಯೆಗಳನ್ನು ನಿಷೇಧಿಸಬೇಕಾದಾಗ ಸಾಮಾನ್ಯವಾಗಿ ಹಳೆಗನ್ನಡದಲ್ಲಿ ಅಂತಹ ಕ್ರಿಯೆಗಳನ್ನು ತಿಳಿಸುವ ಕ್ರಿಯಾರೂಪಗಳೊಂದಿಗೆ ಇಲ್ಲ ಪದದ ಬಳಕೆಯಾಗುತ್ತದೆ.

೧. ಈ ಕನ್ನೆಯನ್ ಪದ್ಮಜನ್ ಪಡೆದನ್

ಈ ಕನ್ಯೆಯನ್ನು ಬ್ರಹ್ಮನು ಉಂಟುಮಾಡಿದನು.

೨. ಈ ಕನ್ನೆಯನ್ ಪದ್ಮಜನ್ ಪಡೆದನ್ ಇಲ್ಲ

ಈ ಕನ್ಯೆಯನ್ನು ಬ್ರಹ್ಮನು ಉಂಟುಮಾಡಲಿಲ್ಲ.

ಮಳವಳ್ಳಿ ಕನ್ನಡದಲ್ಲಿ ಭೂತಕಾಲದ ಕ್ರಿಯಾಪದಗಳನ್ನಷ್ಟೆ ಅಲ್ಲದೆ ವರ್ತಮಾನಕಾಲದ ಕ್ರಿಯೆಗಳನ್ನು ನಿಷೇಧಾರ್ಥಕವಾಗಿಯೂ ಅಂತಹ ಕ್ರಿಯೆಗಳನ್ನು ತಿಳಿಸುವ ಕ್ರಿಯಾರೂಪಗಳ ಮುಂದೆ ಇಲ್ಲ ಪದವನ್ನು ಬಳಸಲಾಗುತ್ತದೆ.

೧. ಅಮ ಪುಸ್ತ್ಕ ಓದ್ತನೆ

ಅವನು ಪುಸ್ತಕ ಓದುತ್ತಾನೆ

೨. ಅಮ ಪುಸ್ತ್ಕ ಓದುದ್ಲ

ಅವನು ಪುಸ್ತಕ ಓದುವುದಿಲ್ಲ

ಇದಲ್ಲದೆ ಭೂತಕಾಲದ ಕ್ರಿಯೆಗಳನ್ನು ನಿಷೇಧಾರ್ಥಕವನ್ನಾಗಿ ಇಲ್ಲ ಪದವನ್ನು ನೇರವಾಗಿ ಭೂತಕಾಲದ ಕ್ರಿಯಾರೂಪಗಳೊಂದಿಗೆ ಬಳಸುವ ಬದಲು ಇರು ಕ್ರಿಯಾಪದವನ್ನು ಬಳಸಿ ಪಡೆದ ಭೂತಕಾಲದ ಸಂಯುಕ್ತ ಕ್ರಿಯಾಪದದೊಂದಿಗೆ ಬಳಸಲಾಗುತ್ತದೆ.

೧. ಅಮ ಈ ಪುಸ್ತ್ಕ ಓದಿದ

ಅವನು ಈ ಪುಸ್ತಕ ಓದಿದ

೨. ಅಮ ಈ ಪುಸ್ತ್ಕ ಓದಿದ್ದ

ಅವನು ಈ ಪುಸ್ತಕ ಓದಿದ್ದಾನೆ

೩. ಅಮ ಈ ಪುಸ್ತ್ಕ ಓದಿಲ್ಲ

ಅವನು ಈ ಪುಸ್ತಕವನ್ನು ಓದಲಿಲ್ಲ

ಆದರೆ ಬರಹ ಕನ್ನಡದಲ್ಲಿ ಈ ರೀತಿ ಇಲ್ಲ ಪದವನ್ನು ನೇರವಾಗಿ ಕ್ರಿಯಾರೂಪಗಳೊಂದಿಗೆ ಸೇರಿಸಿ ಹೇಳಲು ಬರುವುದಿಲ್ಲ. ಓದುವುದು, ಹೋಗುವುದು ಎಂಬಂತಹ ಕ್ರಿಯಾಪದಗಳ ನಾಮರೂಪದೊಂದಿಗೆ, ಇಲ್ಲವೇ ಕ್ರಿಯಾಪದಗಳಿಗೆ **ಅಲು** ಪ್ರತ್ಯಯವನ್ನು ಸೇರಿಸಿ ಪಡೆದ ಓದಲು, ಹೋಗಲು ಎಂಬಂತಹ ಪದದೊಂದಿಗೆ ಇಲ್ಲ ಎಂಬ ಪದವನ್ನು ಬಳಸುವುದರ ಮೂಲಕ ಅದರಲ್ಲಿ ಭವಿಷ್ಯತ್ಕಾಲ ಮತ್ತು ಭೂತಕಾಲಗಳ ಕ್ರಿಯೆಗಳನ್ನು ನಿಷೇಧಿಸಬೇಕಾಗುತ್ತದೆ.

### ೫.೩.೨. ಕ್ರಿಯಾಪದಗಳ ವಿಶೇಷಣರೂಪಗಳು

ಕನ್ನಡದಲ್ಲಿ ಕ್ರಿಯಾಪದಗಳಿಗೆ **ಅ** ಪ್ರತ್ಯಯವನ್ನು ಸೇರಿಸಿ ಅವುಗಳ ವಿಶೇಷಣರೂಪವನ್ನು ಪಡೆಯಲಾಗುತ್ತದೆ. ಇಂತಹ ವಿಶೇಷಣರೂಪಗಳನ್ನು ನಾಮಪದಗಳ ವಿಶೇಷಣರೂಪಗಳನ್ನಾಗಿ ಬಳಸಲು ಬರುತ್ತದೆ. ಉದಾಹರಣೆಗೆ ಹಾಡಿದ ಹುಡುಗ ಎಂಬ ಪದದಲ್ಲಿ ಹಾಡು ಎಂಬ

ಕ್ರಿಯಾಪದದ ವಿಶೇಷಣರೂಪವನ್ನು ಹುಡುಗ ಎಂಬ ಸರ್ವನಾಮದೊಂದಿಗೆ ಅದರ ವಿಶೇಷಣಪದವಾಗಿ ಬಳಸಲಾಗಿದೆ.

ಈ ವಿಶೇಷಣರೂಪಗಳಲ್ಲಿ ಭೂತಕಾಲ ಮತ್ತು ಭವಿಷ್ಯತ್ಕಾಲದ ಪ್ರತ್ಯಯಗಳು (ಹಾಡಿದ ಹುಡುಗ, ಹಾಡುವ ಹುಡುಗ) ಮತ್ತು ನಿಷೇಧಾರ್ಥಕ ಪ್ರತ್ಯಯ (ಹಾಡದ ಹುಡುಗ) ಬರಬಲ್ಲವು. ಆದರೆ ಇವುಗಳಲ್ಲಿ ಭವಿಷ್ಯತ್ಕಾಲದ ಪ್ರತ್ಯಯಕ್ಕೆ ಬರಹ ಕನ್ನಡದಲ್ಲಿ **ಉತ್** ರೂಪದ ಬದಲು **ವ್** ರೂಪವಿರುವುದನ್ನು ಕಾಣಬಹುದು.

೧. ಆ ಹುಡುಗ ಹಾಡುತ್ತಾನೆ–ಹಾಡುವ ಹುಡುಗ

೨. ಈ ಹುಡುಗ ನಾಳೆ ಹೋಗುತ್ತಾನೆ–ನಾಳೆ ಹೋಗುವ ಹುಡುಗ

ಹಳೆಗನ್ನಡದಲ್ಲಿ ಭವಿಷ್ಯತ್ಕಾಲವನ್ನು ತಿಳಿಸುವ ಪ್ರತ್ಯಯಕ್ಕೆ ಇಂತಹ ವಿಶೇಷಣರೂಪಗಳಲ್ಲಿ **ವ್, ಪ್** ಮತ್ತು **ಬ್** ಎಂಬ ಮೂರು ರೂಪಗಳಿವೆ. ಆದರೆ ಬರಹ ಕನ್ನಡದಲ್ಲಿ ಅದಕ್ಕೆ ಹೆಚ್ಚಿನ ಕಡೆಗಳಲ್ಲಿ **ವ್** ಎಂಬ ಒಂದೇ ರೂಪವಿರುವುದನ್ನು ಕಾಣಬಹುದು.

ಮಳವಳ್ಳಿ ಕನ್ನಡ ಈ ವಿಷಯದಲ್ಲಿ ಹಳೆಗನ್ನಡವನ್ನು ಹೋಲುತ್ತದೆ. ಯಾಕೆಂದರೆ ಅದರಲ್ಲೂ ಈ ಪ್ರತ್ಯಯಕ್ಕೆ **ವ್, ಪ್** ಮತ್ತು **ಬ್** ಎಂಬ ಮೂರು ರೂಪಗಳಿವೆ.

| **ಹಳೆಗನ್ನಡ** | **ಬರಹ ಕನ್ನಡ** | **ಮಳವಳ್ಳಿ ಕನ್ನಡ** |
|---|---|---|
| ಪಾಡುವ | ಹಾಡುವ | ಆಡುವ |
| ಒಪ್ಪುವ | ಒಪ್ಪುವ | ಒಪ್ಪುವ |
| ಪೋಪ | ಹೋಗುವ | ಒಮ |
| ಬರ್ಪ | ಬರುವ | ಬರ್ಮ |
| ಕಾಣ್ಬ | ಕಾಣುವ | ಕಾಣ್ಮ |
| ಉಣ್ಬ | ಉಣ್ಣುವ | ಉಣ್ಮ |

ಬರಹ ಕನ್ನಡದಲ್ಲೂ ಎನ್ನು ಕ್ರಿಯಾಪದದ ವಿಶೇಷಣರೂಪವಾದ **ಎಂಬ** ಎಂಬುದರಲ್ಲಿ ಈ ಪ್ರತ್ಯಯಕ್ಕೆ **ಬ್** ರೂಪವಿರುವುದನ್ನು ಕಾಣಬಹುದು.

### ೫.೩.೩.ಸಮಾಸ ಕ್ರಿಯಾರೂಪಗಳು

ಎರಡು ವಾಕ್ಯಗಳನ್ನು ಸೇರಿಸಿ ಹೇಳುವುದಕ್ಕೆ ಕನ್ನಡದಲ್ಲಿ ಸಮಾಸ ಕ್ರಿಯಾರೂಪಗಳನ್ನು ಬಳಸಲಾಗುತ್ತದೆ. ಇದಕ್ಕಾಗಿ ಭೂತಕಾಲ (ಮಾಡಿ, ಕೊಟ್ಟು, ತಿಂದು), ಭವಿಷ್ಯತ್ಕಾಲ (ಮಾಡಲು, ಕೊಡಲು, ತಿನ್ನಲು), ವರ್ತಮಾನಕಾಲ (ಮಾಡತ್ತಾ, ಕೊಡುತ್ತಾ, ತಿನ್ನುತ್ತಾ) ಮತ್ತು ನಿಷೇಧಾರ್ಥಕ ಕ್ರಿಯಾರೂಪ (ಮಾಡದೆ, ಕೊಡದೆ, ತಿನ್ನದೆ) ಎಂಬುದಾಗಿ ನಾಲ್ಕು ಬಗೆಯ ಕ್ರಿಯಾರೂಪಗಳನ್ನು ತಿಳಿಸುವ ಸಮಾಸ ಕ್ರಿಯಾರೂಪಗಳನ್ನು ಬಳಸಲಾಗುತ್ತದೆ.

ಉದಾಹರಣೆಗೆ ಕೆಳಗೆ ಕೊಟ್ಟಿರುವ ಬರಹ ಕನ್ನಡದ ವಾಕ್ಯಗಳನ್ನು ಗಮನಿಸಬಹುದು.

೧. ತಿಂಡಿ ತಿಂದು ಹೋದ–ಭೂತಕಾಲ ಕ್ರಿಯಾರೂಪ

೨. ತಿಂಡಿ ತಿನ್ನಲು ಹೋದ–ಭವಿಷ್ಯತ್ಕಾಲ ಕ್ರಿಯಾರೂಪ

೩. ತಿಂಡಿ ತಿನ್ನುತ್ತಾ ಹೋದ–ವರ್ತಮಾನಕಾಲ ಕ್ರಿಯಾರೂಪ

೪. ತಿಂಡಿ ತಿನ್ನದೆ ಹೋದ–ನಿಷೇಧಾರ್ಥಕ ಕ್ರಿಯಾರೂಪ

ಈ ರೀತಿಯ ಸಮಾಸ ಕ್ರಿಯಾರೂಪಗಳನ್ನು ಪಡೆಯುವಲ್ಲಿ ಹಳೆಗನ್ನಡ, ಬರಹ ಕನ್ನಡ, ಮಳವಳ್ಳಿ ಕನ್ನಡಗಳ ನಡುವೆ ಕೆಳಗೆ ತಿಳಿಸಿರುವ ಹಾಗೆ ಕೆಲವು ವ್ಯತ್ಯಾಸಗಳಿರುವುದನ್ನು ಗಮನಿಸಬಹುದು.

ಭವಿಷ್ಯತ್ಕಾಲವನ್ನು ತಿಳಿಸುವ ಸಮಾಸಕ್ರಿಯಾರೂಪವನ್ನು ಪಡೆಯಲು ಬರಹ ಕನ್ನಡದಲ್ಲಿ **ಅಲು** ಪ್ರತ್ಯಯವನ್ನು ನೇರವಾಗಿ ಸೇರಿಸಲಾಗುತ್ತದೆ (ಬರಲು, ತಿನ್ನಲು, ಹೋಗಲು) ಹಳೆಗನ್ನಡದಲ್ಲೂ ಇದೇ ಬಗೆಯಲ್ಲಿ **ಅಲ್** ಪ್ರತ್ಯಯವನ್ನು ಕ್ರಿಯಾಪದಕ್ಕೆ ನೇರವಾಗಿ ಸೇರಿಸಲಾಗುತ್ತದೆ. ( ಬರಲ್, ತಿನಲ್, ಹೋಗಲ್)

೧. ಕೀಚಕಂ ತಮ್ಮಕ್ಕನಂ ಕಾಣಲ್ ಪೋದನ್

ಕೀಚಕನು ತನ್ನ ಅಕ್ಕನನ್ನು ಕಾಣಲು ಹೋದನು.

೨. ಉಟಿದುದಂ ಮಾಣಿಸಲ್ ನೀನೆ ಸಾಲ್ವೆ

ಉಳಿದುದನ್ನು ತಪ್ಪಿಸಲು ನೀನು ಶಕ್ತನಾಗಿರುವೆ.

ಮಳವಳ್ಳಿ ಕನ್ನಡದಲ್ಲಿ ಹಳೆಗನ್ನಡ ರೀತಿಯಲ್ಲಿ ಬಳಕೆಯಾಗುವುದನ್ನು ಕಾಣಬಹುದು. ಭವಿಷ್ಯತ್ಕಾಲವನ್ನು ತಿಳಿಸುವ ಸಮಾಸಕ್ರಿಯಾರೂಪವನ್ನು ಪಡೆಯಲು ಮಳವಳ್ಳಿ ಕನ್ನಡದಲ್ಲಿ **'ಅಲ್'** ಎಂಬ ಪ್ರತ್ಯಯವನ್ನು ನೇರವಾಗಿ ಸೇರಿಸಲಾಗುತ್ತದೆ. **ಅಲ್** ಎಂಬ ಪ್ರತ್ಯಯವು

ಮಳವಳ್ಳಿ ಕನ್ನಡದಲ್ಲಿ ಹೇಗೆ ಬಳಕೆಯಾಗುತ್ತದೆ ಎಂಬುವುದನ್ನು ಕಾಣಬಹುದು ( ಕಾಣಕೆ, ಬರಕೆ, ತಿನಕೆ).

೧. ಅಮ ಅವ್ರಕ್ನ ಕಾಣಲ್ ಹೋದ

ಅವನು ತನ್ನ ಅಕ್ಕನನ್ನು ಕಾಣಲು ಹೋದ.

೨. ನಂಗೆ ನೆನ್ನೆ ಬರಲ್ ಆಗ್ಲಿಲ್ಲ

ನನಗೆ ನಿನ್ನೆ ಬರಲು ಸಾಧ್ಯವಾಗಲಿಲ್ಲ

ಈ ರೀತಿಯ ವ್ಯತ್ಯಾಸಗಳನ್ನು ಕೆಳಗಿನ ಉದಾಹರಣೆಗಳಲ್ಲೂ ಕಾಣಬಹುದು.

| **ಹಳೆಗನ್ನಡ** | **ಬರಹ ಕನ್ನಡ** | **ಮಳವಳ್ಳಿ ಕನ್ನಡ** |
|---|---|---|
| ನಡೆಯಲ್ | ನಡೆಯಲು | ನಡೆಯಲ್ |
| ಕುಣಿಯಲ್ | ಕಣಿಯಲು | ಕುಣಿಯಲ್ |
| ಪೋಗಲ್ | ಹೋಗಲು | ಓಗಲ್ |
| ನಿಲಲ್ | ನಿಲ್ಲಲು | ನಿಲ್ಲಲ್ |
| ಕಾಣಲ್ | ಕಾಣಲು | ಕಾಣಲ್ |

ಇದಕ್ಕೆ ಅಪವಾದವಾಗಿ ಕೆಲವು ಸಮಾಸಕ್ರಿಯಾರೂಪಗಳಲ್ಲಿ ಅಂದರೆ ಭವಿಷ್ಯತ್ಕಾಲದ ವಿಶೇಷರೂಪಗಳಲ್ಲಿ **ವ್** ಪ್ರತ್ಯಯದ ಮೊದಲು **ಉ** ಕಾರ ಬಂದಿರುವಂತಹ **ಮಾಡುವ, ಹೆದರುವ, ಓದುವ, ಬರೆಯುವ, ನಡೆಯುವ** ಮೊದಲಾದವುಗಳಿಗೆ ಸಮನಾದ ಸಮಾಸಕ್ರಿಯಾರೂಪಗಳಲ್ಲಿ ಈ **ವ್** ಪ್ರತ್ಯಯ ಕಾಣಿಸುವುದಿಲ್ಲ. (ಮಾಡ್ಲೆ, ಓದ್ಲೆ, ಬರಿಲೆ)

ಎರಡು ಕ್ರಿಯಾರೂಪಗಳು ಒಂದೇ ಸಮಯದಲ್ಲಿ ನಡೆಯುತ್ತಿವೆಯಾದರೆ ಅವುಗಳಲ್ಲಿ ಒಂದನ್ನು ಇನ್ನೊಂದರೊಂದಿಗೆ ಜೋಡಿಸಿ ಹೇಳಲು ಹಳೆಗನ್ನಡದಲ್ಲಿ **ಉತ್ತೆ** ಪ್ರತ್ಯಯವನ್ನು ಬಳಸಲಾಗುತ್ತದೆ. ಬರಹಕನ್ನಡದಲ್ಲೂ ಈ ರೀತಿಯಾದ **ಉತ್ತಾ** ಪ್ರತ್ಯಯ ಬಳಕೆಯಾಗುತ್ತದೆ.

೧. ಓಗರವೂಗಳ ಬಂಡನೆಯ್ದೆ ಪೀರುತ್ತೆ ಮಱಿದುಂಬಿಗಳ್ ಒಡವಂದುವು

ಮಿಶ್ರಹೂಗಳ ಮಕರಂದವನ್ನು ಪೂರ್ಣವಾಗಿ ಹೀರುತ್ತಾ ಮರಿದುಂಬಿಗಳು ಜೊತೆಯಲ್ಲೇ ಬಂದುವು.

೨. ಕ್ರುತಕ ಕಿರಾತನಟ್ಟುತ್ತುಂ ಬಂದನ್

ಕ್ರುತಕ ಕಿರಾತಕನು ಅಟ್ಟುತ್ತಾ ಬಂದನು.

ಆದರೆ ಮಳವಳ್ಳಿ ಕನ್ನಡದಲ್ಲಿ ಇದಕ್ಕಾಗಿ ಕ್ರಿಯಾಪದದ ಭೂತಕಾಲದ ಸಮಾಸರೂಪದೊಂದಿಗೆ ಕೊ(ಳ್) ಎಂಬುದನ್ನು ಸೇರಿಸಿ ಪಡೆದ ಸಂಯುಕ್ತ ಕ್ರಿಯಾಪದವನ್ನು ಬಳಸಲಾಗುತ್ತದೆ.

೧. ಅವ ಓದ್ತಾವನೆ.

ಅವನು ಓದುತ್ತಾ ಇದ್ದಾನೆ.

೨. ಅವ್ರು ದನ್ಗಳ್ನ ಅಟ್ಕೊಂಡು ಬಂದ್ರು.

ಅವರು ದನಗಳನ್ನು ಅಟ್ಟುತ್ತಾ ಬಂದರು.

ಈ ವಿಷಯದಲ್ಲಿಯೂ ಮಳವಳ್ಳಿ ಕನ್ನಡ ಬರಹ ಕನ್ನಡ ಮತ್ತು ಹಳೆಗನ್ನಡಗಳೆರಡರಿಂದಲೂ ಬೇರಾಗಿದೆ ಎಂಬುದನ್ನು ಗಮನಿಸಬಹುದು.

| **ಹಳೆಗನ್ನಡ** | **ಬರಹ ಕನ್ನಡ** | **ಮಳವಳ್ಳಿ ಕನ್ನಡ** |
|---|---|---|
| ನೋಡುತ್ತೆ | ನೋಡುತ್ತಾ | ನೋಡ್ಕೊಂಡು |
| ಕೇಳುತ್ತೆ | ಕೇಳುತ್ತಾ | ಕೇಳ್ಕೊಂಡು |
| ಉಗುಟುತ್ತೆ | ಉಗುಳುತ್ತಾ | ಉಗ್ಕೊಂಡು |
| ಕಾಯುತ್ತೆ | ಕಾಯುತ್ತಾ | ಕಾಯ್ಕೊಂಡು |
| ಕೊಲ್ಲುತ್ತೆ | ಕೊಲ್ಲುತ್ತಾ | ಕೊಂದ್ಕೊಂಡು |

ಈ ರೀತಿಯ ಸಮಾಸಕ್ರಿಯಾ ರೂಪಗಳನ್ನು ಬಳಸಬೇಕಿದ್ದಲ್ಲಿ ಅವು ತಿಳಿಸುವ ಕ್ರಿಯೆಯನ್ನು ಮತ್ತು ಅವುಗಳ ನಂತರ ಬಂದಿರುವ ಕ್ರಿಯಾಪದ ತಿಳಿಸುವ ಕ್ರಿಯೆಯನ್ನು ಒಬ್ಬನೇ ವ್ಯಕ್ತಿ ನಡೆಸುತ್ತಿರಬೇಕೆಂದು ನಿಯಮ ಇದೆ. ಉದಾಹರಣೆಗೆ ಬರಹಕನ್ನಡದ **ಮಾಡದೆ ಹೋದ, ಮಾಡಲು ಹೋದ, ಮಾಡುತ್ತಾ ಹೋದ, 'ಮಾಡದೆ'** ಎಂಬಂತಹ ಬಳಕೆಗಳಲ್ಲೆಲ್ಲ ಮಾಡುವ ವ್ಯಕ್ತಿಯೇ ಹೋಗುವ ವ್ಯಕ್ತಿಯೂ ಆಗಿರಬೇಕಾಗಿದೆ.

ಬೇರೆ ಬೇರೆ ವ್ಯಕ್ತಿಗಳು ನಡೆಸುವ ಕ್ರಿಯೆಗಳನ್ನು ಈ ರೀತಿ ಜೋಡಿಸಬೇಕಿದ್ದಲ್ಲಿ ಅದಕ್ಕಾಗಿ ಹಳೆಗನ್ನಡದಲ್ಲಿ ಭೂತಕಾಲದ ಕ್ರಿಯೆಯನ್ನು ತಿಳಿಸಲು ಬೇರೆಯೇ ಒಂದು ಜೋಡಿಸುವ ಕ್ರಿಯಾರೂಪವನ್ನು ಬಳಸಬೇಕಾಗುತ್ತದೆ. ಕ್ರಿಯಾಪದಕ್ಕೆ **ಎ** ಪ್ರತ್ಯಯವನ್ನು ಸೇರಿಸಿ ಈ ಕ್ರಿಯಾರೂಪವನ್ನು ಪಡೆಯಬಹುದು.

೧. ಆತನ್ ತೋಮರದಿಂದ ಇಡೆ ಈತನ್ ಅದಂ ಎಡೆಯೊಳ್ ಕಡಿದಂ

ಆತನು ತೋಮರದಿಂದ ಹೊಡೆದಾಗ ಈತನು ಅದನ್ನು ಅರ್ಧದಲ್ಲೇ ಕತ್ತರಿಸಿದನು

೨. ನೀ ತೊಲಗೆನೆ ನಾಂ ತೊಲಗಲಾರೆಂ

ನೀನು ತೊಲಗೆಂದು ಹೇಳಿದಾಗ ನಾನು ತೊಲಗಲಾರೆ

**೫.೪.ಕಾಲಸೂಚಕ ಪ್ರತ್ಯಯಗಳು**

ಕ್ರಿಯೆಗಳನ್ನು ತಿಳಿಸುವುದಕ್ಕಾಗಿ ವಾಕ್ಯಗಳಲ್ಲಿ ಕ್ರಿಯಾಪದಗಳನ್ನು ಬಳಸಲಾಗುತ್ತದೆ. ಈ ಕ್ರಿಯೆಗಳು ಮಾತನಾಡುವ ಸಂದರ್ಭದಲ್ಲಿ ಅಥವಾ ಮಾತಿನ ನಂತರ ನಡೆಯುವಂತೆ ಇರಬಹುದು. (ಭವಿಷ್ಯತ್ ಕಾಲ), ಇಲ್ಲವೇ ಅದಕ್ಕಿಂತ ಮೊದಲೇ ನಡೆದಿರಬಹುದು (ಭೂತಕಾಲ).

ಈ ಎರಡು ಬಗೆಯ ಕಾಲಸೂಚಕಗಳನ್ನು ತಿಳಿಸುವುದಕ್ಕಾಗಿ ಹಳೆಗನ್ನಡದಲ್ಲಿ ಕ್ರಿಯಾಪದಗಳ ನಂತರ **ವ್** (ತ್) ಮತ್ತು **ದ್** ಎಂಬ ಎರಡು ಪ್ರತ್ಯಯಗಳನ್ನು ಬಳಸಲಾಗುತ್ತದೆ.

೧. ನಾಮು ಅಲ್ಗೆ ವಯ್‌ತಿಮಿ

ನಾವು ಅಲ್ಲಿಗೆ ಹೋಗುತ್ತೇವೆ

೨. ನಾಮು ಅಲ್ಗೆ ವೋದ್ಮೊ

ನಾವು ಅಲ್ಲಿಗೆ ಹೋದೆವು

ಮೊದಲ ವಾಕ್ಯದ ಉದಾಹರಣೆಯಲ್ಲಿ ಕ್ರಿಯೆಯು ಆ ಮಾತನ್ನಾಡಿರುವ ಕಾಲದ ನಂತರ ನಡೆಯಲಿದೆ, ಇಲ್ಲವೇ ಅದೇ ಸಮಯದಲ್ಲಿ ನಡೆಯುತ್ತಿದೆ ಎಂಬುದನ್ನು ತಿಳಿಸಲು **ವಯ್, ಹೋಗು** ಕ್ರಿಯಾಪದದ ನಂತರ **ತ್** ಪ್ರತ್ಯಯವನ್ನು ಬಳಸಲಾಗಿದೆ (ವಯ್–ತ್–ಇಮಿ)

ಎರಡನೆಯ ವಾಕ್ಯದ ಉದಾಹರಣೆಯಲ್ಲಿ ಕ್ರಿಯೆಯು ಆ ಮಾತನ್ನಾಡಿರುವ ಕಾಲದ ಮೊದಲು ನಡೆದಿದೆ ಎಂಬುದನ್ನು ತಿಳಿಸಲು **ದ್** ಪ್ರತ್ಯಯವನ್ನು ಬಳಸಲಾಗಿದೆ (**ವೋ–ದ್–**ಎಮು)

ಒಂದು ಕ್ರಿಯೆಯನ್ನು ಮಾತನಾಡುವ ಸಮಯದಲ್ಲೇ ಕ್ರಿಯೆಯು ನಡೆಯುತ್ತಿದೆ ಎಂಬುದನ್ನು ತಿಳಿಸಬೇಕಾಗಿರುವಲ್ಲೂ ಹಳೆಗನ್ನಡದಲ್ಲಿ **ವ್** (ಪ್) ಪ್ರತ್ಯಯವೇ ಬಳಕೆಯಾಗುತ್ತದೆ. ಆದರೆ ಸಾಮಾನ್ಯವಾಗಿ ಈ ರೀತಿ ಈ ಸಮಯದಲ್ಲೇ ಕ್ರಿಯೆಯು ನೆಡೆಯುತ್ತದೆಯಾದ

ಕಾರಣ ಇಂತಹ ಕಡೆಗಳಲ್ಲಿ **ಪೋಗುತ್ತೆ ಇರ್ಪನ್** ಎಂಬಂತಹ ಸಂಯುಕ್ತ ಕ್ರಿಯಾಪದಗಳನ್ನು ಬಳಸಬೇಕಾಗುತ್ತದೆ.

ಹಳೆಗನ್ನಡದಲ್ಲಿ ಕಾಲಸೂಚಕವನ್ನು ತಿಳಿಸಲು **ದಪ** ಎಂಬ ಮೂರನೆಯದೊಂದು ಪ್ರತ್ಯಯ ಬಳಕೆಯಾಗುತ್ತದೆ ಎಂದು ಹಳೆಗನ್ನಡದ ವ್ಯಾಕರಣಗಳಲ್ಲಿ ಬರೆಯಲಾಗಿದೆ. ಆದರೆ ನಿಜಕ್ಕೂ ಇದು ಸರಿಯಲ್ಲ. ಯಾಕೆಂದರೆ ಹಳೆಗನ್ನಡ ಬರಹಗಳನ್ನು ಪರಿಶೀಲಿಸಿದಾಗ ಅವುಗಳಲ್ಲಿ **ದಪ** ಮತ್ತು **ಪ** ಎಂಬುವುಗಳ ನಡುವೆ ಕ್ರಿಯಾಪದ ಕಾಲಸೂಚಕವನ್ನು ತಿಳಿಸುವ ವಿಷಯದಲ್ಲಿ ವ್ಯತ್ಯಾಸವೇನು ಇಲ್ಲ ಎಂದು ಗೊತ್ತಾಗುತ್ತದೆ.

**ಪ** ಪ್ರತ್ಯಯದ ಹಾಗೆ **ದಪ** ಪ್ರತ್ಯಯವನ್ನು ಕಾಲಸೂಚಕ ಕ್ರಿಯೆಯನ್ನಷ್ಟೆ ಅಲ್ಲದೆ ಭವಿಷ್ಯತ್ತಿನ ಕ್ರಿಯೆಯನ್ನು ತಿಳಿಸುವುದಕ್ಕಾಗಿಯೂ ಬಳಸಲಾಗುತ್ತದೆ. ಉದಾಹರಣೆಗೆ ಕೆಳಗೆ ಕೊಟ್ಟಿರುವ ಪಂಪಭಾರತ ಕೃತಿಯಿಂದ ಆಯ್ಕೆ ಮಾಡಿಕೊಂಡಿರುವ ಹಳೆಗನ್ನಡದ ವಾಕ್ಯಗಳನ್ನು ಗಮನಿಸಬಹುದು.

೧. ಕಡಲಂ ಪೊಕ್ಕೊಡೆ ಪೀರ್ದಪೆಂ ಕಡಲನ್
ಕಡಲನ್ನು ಹೊಕ್ಕರೆ ಕಡಲನ್ನು ಹೀರುತ್ತೇನೆ

೨. ಎನ್ನ ಕಣ್ಣಿಂ ಕಿಡಿಯುಂ ಕೆಂಡಂಗಳುಂ ಸೂಸಿದಪುವು ಅಹಿತರಂ ನೋಡಿ
ಶತ್ರುಗಳನ್ನು ನೋಡಿ ನನ್ನ ಕಣ್ಣಿನಿಂದ ಕಿಡಿಯೂ ಕೆಂಡಗಳೂ ಚೆಲ್ಲತ್ತಿವೆ

**ದಪ** ಎಂಬುದಕ್ಕೆ ಮೊದಲ ಉದಾಹರಣೆಯಲ್ಲಿ ಭವಿಷ್ಯತ್‌ಕಾಲದ ಕ್ರಿಯೆಯನ್ನು ತಿಳಿಸುವ ಅರ್ಥ ಇದೆ. ಕಡಲನ್ನು ಹೀರು ಎಂಬ ಕ್ರಿಯೆ ಮಾತನ್ನಾಡಿದ ನಂತರ ನಡೆಯಬಲ್ಲದು. ಇದಕ್ಕೆ ಬದಲು ಎರಡನೆಯ ಉದಾಹರಣೆಯಲ್ಲಿ ಅದೇ ಪ್ರತ್ಯಯಕ್ಕೆ ವರ್ತಮಾನ ಕಾಲದ ಕ್ರಿಯೆಯನ್ನು ತಿಳಿಸುವ ಅರ್ಥವಿದೆ. ಈ ಉದಾಹರಣೆಯಲ್ಲಿ ಮಾತನಾಡುವ ಸಮಯದಲ್ಲೇ ಕಣ್ಣಿನಿಂದ ಕಿಡಿ ಮತ್ತು ಕೆಂಡಗಳು ಚೆಲ್ಲುತ್ತಾ ಇದ್ದಾವೆ ಎಂಬ ಅರ್ಥ ಈ ಮಾತಿಗಿದೆ.

ಇದೇ ರೀತಿಯಲ್ಲಿ **ಪ** ಪ್ರತ್ಯಯಕ್ಕೂ ಈ ಎರಡು ಅರ್ಥಗಳು ಬರಬಲ್ಲುವು ಎಂಬುದನ್ನು ಕೆಳಗೆ ಕೊಟ್ಟಿರುವ ಪಂಪಭಾರತ ಕೃತಿಯಿಂದ ಆಯ್ಕೆ ಮಾಡಿಕೊಂಡಿರುವ ಹಳೆಗನ್ನಡದ ವಾಕ್ಯಗಳನ್ನು ಗಮನಿಸಬಹುದು.

೧. ಕರ್ಣಂ ಈಗಳೆ ಕುಲಜನಂ ಮಾಡಿ ತೋರ್ಪೆನ್

ಕರ್ಣನನ್ನು ಈಗಲೇ ಕುಲಜನನ್ನಾಗಿ ಮಾಡಿ ತೋರಿಸುತ್ತೇನೆ.

೨. ಉದ್ಧತ ಸಿದ್ಧಖೇಚರರ್ ಕಾವರ್

ಗರ್ವಿಷ್ಠರಾದ ಸಿದ್ಧಖೇಚರರೇ ಕಾಯುತ್ತಿದ್ದಾರೆ.

ಮೊದಲ ಉದಾಹರಣೆಯಲ್ಲಿ ತೋರ್ಪೆನ್ ಕ್ರಿಯಾಪದದಲ್ಲಿ **ಪ** ಪ್ರತ್ಯಯ ಬಂದಿದ್ದು ಇದಕ್ಕೆ ಭವಿಷ್ಯತ್ ಕಾಲದ ಅರ್ಥವಿದೆ. ಮತ್ತು ಎರಡನೆಯ ಉದಾಹರಣೆಯಲ್ಲಿ **ಕಾವರ್** ಎಂಬ ಕ್ರಿಯಾ ಪದದಲ್ಲಿ ಅದೇ ಪ್ರತ್ಯಯ (ವ್) ಬಂದಿದ್ದು ಅದಕ್ಕೆ ವರ್ತಮಾನಕಾಲದ ಅರ್ಥಇದೆ.

ಇದಲ್ಲದೆ ದಪ ಎಂಬುದು ನಿಜಕ್ಕೂ ಒಂದು ಪ್ರತ್ಯಯವೇ ಅಲ್ಲ. ಅದರಲ್ಲಿ ಎರಡು ಕ್ರಿಯಾರೂಪಗಳು ಒಟ್ಟಿಗೆ ಸೇರಿದ್ದು ಅದು **ದ್** ಮತ್ತ **ಪ್** ಎಂಬ ಎರಡು ಪ್ರತ್ಯಯಗಳ ಸೇರಿಕೆಯಾಗಿದೆ. ಉದಾಹರಣೆಗೆ **ತೋರ್ದಪೆನ್ ತೋರುತ್ತೇನೆ** ಎಂಬ ಕ್ರಿಯಾ ರೂಪದಲ್ಲಿ **ತೋರ್** ಕ್ರಿಯಾಪದದ **ತೋರ್ದ** ರೂಪ ಮತ್ತು **ಆಗು** ಕ್ರಿಯಾಪದದ **ಅಪ್ಪನ್** ರೂಪ ಎರಡು ಒಟ್ಟಿಗೆ ಸೇರಿದ್ದು ಅವುಗಳಲ್ಲಿ ಮೊದಲನೆಯದರೊಂದಿಗೆ **ದ್** ಪ್ರತ್ಯಯ ಎರಡನೆಯದರೊಂದಿಗೆ **ಪ್** ಪ್ರತ್ಯಯ ಬಂದಿದೆ.

ಹಾಗಾಗಿ ನಿಜಕ್ಕೂ ಹಳೆಗನ್ನಡದಲ್ಲಿ **ದಪ** ಮತ್ತು **ಪ** ಪ್ರತ್ಯಯಗಳ ನಡುವಿರುವ ಅರ್ಥದ ವ್ಯತ್ಯಾಸ ಹೊಸಗನ್ನಡದಲ್ಲಿ ಬರುತ್ತಾನೆ ಮತ್ತು ಬಂದವನಾಗುತ್ತಾನೆ ಎಂಬುವುಗಳ ನಡುವಿರುವ ಅರ್ಥ ವ್ಯತ್ಯಾಸ ಸಮನಾದುದು ಎಂದು ಹೇಳಬೇಕಾಗುತ್ತದೆ.

ಹಳೆಗನ್ನಡದ **ವ್, ಪ್, ಬ್** ಪ್ರತ್ಯಯಗಳು ಬರಹ ಕನ್ನಡದಲ್ಲಿ ಉಳಿದಿಲ್ಲ. ಅದಕ್ಕೆ ಬದಲು **ಉತ್ತ** ಪ್ರತ್ಯಯ ಬಳಕೆಯಾಗುತ್ತದೆ ಎಂಬುದನ್ನು ಮೇಲಿನ ಉದಾಹರಣೆಯಲ್ಲಿ ಕೊಟ್ಟಿರುವ ಬರಹ ಕನ್ನಡದ ವಾಕ್ಯದಲ್ಲಿ ಕಾಣಬಹುದು.

ಮಳವಳ್ಳಿ ಕನ್ನಡದಲ್ಲಿ ಹಳೆಗನ್ನಡದ **ವ್, ಪ್, ಬ್** ಪ್ರತ್ಯಯ ಅದರ ರೂಪದ ಮಟ್ಟಿಗೆ ಹೆಚ್ಚು ಮಾರ್ಪಡದೆ ಹಾಗೆಯೇ ಉಳಿದಿದೆ. ಆದರೆ ಅರ್ಥದ ಮಟ್ಟಿಗೆ ಮಾರ್ಪಟ್ಟಿದೆ. ಹಳೆಗನ್ನಡದಲ್ಲಿ ಈ ಪ್ರತ್ಯಯ ಭವಿಷ್ಯತ್‌ಕಾಲ ಮತ್ತು ವರ್ತಮಾನಕಾಲಗಳನ್ನು ತಿಳಿಸಬಲ್ಲುದಾದರೆ ಮಳವಳ್ಳಿ ಕನ್ನಡದಲ್ಲಿ ಭವಿಷ್ಯತ್‌ಕಾಲದಷ್ಟೇ ಅದು ತಿಳಿಸಬಲ್ಲುದು. ಇದಲ್ಲದೆ ಅದಕ್ಕೆ ಮಳವಳ್ಳಿ ಕನ್ನಡದಲ್ಲಿ **ಬಹುದು** ಎಂಬ ಪಾರಿಭಾಷಿಕ ಅರ್ಥ ಸೇರಿಕೊಂಡಿದೆ.

೧. ನಾನು ಅವ್ನಗೆ ಕೊಡ್ತಿನಿ
ನಾನು ಅವನಿಗೆ ಕೊಟ್ಟೇನು

೨. ನಾಮು ಬಂದ್ಮೊ
ನಾವು ಬಂದೇವು

ಇಂತಹ ಜ್ಞಾನದ ಅರ್ಥಬರದೆ ಹಾಗೆ ಭವಿಷ್ಯತ್ತನ್ನು. ಇಲ್ಲವೇ ವರ್ತಮಾನವನ್ನು ತಿಳಿಸಬೇಕಿದ್ದಲ್ಲಿ ಅದಕ್ಕಾಗಿ ಮಳವಳ್ಳಿ ಕನ್ನಡದಲ್ಲಿ ಬರಹ ಕನ್ನಡದ ಹಾಗೆ **ಉತ್ತ್** ಪ್ರತ್ಯಯವನ್ನು ಬಳಸದೆ **ತಿನಿ** ಎಂಬ ಪ್ರತ್ಯಯವನ್ನು ಬಳಸಲಾಗಿದೆ. ಮಳವಳ್ಳಿ ಕನ್ನಡದ ಕ್ರಿಯಾಪದಗಳಿಗೆ ಇದರಿಂದಾಗಿ ಮೂರು ಕಾಲಸೂಚಕ ರೂಪಗಳು ದೊರೆಯುತ್ತವೆ ಎಂಬುದನ್ನು ಉದಾಹರಣೆಗಳಲ್ಲಿ ಕಾಣಬಹುದು.

೧. ನಾನು ಅಲ್ಗೆ ವಯ್ತಿನಿ
ನಾನು ಅಲ್ಲಗೆ ಹೋಗುತ್ತೇನೆ

೨. ನಾನು ಅಲ್ಗೆ ವೋದೆ
ನಾನು ಅಲ್ಲಿಗೆ ಹೋದೆ

೩. ನಾನು ಅಲ್ಗೆ ವೋಗ್ಬವ್ದು
ನಾನು ಅಲ್ಲಿಗೆ ಹೋಗಬಹುದು

ಹಳೆಗನ್ನಡದ **ವ್ ಪ್ ಬ್** ಪ್ರತ್ಯಯಗಳು ಮಳವಳ್ಳಿ ಕನ್ನಡದಲ್ಲಿ ಹಾಗೂ ಮಳವಳ್ಳಿ ಕನ್ನಡದ ಹೆಚ್ಚಿನ ಬಳಕೆಗಳಲ್ಲಿ ರೂಪದ ಮಟ್ಟಿಗೆ ಬದಲಾಗದೆ ಉಳಿದಿದೆ ಎಂಬುದನ್ನು ಕೆಳಗಿನ ಉದಾಹರಣೆಗಳಲ್ಲಿ ಕಾಣಬಹುದು.

| **ಕ್ರಿಯಾಪದ** | **ಹಳೆಗನ್ನಡ** | **ಮಳವಳ್ಳಿ ಕನ್ನಡ** |
|---|---|---|
| ನೋಡು | ನೋಡುವೆನ್ | ನೋಡ್ವೆ |
| ಪೇಳ್ | ಪೇಳ್ವೆನ್ | ಏಳ್ವೆ |
| ಒಪ್ಪು | ಒಪ್ಪುವೆನ್ | ಒಪ್ವೆ |
| ಪೋ | ಪೋಪೆನ್ | ಓಗ್ವೆ |
| ಬರ್ | ಬರ್ಪೆನ್ | ಬರ್ನೆ |

**ಮಾಟ್ಪೆ–ಮಾಡುವೆ, ಬೇಟ್ಪೆ–ಬೇಡುವೆ** ಎಂಬಂತಹ ಕೆಲವು ಕ್ರಿಯಾರೂಪಗಳಲ್ಲಷ್ಟೆ ಹಳೆಗನ್ನಡದ ಈ ಪ್ರತ್ಯಯ ಮಳವಳ್ಳಿ ಕನ್ನಡದಲ್ಲಿ **ಪ್**ಕಾರ ಇದ್ದದ್ದು **ವ್**ಕಾರ ಆಗಿರುವುದನ್ನು ಕಾಣಬಹುದು.

ಈ ಪ್ರತ್ಯಯದ ಬಳಕೆಯಲ್ಲಿ ಇನ್ನೊಂದು ಮುಖ್ಯವಾದ ವ್ಯತ್ಯಾಸವನ್ನು ಮಳವಳ್ಳಿ ಕನ್ನಡದಲ್ಲಿ ಕಾಣಬಹುದು. ಹಳೆಗನ್ನಡದಲ್ಲಿ ಈ ಪ್ರತ್ಯಯವನ್ನು ಉತ್ತಮ ಪುರುಷ ಮತ್ತು ಮಧ್ಯಮ ಪುರುಷಗಳನ್ನು ತಿಳಿಸುವ ನಾಮಪ್ರತ್ಯಯದೊಂದಿಗಷ್ಟೆ ಅಲ್ಲದೆ ಪ್ರಥಮ ಪುರುಷ ನಾಮಪ್ರತ್ಯಯದೊಂದಿಗೂ ಬಳಸಬಹುದಾಗಿತ್ತು. ಉದಾಹರಣೆ ಕೆಳಗೆ ಕೊಟ್ಟಿರುವ ಪಂಪಭಾರತದ ವಾಕ್ಯಗಳಲ್ಲಿ ಈ ಪ್ರತ್ಯಯದ ಪ್ರಥಮ ಪುರುಷ ನಾಮಪ್ರತ್ಯಯದೊಂದಿಗೆ ಬಳಕೆಯಾಗಿದೆ.

೧. ಬಲದೇವನೆನ್ನನುಜೆಯಂ ದುರ್ಯೋಧನಂಗೆ ಕುಡಲಿರ್ಪಂ

ಬಲರಾಮನು ನನ್ನ ತಂಗಿಯನ್ನು ದುರ್ಯೋಧನನಿಗೆ ಕೊಡಲಿದ್ದಾನೆ.

೨. ಸುರಿವುವೆನ್ನ ನಯನ ಜಲಂಗಳ್

ನನ್ನ ಕಣ್ಣೀರು ಸುರಿಯುತ್ತದೆ.

ಆದರೆ ಮಳವಳ್ಳಿ ಕನ್ನಡದಲ್ಲಿ ಇದನ್ನು ವಾಕ್ಯದ ಪ್ರಥಮ ಮತ್ತು ಮಧ್ಯಮ ಪುರುಷಾರ್ಥಗಳನ್ನು ತಿಳಿಸಲಷ್ಟೆ ಬಳಸಲು ಬರುತ್ತದೆ. ಉತ್ತಮ ಪುರುಷ ವ್ಯಕ್ತಿಗಳನ್ನು ತಿಳಿಸುವಲ್ಲಿ ಈ ಪ್ರತ್ಯಯದ ಬದಲು **ಗು** ಎಂಬ ಬೇರೊಂದು ಪ್ರತ್ಯಯವನ್ನು ಬಳಸಬೇಕಾಗುತ್ತದೆ.

ಇದು ಹಳೆಗನ್ನಡದ **ಗುಂ** (ಕುಂ) ಪ್ರತ್ಯಯಕ್ಕೆ ಸಮನಾದುದು. ಹಳೆಗನ್ನಡದ ಹಾಗೆ, ಮಳವಳ್ಳಿ ಕನ್ನಡದಲ್ಲೂ ಈ ಪ್ರತ್ಯಯ ನಾಮವಾಚಕ ಮತ್ತು ಸಂಖ್ಯಾ ವಾಚಕಗಳನ್ನು ತಿಳಿಸಲಷ್ಟೇ ಬಳಕೆಯಾಗುತ್ತದೆ.

೧. ಅಮ ನಾಳ್ಗೆ ಬಂದನ

ಅವನು ನಾಳೆ ಬಂದಾನು

೨. ಅವ್ರು ನಾಳ್ಗೆ ಬಂದರೆ

ಅವರು ನಾಳೆಗೆ ಬಂದಾರು

೩. ಅದು ನಾಳ್ಗೆ ಬತ್ತದೆ

ಅದು ನಾಳೆ ಬಂದೀತು

## ೫.೫.ನಾಮ ಪ್ರತ್ಯಯಗಳು

ಕ್ರಿಯಾ ರೂಪಗಳಲ್ಲಿ ಅವು ತಿಳಿಸುವ ಕ್ರಿಯೆಯಲ್ಲಿ ತೊಡಗಿಕೊಂಡಿರುವ ವ್ಯಕ್ತಿ, ವಸ್ತು ಮೊದಲಾದ ರೀತಿಗಳಲ್ಲಿ ಮುಖ್ಯವಾದುದೊಂದನ್ನು ತಿಳಿಸುವುದಕ್ಕಾಗಿ ನಾಮಪ್ರತ್ಯಯ ಬರುತ್ತದೆ. ಉದಾಹರಣೆಗೆ ಹೊಡೆಯುತ್ತಾನೆ ಎಂಬ ಕ್ರಿಯಾಪದದಲ್ಲಿ ಬಂದಿರುವ **ಆನೆ** ಪ್ರತ್ಯಯ ಹೊಡೆಯುವ ಎಂಬುದು ಕ್ರಿಯೆಯಲ್ಲಿ ತೊಡಗಿಕೊಂಡಿರುವ ವ್ಯಕ್ತಿಗಳಲ್ಲಿ ಮುಖ್ಯವಾದವನು ಒಬ್ಬ ಗಂಡಸು ಎಂಬುದನ್ನು ತಿಳಿಸುತ್ತದೆ. ಇದಕ್ಕೆ ಬದಲು ಹೊಡೆಯುತ್ತಾಳೆ ಎಂಬ ರೂಪವನ್ನು ಬಳಸಿದೆವಾದರೆ, ಹೊಡೆಯುವ ವ್ಯಕ್ತಿ ಒಬ್ಬ ಹೆಂಗಸು ಎಂಬುದು ಗೊತ್ತಾಗುತ್ತದೆ.

ಬರಹ ಕನ್ನಡದಲ್ಲಿ ಈ ಪ್ರತ್ಯಯಗಳಿಗೆ ಎರಡೆರಡು ರೂಪಗಳಿವೆ. ಭೂತಕಾಲವನ್ನು ತಿಳಿಸುವ ಪ್ರತ್ಯಯದೊಂದಿಗೆ ಬಂದಾಗ ಇವಕ್ಕೆ ಸ್ವಲ್ಪ ದೀರ್ಘಸ್ವರ ರೂಪಗಳಿವೆ (ಆನೆ, ಆಳೆ, ಏನೆ, ಏವೆ ಮೊದಲಾದವು) ಮತ್ತು ಭವಿಷ್ಯತ್ ಕಾಲವನ್ನು ತಿಳಿಸುವ ಪ್ರತ್ಯಯದೊಂದಿಗೆ ಬಂದಾಗ ಇವಕ್ಕೆ ಇದಕ್ಕಿಂತ ಸ್ವಲ್ಪ ಹ್ರಸ್ವಸ್ವರವಾಗಿರುವ ರೂಪಗಳಿವೆ (ಅ, ಅಳು, ಎ, ಎವು ಮೊದಲಾದವು)

| **ಭವಿಷ್ಯತ್ ಕಾಲ** | **ಭೂತಕಾಲ** |
|---|---|
| ಬತ್ತಾನೆ | ಬಂದ |
| ಬತ್ತಾಳೆ | ಬಂದ್ಲು |
| ಬತ್ತಾರೆ | ಬಂದ್ರು |
| ಬತ್ತೀನಿ | ಬಂದೆ |
| ಬತ್ತೀವಿ | ಬಂದ್ವೊ |
| ಬರ್ತೀರಿ | ಬಂದ್ರಿ |
| ಬರ್ತದೆ | ಬಂತು |

ಆದರೆ ಹಳೆಗನ್ನಡದಲ್ಲಿ ಈ ಎರಡು ಬಗೆಯ ಕ್ರಿಯಾರೂಪಗಳಲ್ಲೂ ಒಂದೇ ರೂಪದಲ್ಲಿರುವ (ಅನ್, ಅಳ್, ಅರ್, ಎನ್ ಮೊದಲಾದ) ನಾಮಪ್ರತ್ಯಯಗಳು ಬರುತ್ತವೆ.

| **ಭವಿಷ್ಯತ್ ಕಾಲ** | **ಭೂತಕಾಲ** |
|---|---|
| ಬತ್ತನೆ | ಬಂದಿದ್ನ |
| ಬತ್ತಳೆ | ಬಂದಿದ್ಲು |
| ಬತ್ತರೆ | ಬಂದಿದ್ರು |

| | |
|---|---|
| ಬರ್ತಿನಿ | ಬಂದಿದ್ದೆ |
| ಬರುದು | ಬಂದುದು |

ಈ ವಿಷಯದಲ್ಲಿ ಮಳವಳ್ಳಿ ಕನ್ನಡ ಹಳೆಗನ್ನಡಕ್ಕಿಂತ ಭಿನ್ನವಾಗಿರುವುದನ್ನು ಕಾಣಬಹುದು. ಅದರಲ್ಲೂ ನಾಮ ಪ್ರತ್ಯಯಗಳು ಎರಡು ಕಾಲಗಳಲ್ಲೂ ಹೆಚ್ಚೂ ಕಡಿಮೆ ಇರುವುದನ್ನು ಕಾಣಬಹುದು.

| **ಭವಿಷ್ಯತ್ ಕಾಲ** | **ಭೂತಕಾಲ** |
|---|---|
| ಬತ್ತ- ಬರುತ್ತಾನೆ | ಬಂದ- ಬಂದ |
| ಬತ್ತ- ಬರುತ್ತಾಳೆ | ಬಂದ್ಳು- ಬಂದಳು |
| ಬತ್ತಾರೆ- ಬರುತ್ತಾರೆ | ಬಂದ್ರು- ಬಂದರು |
| ಬತ್ತೀನಿ- ಬರುತ್ತೇನೆ | ಬಂದೆ- ಬಂದೆ |
| ಬತ್ತೀಮಿ- ಬರುತ್ತೇವೆ | ಬಂದ್ಮೊ- ಬಂದೆವು |
| ಬತ್ತೀಯ- ಬರುತ್ತಿ | ಬಂದಿ- ಬಂದಿ |
| ಬತ್ತು- ಬರುತ್ತದೆ | ಬಂತು- ಬಂತು |

ಇದಲ್ಲದೆ ಮಳವಳ್ಳಿ ಕನ್ನಡದಲ್ಲಿ **ಬತ್ತೀಮಿ** ಮತ್ತು **ಬಂದ್ಮೊ** ಎಂಬವುಗಳಲ್ಲಿ ಕಾಣಿಸುವ **ಇಮಿ** ಹಾಗೂ **ಒ** ಪ್ರತ್ಯಯಗಳನ್ನು ಉತ್ತಮಪುರುಷನೊಂದಿಗೆ ಮಧ್ಯಮಪುರುಷನನ್ನೂ ಸೇರಿಸಿ ಹೇಳಬೇಕಾಗಿರುವಲ್ಲಿ ಬಳಸುವುದಿಲ್ಲ. ಮಧ್ಯಮಪುರುಷನನ್ನು ಬಿಟ್ಟು ಬೇರೆ ವ್ಯಕ್ತಿಗಳನ್ನು ಸೇರಿಸಿ ಹೇಳಬೇಕಾಗಿರುವಲ್ಲಷ್ಟೇ ಅದನ್ನು ಬಳಸಲಾಗುತ್ತದೆ. ಉತ್ತಮಪುರುಷನೊಂದಿಗೆ ಮಧ್ಯಮಪುರುಷನನ್ನೂ ಸೇರಿಸಿ ಹೇಳಬೇಕಾಗಿರುವಲ್ಲಿ **ಬತ್ತು** ಮತ್ತು **ಬಂತು** ಎಂಬ ಕ್ರಿಯಾರೂಪಗಳಲ್ಲಿ ಕಾಣಿಸುವ ತು ಪ್ರತ್ಯಯವನ್ನು ಬಳಸಲಾಗುತ್ತದೆ.

೧. ನಾಮು ನಾಳ್ಗೆ ಅವ್ರಟ್ಟಿಗೆ ವಯ್ತಿಮಿ

ನಾವು ನಾಳೆ ಅವರ ಮನೆಗೆ ಹೋಗುತ್ತೇವೆ.

೨. ನಾಮು ನೆನ್ನೆ ಅವ್ರಟ್ಟಿಗೆ ಹೋಗಿದ್ವೊ

ನಾವು ನಿನ್ನೆ ಅವರ ಮನೆಗೆ ಹೋಗಿದ್ದೇವೆ.

ಹಳೆಗನ್ನಡದಲ್ಲಿ ಇಂತಹ ಅರ್ಥದ ವ್ಯತ್ಯಾಸ ಕ್ರಿಯಾರೂಪಗಳ ಬಳಕೆಯಲ್ಲಿ ಕಾಣಿಸುವುದಿಲ್ಲವಾದರೂ ಆಡುಪದಗಳ ಬಳಕೆಯಲ್ಲಿ (ಆಮ್ ನಿಮ್ಮನ್ನು ಬಿಟ್ಟು ನಾವು ನಾಮ್ ನೀವೂ ಸೇರಿ ನಾವು) ಕಾಣಿಸುತ್ತದೆ ಎಂಬುದನ್ನು ಕಾಣಬಹುದು.

### ೫.೫.೧. ನಾಮಪದಗಳ ಬಳಕೆ

ಮಳವಳ್ಳಿ ಕನ್ನಡ ಮತ್ತು ಹಳೆಗನ್ನಡಗಳ ನಾಮಪದಗಳೊಂದಿಗೆ ಬರುವ ಬಹುವಚನ ಮತ್ತು ಕ್ರಿಯಾ ಸಂಬಂಧ ಪ್ರತ್ಯಯಗಳಲ್ಲಿ ಪರಸ್ಪರ ಹೋಲಿಕೆ ಮತ್ತು ವ್ಯತ್ಯಾಸ ಇರುವುದನ್ನು ಕಾಣಬಹುದು. ಇವುಗಳು ಯಾವ ರೀತಿ ಹೋಲಿಕೆ, ವ್ಯತ್ಯಾಸ ಮತ್ತು ಸಂಬಂಧಗಳನ್ನು ಹೊಂದಿವೆ ಎಂಬುವುದನ್ನು ಕಾಣಬಹುದು.

### ೫.೫.೨. ಬಹುವಚನ ಪ್ರತ್ಯಯ

ಹಳೆಗನ್ನಡದಲ್ಲಿ ಬಹುವಚನವನ್ನು ಹೇಳುವುದಕ್ಕಾಗಿ ಬಳಕೆಯಾಗುತ್ತಿದ್ದ ಕಳ್(ಗಳ್) ಪ್ರತ್ಯಯವು ಮಳವಳ್ಳಿ ಕನ್ನಡದಲ್ಲೂ ಗಳ್ ಎಂಬ ರೂಪವೆ ಬಳಕೆಯಾಗುವುದನ್ನು ಕಾಣಬಹುದು. ಆದರೆ ಬರಹ ಕನ್ನಡದಲ್ಲಿ ಇದರ ಮುಂದೆ ಉಕಾರ ಸೇರಿ ಕಳು, ಗಳು ಎಂದಾಗಿದೆ.

| **ಹಳೆಗನ್ನಡ** | **ಬರಹ ಕನ್ನಡ** | **ಮಳವಳ್ಳಿ ಕನ್ನಡ** |
|---|---|---|
| ಮನೆಗಳ್ | ಮನೆಗಳು | ಮನ್ಗಳ್ |
| ಪುಲಿಗಳ್ | ಹುಲಿಗಳು | ಉಲ್ಗಳ್ |
| ಕಯ್ಗಳ್ | ಕೈಗಳು | ಕಯ್ಗಳ್ |
| ಪರ್ದುಗಳ್ | ಹದ್ದುಗಳು | ಅದ್ಗಳ್ |

ನಂಟರನ್ನು ತಿಳಿಸುವ ಪದಗಳ ನಂತರ ಬರುವ ಹಳೆಗನ್ನಡದ **ಂದಿರ್** ಪ್ರತ್ಯಯ ಮಳವಳ್ಳಿ ಕನ್ನಡದಲ್ಲಿ **ಂದ್ರು** ಎಂಬ ರೂಪವನ್ನು ಪಡೆದಿದೆ.

| **ಹಳಗನ್ನಡ** | **ಮಳವಳ್ಳಿ ಕನ್ನಡ** |
|---|---|
| ಮಗಂದಿರ್ | ಮಗಂದ್ರು |
| ಅಳಿಯಂದಿರ್ | ಅಳಿಯಂದ್ರು |
| ಭಾವಂದಿರ್ | ಭಾವಂದ್ರು |
| ಸೊಸೆಯಂದಿರ್ | ಸೊಸೆಯಂದ್ರು |

ಆದರೆ ಈ ಎಲ್ಲಾ ಪ್ರತ್ಯಯಗಳೂ ಅವುಗಳ ಬಳಿಕ ಸ್ವರಗಳಿಂದ ಪ್ರಾರಂಭವಾಗುವ ಬೇರೊಂದು ಪ್ರತ್ಯಯ ಬಂದಾಗ ಹಳೆಗನ್ನಡದಲ್ಲಿರುವ ರೂಪದಲ್ಲೇ ಮಳವಳ್ಳಿ ಕನ್ನಡದಲ್ಲೂ ಕಾಣಿಸಿಕೊಳ್ಳುತ್ತವೆ.

೧. ಎಲ್ಲಾ ಮರಗಳನ್ನು ಕಡುದು ಹಾಕಿದ್ದವು

ಎಲ್ಲಾ ಮರ್ಗಳನೂ ಕತ್ರಿಸಿ ಆಕ್ಪರೆ

೨. ನೀವು ಮಕ್ಕಳನ್ನು ಮನೆಯಲ್ಲಿ ಬಿಟ್ಟು ಬಂದದ್ದು ಯಾಕೆ?

ನೀಮು ಹೈಕ್ಳುನ ಅಟ್ಲಿ ಬಿಟ್ ಬಂದುದ್ದು ಯಾಕೆ?

೩. ಮೂರು ಜನ ಅಳಿಯಂದಿರನ್ನೂ ಬರಲು ಹೇಳಿದ್ದೇನೆ

ಮೂರು ಜನ ಅಳಿಯಂದ್ರುನ್ನೂ ಬರಕೆ ಹೇಳಿದ್ದಿ

ಮನುಷ್ಯರನ್ನು ಕುರಿತು ಹೇಳುವ ಪದಗಳ ನಂತರ ಬರುವ ಬಹುವಚನ ಪ್ರತ್ಯಯಕ್ಕೆ ಹಳೆಗನ್ನಡದಲ್ಲಿ **ಅರ್** ಮತ್ತು **ಗಳ್** ಎಂಬ ಎರಡು ರೂಪಗಳಿದ್ದುವು, ಬರಹ ಕನ್ನಡದಲ್ಲೂ ಅದಕ್ಕೆ **ಅರು** ಮತ್ತು **ಗಳು** ಎಂಬ ಎರಡು ರೂಪಗಳಿವೆ, ಮಳವಳ್ಳಿ ಕನ್ನಡದಲ್ಲಿ ಹಳೆಗನ್ನಡ ರೂಪಗಳು ಉಳಿದುಕೊಂಡಿರುವುದನ್ನು ನಾವು ಗಮನಿಸಬಹುದು.

| | |
|---|---|
| ದೊಡ್ಡೋರು | ದೊಡ್ಡವರು |
| ಸಣ್ಣೋರು | ಚಿಕ್ಕವರು |

ವಿಶೇಷಣಪದಗಳ ನಾಮಪದಗಳು ಇವುಗಳಿಗಿಂತ ಪ್ರತ್ಯೇಕವಾಗಿರುವುದನ್ನು ಕಾಣಬಹುದು. ಬಹುವಚನದಲ್ಲಿ ಅವಕ್ಕೆ ಮನುಷ್ಯರನ್ನು ತಿಳಿಸುವ ರೂಪ ಮತ್ತು ಪ್ರಾಣಿಗಳನ್ನು, ವಸ್ತುಗಳನ್ನು ತಿಳಿಸುವ ರೂಪ ( ದೊಡ್ಡವು, ಸಣ್ಣವು) ಎಂಬುವುದಾಗಿ ಎರಡು ಬೇರೆ ಬೇರೆ ರೂಪಗಳಿರುವುದನ್ನು ಕಾಣಬಹುದು.

### ೫.೬.ವಿಭಕ್ತಿ ಪ್ರತ್ಯಯಗಳು

ಹಳೆಗನ್ನಡದಲ್ಲಿ ಕ್ರಿಯೆಯ ಕರ್ಮವನ್ನು ತಿಳಿಸುವ **ಅನ್** ಪ್ರತ್ಯಯ ಮತ್ತು ಸ್ಥಳ, ಪ್ರಾರಂಭ ಮತ್ತು ಗುರಿಗಳನ್ನು ತಿಳಿಸುವ **ಒಳ್, ಇನ್** ಮತ್ತು **ಗೆ** ಪ್ರತ್ಯಯಗಳು ಎಂಬುದಾಗಿ ಎರಡು ಬಗೆಯ ಕ್ರಿಯಾಪ್ರತ್ಯಯಗಳು ಬಳಕೆಯಲ್ಲಿರುವುದನ್ನು ಕಾಣಬಹುದು. ಇವುಗಳಲ್ಲಿ ಮೊದಲನೆ ಬಗೆಯ ಪ್ರತ್ಯಯವನ್ನು ನೇರವಾಗಿ ನಾಮಪದಗಳಿಗೆ ಸೇರಿಸಲಾಗುತ್ತದೆ. ಆದರೆ ಎರಡನೆ ಬಗೆಯ ಪ್ರತ್ಯಯಗಳನ್ನು ಸೇರಿಸುವ ಮೊದಲು ನಾಮಪದಗಳಿಗೆ ನಾಮಪ್ರತ್ಯಯ **ಅ** ಪ್ರತ್ಯಯವನ್ನು ಸೇರಿಸಬೇಕಾಗುತ್ತದೆ.

**ಹಳೆಗನ್ನಡದ ವಿಭಕ್ತಿ ಪ್ರತ್ಯಯಗಳು**

| ಷಷ್ಠಿ ವಿಭಕ್ತಿ ಪ್ರತ್ಯಯ | ಒಳ್ | ಇನ್/ಗೆ | ಅನ್ |
|---|---|---|---|
| ಕಾಡಿನ | ಕಾಡಿನೊಳ್ | ಕಾಡಿನಿನ್/ಕಾಡಿಂಗೆ | ಕಾಡನ್ |
| ಆಟದ | ಆಟದೊಳ್ | ಆಟದಿನ್/ಆಟಕ್ಕೆ | ಆಟಮನ್ |
| ಅದಱ | ಅದಱೊಳ್ | ಅದಱಿನ್/ಅದರ್ಕೆ | ಅದನ್ |
| ಮಗನ | ಮಗನೊಳ್ | ಮಗನಿನ್/ಮಗಂಗೆ | ಮಗನನ್ |

ಎತ್ತಣ ಎತ್ತಣಿನ್/ಎತ್ತಣಿಂಗೆ

ಮೇಲೆ ಕೊಟ್ಟಿರುವ ಪದರೂಪಗಳಲ್ಲಿ **ಒಳ್, ಇನ್** ಮತ್ತು **ಗೆ** ನಾಮಪದಗಳ ಷಷ್ಠಿ ವಿಭಕ್ತಿಪ್ರತ್ಯಯ ರೂಪದ ನಂತರ ಸೇರಿಸಲಾಗಿದೆ. ಆದರೆ **ಅನ್** ಪ್ರತ್ಯಯವನ್ನು ನೇರವಾಗಿ **ಕಾಡು, ಆಟಮ್, ಅದು** ಮತ್ತು **ಮಗನ್** ಎಂಬ ನಾಮಪದಗಳ ನಂತರ ಸೇರಿಸಲಾಗಿದೆ.

ಬರಹ ಕನ್ನಡದಲ್ಲೂ ಹೆಚ್ಚು ಕಡಿಮೆ ಇಂತಹದೇ ರೂಪಗಳ ಬಳಕೆಯಲ್ಲಿರುವುದನ್ನು ಕಾಣಬಹುದು. ಆದರೆ, ಕೆಲವು ಮಾರ್ಪಾಡುಗಳು ಆಗಿರುವುದರಿಂದಾಗಿ ಹಳೆಗನ್ನಡದಲ್ಲಿ ಕಾಣಿಸುವಷ್ಟು ಸ್ಪಷ್ಟವಾಗಿ ಈ ಎರಡು ಬಗೆಯ ಪ್ರತ್ಯಯಗಳ ನಡುವಿನ ವ್ಯತ್ಯಾಸ ಬರಹ ಕನ್ನಡದ **ಅನ್ನು** ಮತ್ತು ಉಳಿದ **ಅಲ್ಲಿ, ಇಂದ** ಮತ್ತು **ಗೆ** ಪ್ರತ್ಯಯಗಳ ನಡುವೆ ಕಾಣಿಸುವುದಿಲ್ಲ.

ಉದಾಹರಣೆಗೆ ಅದರ್ಕೆ ಎಂಬುದು ಬರಹ ಕನ್ನಡದಲ್ಲಿ ಅದಕ್ಕೆ ಎಂಬುದಾಗಿ ಬದಲಾಗುವುದನ್ನು ಕಾಣಬಹುದು, **ಗೆ** ಪ್ರತ್ಯಯದೆದುರು **ರ**ಕಾರ ಬಂದಿರುವುದು ಕಾಣಿಸುವುದಿಲ್ಲ. ಇದೇ ರೀತಿಯಲ್ಲಿ, **ಕಾಡಿಂಗೆ** ಎಂಬುವುದು **ಕಾಡಿಗೆ** ಎಂಬುದಾಗಿ ಬದಲಾಗಿದ್ದು, **ಇನ್** ಬಂದಿರುವುದು ಕಾಣಿಸುವುದಿಲ್ಲ.

ಮಳವಳ್ಳಿ ಕನ್ನಡದಲ್ಲಿ ಸ್ಥಳ, ಪ್ರಾರಂಭ ಮತ್ತು ಕೊನೆಗಳನ್ನು ತಿಳಿಸುವ ವಿಭಕ್ತಿ ಪ್ರತ್ಯಯಗಳು ಈ ರೀತಿಯ ಷಷ್ಠಿವಿಭಕ್ತಿಯ **ಅ** ಪ್ರತ್ಯಯದೊಂದಿಗೆ ಬರುವ ಬದಲು ನೇರವಾಗಿ ನಾಮಪದಕ್ಕೆ ಸೇರುವುದನ್ನು ದಾಖಲಿಸಬಹುದು.

**ಮಳವಳ್ಳಿ ಕನ್ನಡದ ವಿಭಕ್ತಿ ಪ್ರತ್ಯಯಗಳು**

| ಅ(ನ್ನು) | (ಇ)ಂದ | ಗೆ | ಷಷ್ಠಿ | (ಅ)ಲ್ಲಿ |
|---|---|---|---|---|
| ಮಗನ | ಮಗಂದ | ಮಗಂಗೆ | ಮಗನ | ಮಗನಲ್ಲಿ |
| ಕಾಡಿನ | ಕಾಡಿಂದ | ಕಾಡಿಂಗೆ | ಕಾಡಿನ | ಕಾಡಿಲ್ಲಿ |
| ಆಟವ | ಆಟಿಂದ | ಆಟಕ್ಕೆ | ಆಟದ | ಆಟಲ್ಲಿ |
| ಅದರ | ಅದರಿಂದ | ಅದಕ್ಕೆ | ಅದರ | ಅದರಲ್ಲಿ |

ಬರಹ ಕನ್ನಡದಲ್ಲಿ ಆಗಿರುವ ಬದಲಾವಣೆಗಳಿಗಿಂತ ಹೆಚ್ಚಿನ ಬದಲಾವಣೆಗಳು ಮಳವಳ್ಳಿ ಕನ್ನಡದಲ್ಲಿ ಆಗಿರುವುದೇ ಈ ರೀತಿ ಅದರ ಹೆಚ್ಚಿನ ನಾಮಪದಗಳಲ್ಲೂ ಸ್ಥಳ, ಪ್ರಾರಂಭ ಮತ್ತು ಕೊನೆ ಪ್ರತ್ಯಯಗಳು ಷಷ್ಠಿ ವಿಭಕ್ತಿಯ ಅ ಪ್ರತ್ಯಯದ ನಂತರ ಬರುವ ಬದಲು ನೇರವಾಗಿ ನಾಮಪದದೊಂದಿಗೆ ಬರುತ್ತವೆ ಎಂದು ಹೇಳುವುದಕ್ಕೆ ಕಾರಣವಿರಬಹುದು.

**೫.೭.ಪುರುಷಾರ್ಥಕಗಳು**

**ನಾನು** ಮತ್ತು **ನೀನು** ಎರಡು ಸರ್ವನಾಮಗಳು ವಾಕ್ಯದ ಉತ್ತಮ ಪುರುಷ ಮತ್ತು ಮಧ್ಯಮಪುರುಷ ಇವುಗಳನ್ನು ಆ ವಾಕ್ಯದ ಪ್ರಧಾನ ಪಾತ್ರವಾಗಿ ಬಳಸಬೇಕಾದಾಗ ಬಳಕೆಯಾಗುತ್ತವೆ.

**ಅವನು, ಅಲ್ಲಿ, ಈಗ,** ಇಲ್ಲಿ, ಇಷ್ಟು ಮೊದಲಾದ ಸರ್ವನಾಮ ಪದಗಳು **ವ್ಯಕ್ತಿ, ವಸ್ತು, ಸ್ಥಳ, ಸಮಯ, ಉದ್ದೇಶ** ಮೊದಲಾದುವನ್ನು ವಾಕ್ಯದ ಉತ್ತಮಪುರುಷನಿಗೆ ಸಂಬಂಧಿಸಿದಂತೆ ತಿಳಿಸುವುದಕ್ಕಾಗಿ ಮತ್ತು **ಯಾರು, ಎಲ್ಲಿ, ಯಾಕೆ,** ಎಷ್ಟು ಮೊದಲಾದ ಸರ್ವನಾಮ ಪದಗಳು ಅವು ಪ್ರಶ್ನಿಸುವುದಕ್ಕಾಗಿ, ಪ್ರಶ್ನೆಗಳಾಗಿ ಬಳಕೆಯಾಗುತ್ತವೆ.

ಮಳವಳ್ಳಿ ಕನ್ನಡದಲ್ಲಿ ಮತ್ತು ಹಳೆಗನ್ನಡದಲ್ಲಿ ಈ ಎರಡು ಬಗೆಯ ಪದಗಳು ಹೇಗಿವೆ ಮತ್ತು ಹೇಗೆ ಬಳಕೆಯಾಗುತ್ತವೆ ಎಂಬುದನ್ನು ಕಾಣಬಹುದು.

ಹಳೆಗನ್ನಡದಲ್ಲಿ **ಆನ್, ನೀನ್** ಮತ್ತು **ತಾನ್** ಎಂಬುದಾಗಿ ಮೂರು ಪುರುಷಾರ್ಥಗಳು ಬಳಕೆಯಲ್ಲಿದ್ದವು. ಇವು ವಾಕ್ಯದ ಉತ್ತಮ ಪುರುಷ, ಮಧ್ಯಮ ಪುರುಷ, ಪ್ರಥಮ ಪುರುಷ ಎಂಬ ವಾಕ್ಯಕ್ಕೆ ಸಂಬಂಧಿಸಿದ ಮೂರು ಬಗೆಯ ವ್ಯಕ್ತಿಗಳನ್ನು ಅದರ ಪ್ರಧಾನ ಪಾತ್ರಗಳನ್ನಾಗಿ ಮಾಡುವುದಕ್ಕಾಗಿ ಬಳಕೆಯಾಗುತ್ತಿದ್ದವು.

ಈ ಮೂರು ಪುರುಷಾರ್ಥಗಳಿಗೆ ಬಹುವಚನದಲ್ಲಿ **ಆಮ್, ನೀಮ್** ಮತ್ತು **ತಾಮ್** ಎಂಬ ರೂಪಗಳಿದ್ದವು. ಇವುಗಳಲ್ಲಿ **ಆಮ್** ಎಂಬುದಕ್ಕೆ ಉತ್ತಮ ಪುರುಷನೊಂದಿಗೆ ಮಧ್ಯಮ ಪುರುಷನನ್ನು ಹೊರತುಪಡಿಸಿ ಬೇರೆ ವ್ಯಕ್ತಿಗಳನ್ನು ಸೇರಿಸಿ ಹೇಳುವ ಅರ್ಥವಿತ್ತು.

ಉತ್ತಮ ಪರುಷನೊಂದಿಗೆ ಮಧ್ಯಮಪುರುಷನನ್ನೂ ಸೇರಿಸಿ ಹೇಳುವುದಕ್ಕಾಗಿ ಬಹುವಚನದಲ್ಲಿ **ನಾಮ್** ಎಂಬ ಬೇರೆಯೇ ಒಂದು ಪುರುಷಾರ್ಥ ಹಳೆಗನ್ನಡದಲ್ಲಿ ಬಳಕೆಯಲ್ಲಿತ್ತು. ಇದರ ಒಳರಚನೆಯಲ್ಲಿ ಮಧ್ಯಮಪುರುಷ ತಿಳಿಸುವ **ನಕಾರ**, ಉತ್ತಮಪುರುಷ ತಿಳಿಸುವ **ಆಕಾರ** ಮತ್ತು ಬಹುವಚನ ತಿಳಿಸುವ **ಮಕಾರ** ಎಂಬುವುದಾಗಿ ಮೂರು ಅಂಶಗಳು (ನ್+ಆ+ಮ್) ಒಟ್ಟಿಗೆ ಸೇರಿವೆಯೆಂದು ಹೇಳಲು ಬರುತ್ತದೆ.

ಹಳೆಗನ್ನಡದ ಆಡುಪದಗಳಲ್ಲಿ ಕಾಣಿಸುತ್ತಿದ್ದ ಈ ಅರ್ಥದ ಮೂಲ ಬರಹ ಕನ್ನಡದಲ್ಲಿ ಉಳಿದಿಲ್ಲ. ಈ ಮೂಲವನ್ನು ಕೆಳಗೆ ಕೊಟ್ಟಿರುವ ಪಂಪಭಾರತದ ವಾಕ್ಯಗಳಲ್ಲಿ ಕಾಣಬಹುದು.

೧. ಆಮ್ ಇರದೆ ಅಲ್ಲಿಗೆ ಪೋಪೆವು

ನಾವು ತಡ ಮಾಡದೆ ಅಲ್ಲಿಗೆ ಹೋಗುತ್ತೇವೆ

೨. ಬೇಡುವೊಡೆ ನೀವೆಮ್ಮಯ್ಯನಂ ಬೇಡಿರೇ

ನೀವು ಬೇಡುವುದಾದರೆ ನಮ್ಮ ತಂದೆಯನ್ನು ಬೇಡಿ

೩. ನಾಮ್ ಆಡುವಮೆ ಬನ್ನಿ

ನಾವು ಆಡೋಣವೇ? ಬನ್ನಿ

೪. ತೊಡರ್ದರ್ ನಮ್ಮಯ ಬಕ್ಕದೊಳ್

ನಮ್ಮ ಆಹಾರದಲ್ಲಿ ಸಿಕ್ಕಿಬಿದ್ದರು.

ಈ ವಾಕ್ಯಗಳಲ್ಲಿ **ಅಮ್, ಎಮ್** ಎಂಬುವು ಉತ್ತಮಪುರುಷನೊಂದಿಗೆ ಮಧ್ಯಮಪುರುಷನನ್ನು ಹೊರತುಪಡಿಸಿ ಉಳಿದವರನ್ನು ಸೇರಿಸಿ ಹೇಳಲು ಬಳಕೆಯಾಗಿವೆ ಮತ್ತು **ನಾಮ್** ಮತ್ತು **ನಮ್ಮ(ಯ)** ಎಂಬುವು ಉತ್ತಮ ಪರುಷನೊಂದಿಗೆ ಮಧ್ಯಮಪುರುಷನನ್ನೂ ಸೇರಿಸಿ ಹೇಳಲು ಬಳಕೆಯಾಗಿವೆ ಎಂಬುದನ್ನು ಗಮನಿಸಬಹುದು.

ಬರಹ ಕನ್ನಡದಲ್ಲಿ ಈ ಎರಡು ಕಡೆಗಳಲ್ಲೂ ನಾವು ಮತ್ತು ನಮ್ಮ ಎಂಬ ಪದಗಳೇ ಬಳಕೆಯಾಗುತ್ತವೆ ಎಂಬುದನ್ನು ಮತ್ತು ಹಳೆಗನ್ನಡ ವಾಕ್ಯಗಳಲ್ಲಿ ಬಂದಿರುವ ಬರಹ ಕನ್ನಡ ವಾಕ್ಯಗಳಲ್ಲಿ ಕಾಣಬಹುದು.

ಹಳೆಗನ್ನಡದ ಉತ್ತಮ ಪುರುಷ ಪದಗಳಲ್ಲಿದ್ದ ಈ ವ್ಯತ್ಯಾಸ ಮಳವಳ್ಳಿ ಕನ್ನಡದಲ್ಲಿ ಉಳಿದುಕೊಂಡಿದೆ ಮತ್ತು ಇದಕ್ಕಾಗಿ ಬಹುವಚನದಲ್ಲಿ **ಎಂಗೊ**(ಎಂಗಳ) ಮತ್ತು **ನಾಮು/ ನಾಮ್** (ನಮ್ಮ) ಎಂಬ ಎರಡು ಉತ್ತಮಪುರುಷ ಬಳಕೆಯಾಗುತ್ತದೆ ಎಂಬುದುನ್ನು ಕೆಳಗಿನ ವಾಕ್ಯಗಳಲ್ಲಿ ಕಾಣಬಹುದು.

೧. ಯಂಗೂ ಅಟ್ಗೆ ನಾಮು ಹೋತೀಮಿ

ನಾವು ಮನೆಗೆ ಹೋಗುತ್ತೇವೆ

೨. ನೀಮು ಇವತ್ತು ಊಟ್ಕೆ ನಮ್ ಅಟ್ಗೆ ಬರ್ಬೇಕರ

ನೀವು ಈವತ್ತು ಊಟಕ್ಕೆ ನಮ್ಮ ಮನೆಗೆ ಬರಬೇಕು

೩. ನಾಮು ಅಟ್ಗೆ ಓಮ

ನಾವು ಮನೆಗೆ ಹೋಗೋಣ

೪. ನಾಮು ಮೊದ್ಲು ನಮ್ ಅಟ್ಟಿನ ಸರಿ ಮಾಡುಮ

ನಾವು ಮೊದಲು ನಮ್ಮ ಮನೆಯನ್ನು ಸರಿ ಮಾಡೋಣ

ಈ ವಾಕ್ಯಗಳಲ್ಲಿ ಬಂದಿರುವ **ಯಂಗೂ** ಎಂಬ ಪದ ಉತ್ತಮಪುರುಷನೊಂದಿಗೆ ಮಧ್ಯಮನನ್ನು ಹೊರತುಪಡಿಸಿ ಬೇರೆ ವ್ಯಕ್ತಿಗಳನ್ನು ಸೇರಿಸಿ ತಿಳಿಸುತ್ತಿವೆ ಮತ್ತು **ನಾವು** ಮತ್ತು **ನಮ್ಮ** ಪದಗಳು ಉತ್ತಮಪರುಷನೊಂದಿಗೆ ಮಧ್ಯಮ ಪುರುಷನನ್ನೂ ಸೇರಿಸಿ ತಿಳಿಸುತ್ತಿವೆ.

ಹಳೆಗನ್ನಡದಲ್ಲಿ **ಆನ್** ಎಂಬುದರ ಅರ್ಥದಲ್ಲೇ **ನಾನ್** ಎಂಬುದೂ ಬಳಕೆಯಲ್ಲಿತ್ತು. ಬಹುವಚನದಲ್ಲಿ ಮಾತ್ರ **ಆಮ್** ಮತ್ತು **ನಾಮ್** ಎಂಬುವುಗಳ ನಡುವೆ ಮೇಲೆ ತಿಳಿಸಿದ ಹಾಗೆ ಅರ್ಥದ ಮೂಲ ಇತ್ತು.

## ೫.೮. ಸರ್ವನಾಮಗಳು

ಹಳೆಗನ್ನಡದಲ್ಲಿ ಉತ್ತಮ ಪುರುಷ ಬಳಿ–ಇವನ್, ಈಕೆ, ಇದು, ಇನಿತು, ಇಂತು ಮೊದಲಾದುವು

ಉತ್ತಮ ಪುರುಷನಿಂದ ದೂರ–ಅವನ್, ಆಕೆ, ಅದು, ಅನಿತು, ಅಂತು ಮೊದಲಾದುವು

ಈ ಎರಡು ಸ್ಥಳಗಳ ನಡುವೆ–ಉವನ್, ಊಕೆ, ಉದು, ಉನಿತು, ಉಂತು ಮೊದಲಾದುವು ಎಂಬುದಾಗಿ ಮೂರು ಬಗೆಯ ವ್ಯಕ್ತಿ, ವಸ್ತು, ಪ್ರಮಾಣ, ಸಮಯ, ಸ್ಥಳ ಮೊದಲಾದುವನ್ನು ತಿಳಿಸುವ ಸರ್ವನಾಮ ಪದಗಳು ಬಳಕೆಯಲ್ಲಿದ್ದುವು.

ಮಳವಳ್ಳಿ ಕನ್ನಡ ಕೆಲವು ವಿಷಯಗಳಲ್ಲಿ ಹಳೆಗನ್ನಡವನ್ನು ಹೋಲುತ್ತದೆ ಮತ್ತು ಇಂತಹ ವಿಷಯಗಳಲ್ಲಿ ಅದು ಇವತ್ತಿನ ಬರಹ ಕನ್ನಡಕ್ಕಿಂತ ಬೇರಾಗಿದೆ. ಆದರೆ ಬೇರೆ ಕೆಲವು ವಿಷಯಗಳಲ್ಲಿ ಅದು ಹಳೆಗನ್ನಡಕ್ಕಿಂತ ಬೇರಾಗಿದೆ. ಈ ವ್ಯತ್ಯಾಸಗಳಿಗೆ ಮಳವಳ್ಳಿ ಕನ್ನಡದಲ್ಲಷ್ಟೇ ನಡೆದ ಕೆಲವು ಬದಲಾವಣೆಗಳು ಕಾರಣ.

ಮಳವಳ್ಳಿ ಕನ್ನಡದಲ್ಲಿ ಇಮ, ಅಮ, ಅಮಿ, ಅದು– ನಾಮು, ನೀಮು, ಅವ್ರು, ಅವು ಮೊದಲಾದ ಸರ್ವನಾಮ ಪದಗಳು ಬಳಕೆಗೊಳ್ಳುತ್ತವೆ.

ಈ ಹೋಲಿಕೆಗಳು ಮತ್ತು ವ್ಯತ್ಯಾಸಗಳು ಎಂತಹವು ಎಂಬುದನ್ನು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ. ಇದಲ್ಲದೆ ಮಳವಳ್ಳಿ ಕನ್ನಡಕ್ಕೂ ಹಳೆಗನ್ನಡಕ್ಕೂ ನಡುವಿರುವ ಹೋಲಿಕೆಗಳು ಕಾಣಬಹುದು. ಈ ಹೋಲಿಕೆಗಳು ಬರಹ ಕನ್ನಡದಲ್ಲಿ ಇಲ್ಲದಿರುವುದನ್ನು ಕಾಣಬಹುದು. ಈ ವ್ಯಾತ್ಯಾಸಗಳು ಹಳೆಗನ್ನಡ ಮತ್ತು ಬರಹ ಕನ್ನಡಗಳ ನಡುವೆ ಇಲ್ಲದಿರುವುದನ್ನು ಈ ಒಂದು ಅಧ್ಯಾಯದಲ್ಲಿ ಕಾಣಬಹುದು.

# ಅಧ್ಯಾಯ-ಆರು

## ಮಳವಳ್ಳಿ ಪರಿಸರದ ನುಡಿಯಲ್ಲಿ ಕುಲಕಸುಬುಗಳ ಪ್ರತಿನಿಧೀಕರಣ

# ಅಧ್ಯಾಯ ಆರು

## ಮಳವಳ್ಳಿ ಪರಿಸರದ ನುಡಿಯಲ್ಲಿ ಕುಲಕಸುಬುಗಳ ಪ್ರತಿನಿಧೀಕರಣ

ಪ್ರತಿಯೊಂದು ಕುಲಕಸುಬಿಗೂ ತನ್ನದೇ ಆದ ಪದಕೋಶವಿದೆ. ಈ ಕುಲಕಸುಬುಗಳಲ್ಲಿ ಬಳಸುವ ಭಾಷೆ ಬಹಳ ವಿಶೇಷವಾದ ಬಳಕೆಯಾಗಿರುವುದನ್ನು ಗಮನಿಸಬಹುದು. ಕುಲಕಸುಬುಗಳಲ್ಲಿ ಬಳಕೆಯಲ್ಲಿರುವ ಪದಗಳೆಲ್ಲಾ ಗ್ರಾಮೀಣ ಪ್ರದೇಶದ, ಅಕ್ಷರಗೊತ್ತಿಲ್ಲದ, ಕುಲಕಸುಬಗಳನ್ನೆ ಅವಲಂಬಿಸಿ ಬದುಕುತ್ತಿರುವ ಜನರು ತಮ್ಮ ಆಡು ಮಾತಿನ ಭಾಷೆಗಳಲ್ಲಿ ಬಳಕೆಗೊಂಡಿರುವುದನ್ನು ಕಾಣಬಹುದು. ಇಲ್ಲಿ ಬಳಕೆಗೊಳ್ಳುವ ಭಾಷೆಯ ಪದಕೋಶಗಳ ಅರ್ಥವನ್ನು ಬರಹ ಕನ್ನಡದ ನಿಘಂಟಿನಲ್ಲಿ ಹುಡುಕಿದರೆ ದೊರೆಯುವುದಿಲ್ಲ. ಅದು ಆ ಸಮುದಾಯದ ಕುಲಕಸುಬುಗಳಲ್ಲಿ ಕಾಣಲು ಮಾತ್ರ ಸಾಧ್ಯ.

ಈ ಒಂದು ಅಧ್ಯಾಯದಲ್ಲಿ ಕುಲಕಸುಬುಗಳಲ್ಲಿ ಬಳಕೆಗೊಳ್ಳುವ ಪದ ರಚನೆಗಳನ್ನು ಭಾಷಿಕ ಹಿನ್ನೆಲೆಯಿಂದ ಚರ್ಚಿಸುವುದು ಬಹಳ ಪ್ರಮುಖವಾದ ಅಂಶ. ವಿವಿಧ ಜಾತಿಗಳಲ್ಲಿ ಬಳಕೆಯಲ್ಲಿರುವ ಕಸುಬುಗಳು ಆ ಜಾತಿಗಳ ಕುಲಕಸುಬಾಗಿ ರೂಢಿಯಲ್ಲಿರುವುದನ್ನು ಕಾಣಬಹುದು. ಕುಲಕಸುಬುಗಳಲ್ಲಿ ಬಳಕೆಗೊಳ್ಳುವ ಭಾಷೆ ಯಾವ ಬಗೆಯದು ಎಂಬುದನ್ನು ತಿಳಿಯಲಾಗಿದೆ.

ಕುಲಕಸುಬುಗಳ ಪದಸಂಗ್ರಹಣ ಮತ್ತು ವಿಶ್ಲೇಷಣಾಕಾರ್ಯ ಸಾಮಾಜಿಕ ದೃಷ್ಟಿಯಿಂದ ಬಹಳ ಪ್ರಮುಖವಾದುದು. ಆಧುನಿಕ ತಂತ್ರಜ್ಞಾನದ ಪ್ರಭಾವದಿಂದಾಗಿ ಕುಲಕಸುಬುಗಳು ಮತ್ತು ಅದರ ಭಾಷಿಕ ರಚನೆಗಳು ಬದಲಾಗುವ ಕಾರಣದಿಂದಾಗಿ ಪದಕೋಶಗಳ ಸಂಗ್ರಹ ಮತ್ತು ಭಾಷಿಕ ವಿಶ್ಲೇಷಣೆ ಬಹಳ ಪ್ರಮುಖವಾದುದು. ಇದರ ಮೂಲಕ ಈ ಸಮುದಾಯಗಳಲ್ಲಿ ಬಳಕೆಯಲ್ಲಿರುವ ವೃತ್ತಿಗೆ ಸಂಬಂಧಿಸಿದ ಪದಕೋಶಗಳ ಸಾಮಾಜಿಕ ಮತ್ತು ಸಾಂಸ್ಕೃತಿಕ ವಿಚಾರಗಳನ್ನು ತಿಳಿದುಕೊಂಡಂತಾಗುತ್ತದೆ.

ಮಳವಳ್ಳಿ ಪರಿಸರದಲ್ಲಿ ಬಳಕೆಯಲ್ಲಿರುವ ಮ್ಯಾದರು, ಕುಂಬಾರರು, ಬೆಸ್ತರು, ಈ ಮೂರು ಸಮುದಾಯಗಳಲ್ಲಿ ಬಳಕೆಯಲ್ಲಿರುವ ಪದಕೋಶಗಳ ಬಗೆಗೆ ಈ ಒಂದು ಅಧ್ಯಾಯದಲ್ಲಿ ಚರ್ಚಿಸಲಾಗುತ್ತದೆ. ಈ ಮೂರು ಸಮುದಾಯಗಳಲ್ಲಿ ಬಳಕೆಯಲ್ಲಿರುವ ಭಾಷಿಕ ರಚನೆ ಮತ್ತು ಪದಕೋಶಗಳ ವಿಶ್ಲೇಷಣೆಯನ್ನು ಕಾಣಬಹುದಾಗಿದೆ.

## ೬.೧. ಮ್ಯಾದರು

"ಮ್ಯಾದರಿಗೆ ಪರ್ಯಾಯವಾಗಿ ಮೇದರ್, ಮೇದರಿ, ಗೌರಿಗ, ಬುರುಡ ಮತ್ತು ಬುಡ್ಡರ್ ಎಂಬ ಪದಗಳು ಬಳಕೆಯಲ್ಲಿವೆ. ಇದನ್ನು ಕುರಿತು ಮುಂಬೈ ಕರ್ನಾಟಕದ ಗ್ಯಾಝೆಟಿಯರ್ ಹೀಗೆ ವರದಿ ಮಾಡಿದೆ. ಮೇದಾರರು ಇಲ್ಲವೇ ಬುರುಡರು ದೊಡ್ಡ ಹಳ್ಳಿಗಳಲ್ಲಿಯೂ ಪಟ್ಟಣಗಳಲ್ಲಿಯೂ ವಾಸಿಸುತ್ತಾರೆ. ಕಾನಡಾ ಜಿಲ್ಲೆಯಲ್ಲಿ ಘಟ್ಟದ ಮೇಲೆ ಮಾತ್ರ ಇರುತ್ತಾರೆ. ಇವರ ಮಾತೃಭಾಷೆ ಕನ್ನಡ.

ಮೇದರ ಐತಿಹಗಳ ಪ್ರಕಾರ ಮಹೇಂದ್ರ ಚಲದ ಮೂಲಿಗರೇ ಮಹೇಂದ್ರರಾಗಿ ಮೇದರಾಗುವರು. ಶಿವ ಗೌರಿ ಸಂತಾನವೇ ಗೌರಿಗರಾಗುವರು. ಆದರೆ ಗೌರಿಗರು ಮೂಲತಃ ಕವರಿಗರು. ಕವರಿಗರೆಂದರೆ ಬಿದಿರಿನ ಕಾಯಕದವರೆಂದು ಅರ್ಥ. ಮಹಾಭಾರತದ ವಿದುರನ ವಂಶಜರು ತಾವು ಎಂದು ಹೇಳುವರು. ಕನ್ನಡದ ಬಿದುರು ಪದ ಈ ಸಂಶಯಕ್ಕೆಡಮಾಡುವುದು. ಬಿದಿರಿನ ಉದ್ಯೋಗಿಗಳನ್ನೇ ಬುರುಡ, ಮಿಯಾದಾರ, ಮ್ಯಾದಾರ, ಮೇದರೆ, ಮೇದ, ಬೀದರು, ಮಿದರು, ಮೇದರ್, ಮೇದರಿ, ಗೌರಿಗ, ಬುಡ್ಡರ್ ಎಂಬೀ ಹೆಸರುಗಳಿಂದಲೂ ಕರೆಯಲಾಗುತ್ತಿದೆ.

ಮೇದ ಸಮುದಾಯವನ್ನು ೧೯೫೬ರ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಪರಿಷ್ಕೃತ ಆದೇಶ ಪರಿಶಿಷ್ಟ-೩, ಭಾಗ-೮ರ ಮೈಸೂರು ರಾಜ್ಯದ ಪಟ್ಟಿಯ ಕ್ರಮಸಂಖ್ಯೆ-೭, ೫ರ ಪ್ರಕಾರ ಕೊಡಗು ಜಿಲ್ಲೆಗೆ ಸೀಮಿತಗೊಂಡಂತೆ ಬುಡಕಟ್ಟು ಪಟ್ಟಿಗೆ ಸೇರಿಸಲಾಗಿದೆ."೧

ಮೇದರನ್ನು ಮಳವಳ್ಳಿ ಪರಿಸರದ ನುಡಿಯಲ್ಲಿ ಮ್ಯಾದ, ಮ್ಯಾದರು ಎಂದು ಕರೆಯಲ್ಪಡುತ್ತಾರೆ. ಮ್ಯಾದರು ಬಿದಿರಿನ ಸಾಧನಗಳನ್ನು ಅತಿ ಹೆಚ್ಚು ತಯಾರಿಸುವರು. ಬಿದಿರು ಇವರ ಕಸುಬಿನ ಮೂಲವಸ್ತುವಾಗಿ ಬಳಕೆಗೊಳ್ಳುವುದನ್ನು ಕಾಣಬಹುದು. ಬಿದಿರಿನ ಮೂಲಕ ವಿವಿಧ ಗೃಹ ಬಳಕೆಯ ವಸ್ತುಗಳನ್ನು ಈ ಸಮುದಾಯ ತಯಾರಿಸಿ ಮಾರಾಟಮಾಡುತ್ತಾರೆ. ಪ್ರಾರಂಭದ ದಿನಗಳಲ್ಲಿ ಈ ಸಮುದಾಯದ ಜನರು ಬಿದಿರಿನಿಂದ ತಯಾರಿಸಿದ ವಿವಿಧ ವಸ್ತುಗಳನ್ನು ದವಸ ಧಾನ್ಯಗಳಿಗೆ ಮಾರಾಟ ಮಾಡುತ್ತಿದ್ದರು. ನಂತರದ ದಿನಗಳಲ್ಲಿ ಇವರು ಹಣಕ್ಕೆ ಮಾರಾಟ ಮಾಡಿ ಬಂದ ಹಣದಿಂದ ತಮ್ಮ ಬದುಕನ್ನು ದೂಡುವ ಸ್ಥಿತಿ ಈ ಸಮುದಾಯದವರದಾಗಿದೆ. ಆಧುನಿಕ ಯಂತ್ರಗಳಿಂದಾಗಿ ಸಾಂಪ್ರದಾಯಿಕ ಕಸುಬಾದ ಮ್ಯಾದರ ವೃತ್ತಿಯು ಇಂದು ನಾಶದ ಹಂತದಲ್ಲಿರುವುದು ದುರಂತವಾಗಿದೆ.

ಮಳವಳ್ಳಿ ಪರಿಸರದ ಮ್ಯಾದರ ಸಮುದಾಯದಲ್ಲಿ ಬಳಕೆಗೊಳ್ಳುವ ವೃತ್ತಿ ಮೂಲ ಪದಕೋಶಗಳ ಬಳಕೆ ಮತ್ತು ವಿಶ್ಲೇಷಣೆಯನ್ನು ಈ ಅಧ್ಯಯದ ಬಹಳ ಪ್ರಮುಖವಾದ

ಉದ್ದೇಶವಾಗಿದೆ. ಮ್ಯಾದರ ಕುಲಕಸುಬಿನಲ್ಲಿ ಬಳಕೆಗೊಳ್ಳುವ ಪದಕೋಶವನ್ನು ಈ ರೀತಿಯಾಗಿ ಕಾಣಬಹುದಾಗಿದೆ.

ಮ್ಯಾದರು ತಯಾರಿಸುವ ವಸ್ತುಗಳಲ್ಲಿ ಎರಡು ವಿಧಗಳನ್ನು ಕಾಣಬಹುದಾಗಿದೆ. ಒಂದು ಗೃಹೋಪಯೋಗಿ, ಇನ್ನೊಂದು ಕಲೆಗಾರಿ ವಸ್ತುಗಳಾಗಿರುತ್ತವೆ. ಪ್ರಾರಂಭದ ಹಂತದಲ್ಲಿ ಗೃಹೋಪಯೋಗಿ ವಸ್ತುಗಳನ್ನು ಮಾತ್ರ ತಯಾರಿಸುತ್ತಿದ್ದ ಈ ಜನಾಂಗ ಗ್ರಾಹಕರನ್ನು ಸೆಳೆಯುವ ದೃಷ್ಟಿಯಿಂದ ಅವರ ಅಭಿರುಚಿಗೆ ತಕ್ಕಂತೆ ಕಲಾತ್ಮಕತೆಯ ವಸ್ತುಗಳನ್ನು ತಯಾರಿಸಲು ಮುಂದಾದರು ಎಂದು ಹೇಳುತ್ತಾರೆ. ಬಿದಿರಿನ ವಸ್ತುಗಳಿಗೆ ಆಧುನಿಕತೆಗೆ ತಕ್ಕಂತೆ ಕಲಾತ್ಮಕತೆ ನೀಡಿ ವಸ್ತುಗಳನ್ನು ಈ ಸಮುದಾಯ ತಯಾರಿಸುತ್ತಾರೆ.

ಈ ಸಮುದಾಯ ಬಿದಿರಿನ ಗಳ, ಬೆತ್ತ ಮತ್ತು ಅದರ ತೊಗಟೆಯಿಂದ ತಯಾಸಿರುವ ವಸ್ತುಗಳನ್ನು ಮಳವಳ್ಳಿ ಪರಿಸರದಲ್ಲಿ ಬಳಕೆಗೊಳ್ಳುವ ಪದಗಳನ್ನು ಈ ಕೆಳಕಂಡಂತೆ ಗಮನಿಸಬಹುದು. ಮಳವಳ್ಳಿ ಪರಿಸರದಲ್ಲಿ ಬಳಕೆಗೊಳ್ಳುವ ಪದಗಳಿಗೆ ಬರಹ ಕನ್ನಡದಲ್ಲಿ ಪರ್ಯಾಯವಾಗಿ ಯಾವ ಅರ್ಥದಲ್ಲಿ ಕರೆಯಲಾಗುತ್ತದೆ ಎಂಬುದನ್ನು ಉದಾಹರಣೆಗಳೊಂದಿಗೆ ಕಾಣಬಹುದು.

| **ಮಳವಳ್ಳಿ ಕನ್ನಡ** | **ಬರಹ ಕನ್ನಡ** |
| --- | --- |
| ಪುಟ್ಟೆ | ಬುಟ್ಟಿ |
| ಮೊರ | ಮೊರ |
| ತೊಟ್ಲು | ತೊಟ್ಟಿಲು |
| ಬಿಸ್ಣಗೆ | ಬೀಸಣಿಗೆ |

ಈ ರೀತಿಯಾದ ಬಳಕೆಯ ವ್ಯತ್ಯಾಸವನ್ನು ಗಮನಿಸಬಹುದಾಗಿದೆ. ಇದಲ್ಲದೆ ಇನ್ನೂ ಅನೇಕ ಪದಗಳನ್ನು ಈ ಪರಿಸರದಲ್ಲಿ ಬಳಸಲಾಗುತ್ತದೆ. ಅದಕ್ಕೆ ಬರಹ ಕನ್ನಡ ಅರ್ಥ ದೊರೆಯುವುದು ಕಷ್ಟ. ಆ ಪದಗಳ ಉದಾಹರಣೆಯನ್ನು ಕಾಣಬಹುದಾಗಿದೆ.

ಮಳವಳ್ಳಿ ಪರಿಸರದಲ್ಲಿ ಬಳಕೆಗೊಳ್ಳುವ ಮ್ಯಾದ ಸಮುದಾಯದ ಕುಲಕಸುಬಿನ ಪದಗಳ ಬಳಕೆಯ ಕ್ರಮ, ಅರ್ಥದ ನೆಲೆಗಳನ್ನು ಈ ಒಂದು ಅಧ್ಯಾಯದಲ್ಲಿ ಕೆಳಕಂಡಂತೆ ವಿವರಿಸಲಾಗಿದೆ.

**ಕುಕ್ಕೆ**–ಎಂಬ ವಸ್ತುವನ್ನು ರೇಷ್ಮೆ ಹುಳುವಿನ ಹಿಪ್ಪು ನೇರಳೆ ಸೊಪ್ಪನ್ನು ತುಂಬಲು ಮಳವಳ್ಳಿ ಪರಿಸರದಲ್ಲಿ ಬಳಸುತ್ತಾರೆ. ಕುಕ್ಕೆ ಎಂಬುದನ್ನು ಈ ಪರಿಸರದ ಜನರು ಬಳಸುತ್ತಾರೆ. ಮಳವಳ್ಳಿ ಪರಿಸರದ ಜನರು ಕುಕ್ಕೆ ಎಂದೇ ಬಳಸುವುದನ್ನು ಇಂದಿಗೂ ಕಾಣಬಹುದಾಗಿದೆ. ಈ ವಸ್ತುವು ಆಕಾರದಲ್ಲಿ ದಪ್ಪಗಿದ್ದು ತಳ ಭಾಗವು ಅಗಲವಾಗಿದ್ದು ಕತ್ತಿನ ಭಾವು ಚಿಕ್ಕದಾಗಿರುತ್ತದೆ.

**ಚಿಬ್ಲು**–ಚಿಬ್ಲು ಎಂಬ ವಸ್ತುವು ತಟ್ಟೆಯ ಆಕಾರವನ್ನು ಹೊಂದಿದ್ದು ಮೇಲ್ಭೈ ಭಾಗವು ಉದ್ದನೆಯ ಆಕಾರವನ್ನು ಹೊಂದಿರುತ್ತದೆ. ಅದನ್ನು **ಒಟ್ಟಿ** ಎಂಬ ಶಬ್ಧದಿಂದ ಮಳವಳ್ಳಿ ಪರಿಸರದ ಜನರು ಕರೆಯುವರು. ಈ ಚಿಬ್ಲನ್ನು ರೇಷ್ಮೆ ಹುಳುವನ್ನು ತುಂಬಿ ಚಂದ್ರಿಕೆಗೆ ಬಿಡಲು ಇಂದಿಗೂ ಬಳಸಲಾಗುತ್ತದೆ.

**ಬುಜಂಣ್ಗೆ ಪೆಟ್ಟಿ**–ಬುಜಂಣ್ಗೆ ಪೆಟ್ಟಿಯು ಕೊಳಗದ ಆಕಾರದಲ್ಲಿ ಇರುತ್ತದೆ. ಮೇಲೆ ಮುಚ್ಚಳ ಇರುತ್ತದೆ. ಇದನ್ನು ಮದುವೆ ಮನೆಯಲ್ಲಿ, ದೇವರ ಕಾರ್ಯಗಳಲ್ಲಿ ಬಟ್ಟೆ, ಒಡವೆ ಇತ್ಯಾದಿ ವಸ್ತುಗಳನ್ನು ಇಟ್ಟು ಮೆರವಣಿಗೆಯ ಮೂಲಕ ಅದನ್ನು ಮದುಮಗನಿಗೆ ಮತ್ತು ದೇವಾಲಯಕ್ಕೆ ತಲುಪಿಸುತ್ತಾರೆ. ಈ ಪೆಟ್ಟಿಗೆಯು ಬಣ್ಣದಿಂದ ಅಲಂಕಾರಗೊಂಡಿರುತ್ತದೆ.

**ಪೆಟ್ಟಿ**–ಪೆಟ್ಟಿಯನ್ನು ಬಟ್ಟೆ ತುಂಬಿ ಇಟ್ಟಿಕೊಳ್ಳಲು ಬಳಸುತ್ತಾರೆ. ಇದು ಉದ್ದನೆಯ ಆಕಾರವನ್ನು ಹೊಂದಿರುತ್ತದೆ. ಅಡ್ಡ ಅಳತೆ ಮಧ್ಯಮವಾಗಿದ್ದು ಮೇಲೆ ಮುಚ್ಚುವ ಮುಚ್ಚಳವನ್ನು ಹೊಂದಿರುತ್ತದೆ.

**ಚಂದ್ರಿಕೆ**–ಚಂದ್ರೈಯನ್ನು ರೇಷ್ಮೆ ಹುಳುಗಳನ್ನು ಬಿಡಲು ಬಳಸುತ್ತಾರೆ. ಇದು ಚೌಕಾರದ ರೂಪವನ್ನು ಹೊಂದಿದ್ದು, ಇದರ ಮೇಲ್ಭೈ ಭಾಗದಲ್ಲಿ ವೃತ್ತಾಕಾರದಲ್ಲಿ ಜೇಡರ ಬಲೆಯ ರೂಪದ ತಟ್ಟಿಗೆಯನ್ನು ಕಟ್ಟಲಾಗಿರುತ್ತದೆ. ಇವುಗಳ ಮಧ್ಯೆ ರೇಷ್ಮೆ ಹುಳುಗಳನ್ನು ಬಿಡುತ್ತಾರೆ. ಹುಳುಗಳು ಸರಾಗವಾಗಿ ಗಾಳಿ, ಬೆಳಕಿನ ಮೂಲಕ ಗೂಡುಕಟ್ಟಲು ಸಹಾಯಕವಾಗುತ್ತದೆ.

**ತಟ್ಟಿ**–ಇದು ರೇಷ್ಮೆ ಹುಳುಗಳನ್ನು ಮರಿಯಿಂದ ಹಣ್ಣಾಗುವ ವರೆಗೆ ಬೆಳೆಸಲು ಬಳಸುತ್ತಾರೆ. ಇದು ಬೃಹತ್ತಾದ ತಟ್ಟೆಯ ಆಕಾರವನ್ನು ಹೊಂದಿರುತ್ತದೆ. ಇದನ್ನು ಹಸುವಿನ ತೊಪ್ಪೆಯಿಂದ ತಾರಿಸಿ, ಒಣಗಿಸಿ ಬಳಸಲಾಗುತ್ತದೆ. ಇದು ತಟ್ಟೆ ಆಕಾರದ ಸಾಧನವಾಗಿರುವುದರಿಂದ ಈ ಪ್ರದೇಶದ ಜನರ ಬಾಯಲ್ಲಿ ಇದು ತಟ್ಟಿ ಆಗಿದೆ. ಕಾರಣ ಇದನ್ನು ಬಳಸುವಾಗು ಇಲ್ಲಿಯ ಜನರು ಆಕಾರ ಮತ್ತು ಬಳಕೆಗನುಗುಣವಾಗಿ ಈ ಪದ

ಬಳಸುತ್ತಾರೆ. ಈ ತಟ್ಟಿಯನ್ನು ಬಳಸುವಾಗ ತಟ್ಟಿ ತಟ್ಟಿ ಬಳಸುತ್ತಾರೆ. ಇದೊಂದು ಕ್ರಿಯೆಯಾಗಿದ್ದು ತಟ್ಟುವಿಕೆ ಎಂದು ಕರೆಯಲಾಗುತ್ತದೆ.

**ಮಂಕ್ರಿ**–ಇದನ್ನು ಇಂದಿಗೂ ಎಲ್ಲಾ ಪ್ರದೇಶಗಳಲ್ಲೂ ಬಳಸುವುದನ್ನು ಕಾಣಬಹುದು. ಮಂಕ್ರಿಯನ್ನು ಮನೆಯ ಕಸ, ಕೊಟ್ಟಿಗೆಯ ಸೆಗಣಿ, ಗೊಬ್ಬರವನ್ನು ಹೊಲ–ಗದ್ದೆಗಳಿಗೆ ಎರಚುವಾಗ ಬಳಸಲಾಗುತ್ತದೆ. ಅದಷ್ಟೆ ಅಲ್ಲದೆ, ಮದುವೆ ಮನೆಗಳಲ್ಲಿ ಅನ್ನ, ಮುದ್ದೆ ಇತ್ಯಾದಿ ಪದಾರ್ಥಗಳನ್ನು ಬಡಿಸುವಾಗ ಬಳಸಲಾಗುತ್ತದೆ. ಇದು ಬಿದಿರಿನ ಕಡ್ಡಿಗಳಿಂದ ಏಣೆಯಲ್ಪಟ್ಟ ವಸ್ತುವಾಗಿದೆ. ಸಭೆ ಸಮಾರಂಭಗಳಲ್ಲಿ ಅನ್ನವನ್ನು ಬಸಿಯಲೂ ಇದನ್ನು ಬಳಸಲಾಗುತ್ತದೆ. ವ್ಯವಸಾಯದ ಸಂದರ್ಭದಲ್ಲಿ, ಮಣ್ಣು ತುಂಬಲು ಬಹು ಉಪಯೋಗಿ ವಸ್ತುವಾಗಿ ಬಳಕೆಯಾಗುವುದನ್ನು ಕಾಣಬಹುದು.

**ಪಂಜ್ರ**–ಪಂಜರ ಪದವು ಮಳವಳ್ಳಿ ಪರಿಸರದಲ್ಲಿ ಪಂಜ್ರವಾಗಿ ಬಳಕೆಗೊಳ್ಳುವುದನ್ನು ಕಾಣಬಹುದು. ಇದು ಬಿದಿರಿನ ಕಡ್ಡಿಗಳಿಂದ ನಿರ್ಮಿತವಾಗಿರುತ್ತದೆ. ಪಂಜರದಲ್ಲಿ ಕೋಳಿಗಳನ್ನು ಕೂಡಿಡಲು ಬಳಸುತ್ತಾರೆ. ಇದು ಉದ್ದನೆಯ ಗೊಪ್ಪೆಯಾಕಾರವನ್ನು ಹೊಂದಿದ್ದು ಇದರ ಸುತ್ತ ಗಾಳಿ ಬೆಳಕಿಗೆ ಚಿಕ್ಕ ಚಿಕ್ಕ ಚೌಕಾಕಾರದ ಮನೆಗಳನ್ನು ಬಿಟ್ಟಿರಲಾಗಿರುತ್ತದೆ. ತಳಭಾಗವು ವೃತ್ತಾಕಾರವಾಗಿದ್ದು, ಮೇಲ್ಭಾಗವು ಮುಚ್ಚಲ್ಪಟ್ಟಿರುತ್ತದೆ. ಮೇಲ್ಭಾಗದಲ್ಲಿ ವೃತ್ತಾಕಾರದ ಮೊಣಚು ಆಕೃತಿಯನ್ನು ಹೊಂದಿರುತ್ತದೆ.

**ತೊಂಬೆ**–ಇದು ಮನುಷ್ಯರ ಎತ್ತರವನ್ನು ಹೊಂದಿದ್ದು, ಆಕಾರದಲ್ಲಿ ದೊಡ್ಡಾಗಿರುತ್ತದೆ. ಇದನ್ನು ಧಾನ್ಯಗಳನ್ನು ಸಂಗ್ರಹಿಸಿಡಲು ಬಳಸುತ್ತಾರೆ. ಇದರ ಹೊಟ್ಟೆಯ ಭಾಗದಲ್ಲಿ ಅಗಲವಾದ ಆಕಾರವನ್ನು ಹೊಂದಿದ್ದು ಮುಂದೆ ಚಿಕ್ಕ ಆಕಾರವನ್ನು ಹೊಂದಿರುತ್ತದೆ. ಅಂದಿನ ದಿನಗಳಲ್ಲಿ ಆಹಾರ ಧಾನ್ಯಗಳನ್ನು ಸಂಗ್ರಹಿಸಿಡಲು ಬಳಸುತ್ತಿದ್ದ ಅತಿ ದೊಡ್ಡ ಸಾಧನವಾಗಿತ್ತು.

**ಯಡ್ಗೆ**–ಇದು ವೃತ್ತಾಕಾರ ಮತ್ತು ಚೌಕಾಕಾರದ ಎರಡು ರೂಪಗಳನ್ನು ಹೊಂದಿದ್ದು. ಮೇಲಿನ ಭಾಗವು(ಬಾಯಿ) ಸಮತಟ್ಟಾದ ಅಳತೆಯನ್ನು ಹೊಂದಿರತ್ತದೆ. ಇದನ್ನು ದೇವಾಲಯಗಳಿಗೆ ಪೊಜೆ ಮಾಡಲು ಹೊಸ ಯಡ್ಗೆಯನ್ನು ಬಳಸುತ್ತಾರೆ. ಇದರಲ್ಲಿ ಪೂಜಾ ಸಾಮಾಗ್ರಿಗಳನ್ನು ಇಟ್ಟು ದೇವಾಲಯಕ್ಕೆ ತೆಗೆದುಕೊಂಡು ಹೋಗುತ್ತಾರೆ.

**ಕೊಟ್ಟ**–ಇದು ಬಿದಿರಿನ ಒಂದು ಸಾಧನ. ಇದನ್ನು ಹಸು, ಕರು, ಮೇಕೆ, ಕುರಿಗಳಿಗೆ ಔಷಧಿಯನ್ನು ಕುಡಿಸಲು ಬಳಸುತ್ತಾರೆ. ಇದು ಬಿದಿರಿನ ಕೊಳಬೆಯಾಗಿರುತ್ತದೆ. ಇದರ ಮೂತಿಯು ಚೂಪಾಗಿರುತ್ತದೆ.

**ಬೆಂಡುಕ್ಕೆ**–ಅಗಲವಾದ ಆಕಾರವನ್ನು ಹೊಂದಿದ್ದು ಚಿಕ್ಕದಾದ ಬಾಯಿಂದ ಕೂಡಿರುತ್ತದೆ. ಇದನ್ನು ದೇವಾಲಯಗಳಿಗೆ ಪೂಜಾ ಸಾಮಗ್ರಿಗಳನ್ನು ಕೊಂಡೊಯ್ಯಲು ಬಳಸುತ್ತಾರೆ.

**ಮೂಡೆ**–ಕಾಳುಗಳನ್ನು ಸಂಗ್ರಹಿಸಿಡಲು ಇದನ್ನು ಬಳಸಲಾಗುತ್ತದೆ. ಇದು ದುಂಡನೆಯ ಆಕಾರವನ್ನು ಹೊಂದಿರುತ್ತದೆ.

**ಕೊಂಗ**–ಇದು ರಾಗಿ, ಭತ್ತ, ಇತರ ಧಾನ್ಯಗಳನ್ನು ತೂರಲು ಬಳಸುವ ಸಾಧನ. ಇದು ಮಲೆನಾಡಿನಲ್ಲಿ ತಲೆಗೆ ಇಳಿಬಿಟ್ಟ ಗೌನಿನ ಆಗಿರುತ್ತದೆ. ಬಿದಿರಿನ ಅಚ್ಚೆಯಲ್ಲಿ ತಯಾರಿಸುತ್ತಾರೆ.

**ಮೆರೆ**–ಇದು ಉದ್ದನೆಯ ಬಿದಿರಿನ ದೊಣ್ಣೆಯಾಗಿದ್ದು ಇದರ ತುದಿ ಭಾಗದಲ್ಲಿ ಬಾಗಿದ ರೀತಿ ಕೊಂಬನ್ನು ಬಿಟ್ಟಿರುತ್ತಾರೆ. ಮೂತಿಯ ತುದಿಯಲ್ಲಿ ಉಲ್ಲನ್ನು ಎತ್ತಲು ಈ ಬಿದಿರಿನ ದೊಣ್ಣೆಯನ್ನು ಬಳಸುತ್ತಾರೆ.

### ೬.೨. ಬೆಸ್ತರು

ಕಸುಬುಗಳು ಅಂದಿನ ಕಾಲದ ಜನರ ಬದುಕಿನ ಒಂದು ಭಾಗವಾಗಿತ್ತು. ಅದು ಆ ಕಸುಬನ್ನು ನಂಬಿಕೊಂಡಿದ್ದ ಜನರ ಜೀವನಾಡಿಯಾಗಿ ಆ ಸಮುದಾಯದ ಜನರ ಬದುಕಿನ ಆಧಾರಸ್ತಂಭವಾಗಿತ್ತು. ಭಾರತ ದೇಶವು ಅನೇಕ ಸಮುದಾಯಗಳ, ಕಸುಬುಗಳ, ಸಂಸ್ಕೃತಿಯ ವೈವಿಧ್ಯ ದೇಶ. ಆದರೆ ಪಾರಂಪರಿಕ ಕಸುಬುಗಳಾವುವು ಇಂದು ತಮ್ಮ ಮೂಲ ರೂಪವನ್ನು ಉಳಿಸಿಕೊಂಡಿಲ್ಲ. ಅವು ಬಂಡವಾಳಗಾರನ ಕೈಮುಷ್ಟಿಗೆ ಸಿಲುಕಿ ತನ್ನ ಅಸ್ತಿತ್ವವನ್ನು ಕಳೆದುಕೊಂಡು ಇಂದು ಬದಲಿ ರೂಪದಲ್ಲಿ ಇರುವುದನ್ನು ಕಾಣಬಹುದು. ಆ ಕಸುಬುಗಳನ್ನು ಅವಲಂಬಿಸಿಕೊಂಡು ಬದುಕುತ್ತಿದ್ದ ಜನರ ಬದುಕು ಬೀದಿಪಾಲಾಗಿರುವುದು ದುರಂತ. ಮೂಲ ಕಸುಬುಗಳು ಆ ಜನಾಂಗದವರ ಹಿಡಿತ ತಪ್ಪಿ ಬಂಡವಾಳಗಾರರ ಕೈಗೆ ಸಿಲುಕಿ ಅದು ತನ್ನ ಮೂಲ ಸ್ವರೂಪವನ್ನು ಕಳೆದುಕೊಂಡಿದೆ.

ಇತ್ತ ಕಸುಬೆ ತನ್ನ ಜೀವನವೆಂದು ಬದುಕುತ್ತಿದ ಒಂದಷ್ಟು ಜನಾಂಗ ಮೂಲ ಕಸುಬುಗಳಿಂದ ದೂರ ಉಳಿದು, ಇನ್ನೊಂದಷ್ಟು ಜನರು ಬಂಡವಾಳಗಾರರ ಹಿಡಿತಕ್ಕೆ ಸಿಲುಕಿ ಅವರ ಸೂತ್ರದ ಬೊಂಬೆಗಳಂತೆ ನಟಿಸುತ್ತಿರುವುದು ವಿಪರ್ಯಾಸ. ಇನ್ನೊಂದಷ್ಟು ಸಮುದಾಯ ಪರ್ಯಾಯ ಕೆಲಸಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಬದುಕನ್ನು ನೂಕುತ್ತಿರುವುದು ವಾಸ್ತವದ ಸಂಗತಿಯಾಗಿದೆ.

ಅನೇಕ ಕಸುಬುಗಳಲ್ಲಿ ಮೀನುಹಿಡಿಯುವುದು ಒಂದು ಕಸುಬು. ಅದು ಒಂದು ಜನಾಂಗದ ಬದುಕಿನ ಭಾಗವಾಗಿ ಬಂದಿರುವುದು ನಮಗೆಲ್ಲ ತಿಳಿದ ಸಂಗತಿ. ಬೇಟೆ ಆದಿ ಮಾನವನ ಸ್ಥಿತಿಯಲ್ಲಿ ಆಹಾರ ಪ್ರಧಾನವಾದ ಕಸುಬಾಗಿತ್ತು. ಇದು ಅನಂತರದಲ್ಲಿ ನೀರಿನಲ್ಲಿ ಮೀನನ್ನು ಬೇಟೆಯಾಡುವ ಹವ್ಯಾಸವನ್ನು ರೂಢಿಸಿಕೊಂಡಿದ್ದಾರೆ. ಇನ್ನೂ ಮುಂದೆ ಹೋದಂತೆ ಅದು ಆದಾಯದ ಹಾಗೂ ವ್ಯವಹಾರದ ಉದ್ಯಮವಾಗಿ ಬದಲಾಗಿರುವುದನ್ನು ಕಾಣಬಹುದು. ಈ ಕಸುಬು ಅಷ್ಟೇ ಪ್ರಾಚೀನವಾದ ಕಸುಬು ಎಂಬುವುದರ ಬಗ್ಗೆ ಯಾವುದೇ ಸಂಶಯವಿಲ್ಲ. ಈ ಕಸುಬೆ ಮುಂದೆ ಇವರ ಜೀವನದ ಆಹಾರ, ಆದಾಯ ಎಲ್ಲವೂ ಆದ್ದರಿಂದ ಅದು ಆ ಸಮುದಾಯದ ಜೀವನಾಡಿಯಾಯಿತು.

ಮೀನನ್ನು ಹಿಡಿದು ಬದುಕು ನಡೆಸುವ ಸಮುದಾಯಕ್ಕೆ ಬೆಸ್ತರು ಎನ್ನುವರು. ಈ ಸಮುದಾಯಕ್ಕೆ ಇನ್ನೂ ಅನೇಕ ಹೆಸರುಗಳಿಂದ ಆಯಾಯ ಪ್ರಾಂತ್ಯಗಳಿಗೆ ಅನುಗುಣವಾಗಿ ಬದಲಿ ಹೆಸರುಗಳಿಂದು ಕರೆಯುವುದು ರೂಢಿಯಲ್ಲಿದೆ. ಬೆಸ್ತರು ಎಂದ ತಕ್ಷಣ ನೆನಪಿಗೆ ಬರುವುದು ಅವರು ಮಾಡುವ ವೃತ್ತಿ. ಆ ವೃತ್ತಿಯಿಂದಾಗಿಯೆ ಆ ಸಮುದಾಯದ ಜನಾಂಗವನ್ನು ಗುರ್ತಿಸಲಾಗುತ್ತದೆ. ಈ ಸಮುದಾಯದ ಜನಾಂಗವು ತನ್ನ ಮೂಲ ನೆಲೆಯನ್ನು ರಾಮಾಯಣ, ಮಹಾಭಾರತ ಮುಂತಾದ ಪುರಾಣಗಳ ಚರಿತ್ರೆಯಾಚೆಗೆ ತಮ್ಮ ಸಮುದಾಯದ ಚರಿತ್ರೆಯನ್ನು, ಅದರ ಪ್ರಾಚೀನತೆಯನ್ನು ಗುರುತಿಸಿಕೊಳ್ಳತ್ತಾರೆ.

ಈ ಸಮುದಾಯದ ಜನರು ಪ್ರಾರಂಭದ ಹಂತದಲ್ಲಿ ಒಂದು ರೀತಿಯ ಅಲೆಮಾರಿ ಸಮುದಾಯ ಎಂದರೆ ತಪ್ಪಾಗಲಾರದು. ಯಾಕೆಂದರೆ ನದಿ, ಸಮುದ್ರ, ಹೊಳೆ, ಕೆರೆಗಳು ಇವರ ವೃತ್ತಿಯ ಮೂಲಗಳಾಗಿತ್ತು, ಆದ್ದರಿಂದ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆ ಹೋಗುವುದು ಅನಿವಾರ್ಯವಾಗಿತ್ತು. ಈ ಪ್ರದೇಶಗಳಲ್ಲಿ ಬೆಸ್ತ ಸಮುದಾಯದ ಜನರ ನೆಲೆಗಳನ್ನು ಕಾಣಬಹುದು. ಇಂದು ಈ ಸಮುದಾಯದ ಜನರು ವಾಸಿಸುತ್ತಿರುವ ಭೌಗೋಳಿಕ ಸಮೀಕ್ಷೆಯನ್ನು ನೋಡಿದಾಗ ಅದು ತಿಳಿಯುತ್ತದೆ. ನದಿ ಹಂಚಿನಲ್ಲಿ ಇಂದು ಈ ಸುಮುದಾಯದ ಜನಾಂಗ ನೆಲೆಸಿರುವುದನ್ನು ಕಾಣಬಹುದು.

ಆಧುನಿಕತೆಯ ಪ್ರಭಾವದಿಂದಾಗಿ ಈ ಸಮುದಾಯದ ಜನರ ಕಸುಬು ಇಂದು ಆ ಜನಾಂಗದ ಕಸುಬಾಗಿ ಉಳಿದಿಲ್ಲ. ಬಂಡವಾಳಗಾರರ ಹಿಡಿತದಿಂದಾಗಿ ಆ ಸಮುದಾಯದ ಜನರೆ ತಮ್ಮ ಕಸುಬಿನ ಬಗೆಗೆ ಗೌರವ ಕಳೆದುಕೊಳ್ಳುವ ಪರಿಸ್ಥಿತಿಯನ್ನು ನಿರ್ಮಾಣ ಮಾಡಿದ್ದಾರೆ. ಈ ಆಧುನಿಕತೆ ಮತ್ತು ಬಂಡವಾಳಶಾಹಿ ಧೋರಣೆ ಮೀನು ಹಿಡಿಯುವ ಕಸುಬು ಇಂದು

ಕಸುಬಾಗಿ ಉಳಿಯದೆ ಅದು ಒಂದು ಉದ್ಯಮವಾಗಿ ಬೆಳೆದು ನಿಂತಿರುವುದು ಆ ಜನಾಂಗದ ಬದುಕನ್ನೆ ನಾಶಮಾಡುವ ಸ್ಥಿತಿಗೆ ತಲುಪಿದೆ. ತನ್ನ ಮನೆಯೊಳಗೆ ತನ್ನ ನೆಲೆಯನ್ನು ಕಳೆದುಕೊಳ್ಳುವ, ತನ್ನ ಅಸ್ತಿತ್ವಕ್ಕಾಗಿ ಹುಡುಕಾಟ ನೆಡೆಸುವ ಸ್ಥಿತಿಗೆ ತಂದು ನಿಲ್ಲಿಸಿರುವುದು ಈ ಕಾಲದ ದುರಂತ.

ನದಿ, ಹೊಳೆ, ಕೆರೆ, ಕಟ್ಟೆಗಳಲ್ಲಿ ಯಾರ ಹಂಗೂ ಇಲ್ಲದೆ ಸ್ವತಂತ್ರವಾಗಿ ಮೀನು ಹಿಡಿಯುವ ಹಕ್ಕನ್ನು ಬೆಸ್ತ ಸಮುದಾಯದ ಜನರು ಹೊಂದಿದ್ದರು. ಯಾರೂ ಅದಕ್ಕೆ ಅಡ್ಡಿಯನ್ನಾಗಲಿ, ಪರವಾನಗಿಯನ್ನಾಗಲಿ, ಶುಲ್ಕವನ್ನಾಗಲಿ ತೆರುವ ಅಗತ್ಯವಿರಲಿಲ್ಲ. ಆದರೆ ಇಂದು ಮೀನು ಹಿಡಿಯುವ ಕಸುಬು  ಆ ರೀತಿಯಾಗಿ ಉಳಿದಿಲ್ಲ. ಎಲ್ಲದಕ್ಕೂ ಹಣ ತೆರುವ, ಪರವಾನಗಿ ಪಡೆಯುವ ಕಾಲಘಟ್ಟಕ್ಕೆ ಬಂದು ತಲುಪಿದ್ದೇವೆ. ಇದಿಲ್ಲದೆ ಯಾರು ತಮ್ಮ ಕಸುಬುಗಳನ್ನು ಮಾಡುವಂತಿಲ್ಲದ ಸ್ಥಿತಿಯನ್ನು ತಂದೊಡ್ಡಿದ್ದಾರೆ. ಇದು ಆ ಸುಮುದಾಯಗಳನ್ನು, ಅವರ ಕಸುಬುಗಳನ್ನು ಸಮಾಜದಿಂದ ದೂರವಿರಿಸುವ ಒಂದು ಹುನ್ನಾರ.

ಕೇವಲ ಮೀನು ಹಿಡಿದು ಅದನ್ನು ಒಂದು ವೃತ್ತಿಯಾಗಿ ಅಷ್ಟೆ ಬದುಕುತ್ತಿದ್ದ ಜನಾಂಗಕ್ಕೆ ಅದು ಮುಂದೊಂದು ದಿನ ಉದ್ಯಮವಾಗಿ ಅಂತರಾಷ್ಟ್ರೀಯ ಮಟ್ಟದಲ್ಲಿ ಲಾಭವನ್ನುಂಟುಮಾಡುವ ವೃತ್ತಿಯಾಗುತ್ತದೆ ಎಂದು ಯಾವತ್ತು ಕನಸು ಕಂಡಿರಲಿಲ್ಲ. ಆದರೆ ಇಂದು ಮತ್ಸೋದ್ಯಮ ತಂದು ಕೊಡುತ್ತಿರುವ ಬಂಡವಾಳ ದೇಶದ ಆದಾಯದ ಮೂಲಗಳಲ್ಲಿ ಪ್ರಮುಖವಾದುದು. ರಾಷ್ಟ್ರದ ಒಟ್ಟು ಉತ್ಪಾದನೆಯಲ್ಲಿ ಶೇಕಡ ೫.೮ ರಷ್ಟು ಮತ್ಸೋದ್ಯಮದ ಆದಾಯವಾಗಿದೆ. ಯಾವಾಗ ಮೀನುಗಾರಿಕೆಯನ್ನೆ ತಮ್ಮ ವೃತ್ತಿಯಾಗಿ ನಂಬಿಕೊಂಡು ಬದುಕಿದ್ದ ಜನಾಂಗ ಅದರಿಂದ ವಂಚಿಸಲ್ಪಟ್ಟರೊ ಕ್ರಮೇಣ ಅನೇಕ ಜನರು ಆ ವೃತ್ತಿಯಿಂದ ದೂರ ಸರಿಯಲಾರಂಭಿಸಿದರು. ಆದರೆ ಇಂದಿಗೂ ಎಷ್ಟೋ ಜನ ಆ ವೃತ್ತಿಯನ್ನು ನಂಬಿಕೊಂಡು ಬದುಕುವುದನ್ನು ಕಾಣಬಹುದು.

ಹಣ ಇರುವ ಬಂಡವಾಳಗಾರರು ಲಕ್ಷಾಂತರ ರೂಪಾಯಿಗಳಿಗೆ ಕೆರೆ, ನದಿಗಳನ್ನು ಗುತ್ತಿಗೆ ತೆಗೆದುಕೊಂಡು ಮೀನು ಸಾಕಾಣಿಕೆ ಮಾಡುತ್ತಾರೆ. ಆರ್ಥಿಕವಾಗಿ ಹಿಂದುಳಿದಿರುವ ಈ ಸಮುದಾಯದ ಯಾವ ವ್ಯಕ್ತಿಯಿಂದಲೂ ಗುತ್ತಿಗೆ ಪಡೆಯುವ ಸಾಹಸಕ್ಕೆ ಪ್ರಯತ್ನಿಸಿಲ್ಲ. ಅಷ್ಟು ಹಣವನ್ನು ತೊಡಗಿಸುವ ಸಾಮರ್ಥ್ಯ ಈ ಸಮುದಾಯಕ್ಕೆ ಎಲ್ಲಿ ಸಿಗಬೇಕು. ಲಕ್ಷಾಂತ ರೂಪಾಯಿ ಹೂಡಿಕೆ ಮಾಡಿದ ಮಾಲೀಕನ ಬಳಿ ಈ ಸಮುದಾಯದ ಜನ ಜೀತದಾಳುಗಳಾಗಿ

ದುಡಿಯಬೇಕು. ಮಾಲೀಕರು ಕೊಡುವ ಸಂಬಳಕ್ಕೆ ತಾವು ಪರಂಪರೆಯಿಂದ ಕಲಿತ ಕಸುಬನ್ನು ಮಾರಿಕೊಂಡು ಬದುಕುವ ಸ್ಥಿತಿಗೆ ತಂದು ನಿಲ್ಲಿಸಿರುವ ಈ ಆಧುನಿಕತೆಗೆ ನಾವೆಲ್ಲರೂ ಧಿಕ್ಕಾರ ಕೂಗಲೇ ಬೇಕು. ಲಕ್ಷಾಂತರ ರೂಪಾಯಿಗಳನ್ನು ನೀಡಿ ಗುತ್ತಿಗೆ ತೆಗೆದುಕೊಳ್ಳುವ ಸಾಮರ್ಥ್ಯ ಆ ಸಮುದಾಯದ ಜನಾಂಗದಲ್ಲಿ ಸಾಧ್ಯವಾಗದ ಮಾತು. ಇದರಿಂದ ಬೇಸತ್ತು ಎಷ್ಟೋ ಜನರು ಈ ಕಸುಬಿನಿಂದ ಹೊರಗುಳಿದಿರುವುದನ್ನು ಕಾಣಬಹುದು. ಜೀತದಾಳುಗಳಾಗಿ, ಕೂಲಿಕಾರರಾಗಿ, ವ್ಯಾಪಾರ, ಕೃಷಿ ಇತ್ಯಾದಿ ಕೆಲಸಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಜೀವನ ಸಾಗಿಸುತ್ತಿರುವುದನ್ನು ಇಂದಿಗೂ ಕಾಣಬಹುದು.

ಸಾಂಪ್ರದಾಯಿಕ ಮೀನುಗಾರಿಕೆಯಲ್ಲಿ ಬಲೆಗಳ ಮೂಲಕ, ಇಲ್ಲವೆ ಗಾಣ ಹಾಕುವುದರ ಮೂಲಕ ಮೀನು ಹಿಡಿಯುವ ಪದ್ಧತಿ ಇತ್ತು. ಆದರೆ ಇಂದು ಈ ಕ್ಷೇತ್ರಕ್ಕೂ ಯಂತ್ರಗಳು ಬಂದು ಮನುಷ್ಯ ಮಾಡುವ ಕೆಲಸವನ್ನು ಯಂತ್ರಗಳು ನುಂಗಿ ನೀರುಕುಡಿಯುತ್ತಿವೆ. ಅದಷ್ಟೆ ಅಲ್ಲದೆ ಈ ರೀತಿಯ ಪಾರಂಪರಿಕ ಕಸುಬುಗಳನ್ನು ಕೇವಲ ಆ ಸಮುದಾಯದ ವ್ಯಕ್ತಿಯೇ ಮಾಡಬೇಕೆಂದಿಲ್ಲ. ಆ ಕಸುಬನ್ನು ತರಬೇತಿಯ ಮೂಲಕ ಯಾರು ಬೇಕಾದರು ಪಡೆದು ಆ ಕೆಲಸವನ್ನು ನಿರ್ವಹಿಸಬಹುದು ಎನ್ನುವ ಹಂತಕ್ಕೆ ತಂದು ನಿಲ್ಲಿಸಿದ್ದಾರೆ. ಇದು ಮೀನು ಹಿಡಿಯುವ ಕಸುಬಿಗೆ ಉಂಟುಮಾಡಿದ ಬಹು ದೊಡ್ಡ ನಷ್ಟವೇ ಸರಿ. ಇವತ್ತು ಎಲ್ಲಾ ಕಸುಬುಗಳೂ ಆಯಾಯ ಸಮುದಾಯದ ಸ್ವತ್ತಾಗಿ ಉಳಿಯದೆ ಅದು ಆದಾಯದ ಮೂಲವಾಗಿ ಬದಲಾದ್ದರಿಂದ ಬಂಡವಾಳದಾರನ ಅಧೀನಕ್ಕೆ ಒಳಗಾಗಿದೆ.

ಪಾರಂಪರಿಕ ಕಸುಬನ್ನು ಬಿಟ್ಟು ಬೇರೆ ಕಸುಬನ್ನು ಕಲಿಯದ ಕಾರಣ ಅದೆಷ್ಟೋ ಮೀನುಗಾರರು ಇಂದು ಅನಿವಾರ್ಯವಾಗಿ ಮೀನು ಹಿಡಿಯುವ ಕೂಲಿಗಳಾಗಿ, ಯಜಮಾನ ಕೊಡುವ ಕನಿಷ್ಟ ಹಣಕ್ಕೆ ದುಡಿಯುತ್ತಿದ್ದಾರೆ. ತಮ್ಮ ಜೀವವನ್ನು ಲೆಕ್ಕಿಸದೆ ಎಷ್ಟೋ ಜನರು ನದಿಗಳಲ್ಲಿ, ಸಮುದ್ರಗಳಲ್ಲಿ ಮೀನು ಹಿಡಿಯಲು ಹೋಗಿ ಪ್ರಾಣ ನೀಗಿರುವುದನ್ನು ಕಾಣಬಹುದು. ಅವರ ಜೀವಕ್ಕೆ ಯಾವ ಸುರಕ್ಷತೆಯೂ ಇರುವುದಿಲ್ಲ. ಪ್ರವಾಹವೇ ಬರಲಿ, ಸುನಾಮಿಯೇ ಆದರೂ ಅದಕ್ಕೆ ಮಾಲೀಕನೆಂದು ಜವಬ್ದಾರನಾಗಿರುವುದಿಲ್ಲ. ಸರ್ಕಾರವೂ ಅದಕ್ಕೆ ಹೊಣೆಹೊರುವುದಿಲ್ಲ. ಇನ್ನೂ ಎಷ್ಟೊ ಬೆಸ್ತರು ಮೀನು ಹಿಡಿಯಲು ಹೋಗಿ ಬೇರೆ ಬೇರೆ ದೇಶಗಳಲ್ಲಿ ಸೆರೆಯಾಳುಗಳಾಗಿ ಇಂದಿಗೂ ಸೆರೆಮನೆ ವಾಸ ಅನುಭವಿಸುತ್ತಿರುವುದನ್ನು ಕಾಣಬಹುದು. ಅವರನ್ನು ಬಿಡಿಸಿತರುವ ಗೋಜಿಗೆ ಸರ್ಕಾರ ಎಂದೂ ತಲೆಕೆಡಿಸಿಕೊಂಡಿಲ್ಲ. ಇದನ್ನು ಸರ್ಕಾರದ ಗಮನಕ್ಕೆ ತಂದು ಅವರನ್ನು ಬಿಡಿಸಿ ತರುವ ಜವಬ್ದಾರಿಯನ್ನು ಯಾರೂ

ಹೊರಲು ಸಿದ್ಧವಿಲ್ಲ. ಇದಕ್ಕೆ ಸರ್ಕಾರವಾಗಲಿ, ಮಾಲೀಕನಾಗಲಿ ಯಾರು ತಲೆಕೆಡಿಸಿಕೊಳ್ಳುವುದಿಲ್ಲ. ಇನ್ನೂ ಎಷ್ಟೋ ಸಾರಿ ಪ್ರವಾಹದ ಸಂದರ್ಭಗಳಲ್ಲಿ ಪ್ರವಾಹದ ಮುನ್ಸೂಚನೆಯೇ ಇಲ್ಲದೆ ಮೀನು ಹಿಡಿಯಲು ಹೋಗಿ ಸಾವಿರಾರು ಜನ ತಮ್ಮ ಪ್ರಾಣ ತೆತ್ತಿರುವುದನ್ನು ಕಾಣಬಹುದು.

ವಿಜ್ಞಾನ ತಂತ್ರಜ್ಞಾನ ಎಷ್ಟೇಲ್ಲಾ ಮುಂದುವರೆದಿದ್ದರೂ ಪ್ರವಾಹದ ಮುನ್ಸೂಚನೆ, ಬಿರುಗಾಳಿ, ಚಂಡಮಾರುತ, ಸೀತಗಾಳಿ, ಕಡಲಕೊರೆತ ಇತ್ಯಾದಿಗಳ ಮಾಹಿತಿಯ ಮುನ್ಸೂಚನೆಯನ್ನು ಕೊಡುವ ಬಗೆಗೆ ಹೆಚ್ಚು ಸಂಶೋಧನೆಗಳನ್ನು ಕಂಡುಹಿಡಿಯುವಲ್ಲಿ ನಮ್ಮ ವಿಜ್ಞಾನಿಗಳು ಸೋತಿರುವುದು ವಿಜ್ಞಾನದ ದಿಕ್ಕು ಮತ್ತು ಧೋರಣೆಗೆ ಹಿಡಿದ ಕನ್ನಡಿ ಎಂದು ತಿಳಿಯಬೇಕು. ಒಂದು ವೇಳೆ ವಿಜ್ಞಾನ ಮೀನುಗಾರರಿಗೆ ಈ ವಿಕೋಪಗಳ ಬಗೆಗೆ ಮುನ್ನೆಚ್ಚರಿಕೆಯನ್ನು ತಿಳಿಸಿದರೆ ಮೀನುಗಾರರಿಗೆ ಎದುರಾಗಬಹುದಾದ ತೊಂದರೆಗಳಿಂದ ಪಾರುಮಾಡಬಹುದು. ಆದರೆ ಇಂದು ಅದಾಗದೆ ಇರುವುದರಿಂದ ಅದೆಷ್ಟೋ ಮೀನುಗಾರರು ಸಮುದ್ರಗಳಲ್ಲಿ ಹೇಳ ಹೆಸರಿಲ್ಲದಂತಾಗಿರುವುದನ್ನು ಕಾಣಬಹುದು.

ಇಂದಿಗೂ ಎಷ್ಟೋ ಜನರು ಗುತ್ತಿಗೆದಾರರು ನೀಡುವ ಟೆಂಟ್‌ಗಳಲ್ಲಿ, ಗುಡಿಸಲುಗಳಲ್ಲಿ ಮೀನು ಹಿಡಿದು ಗುತ್ತಿಗೆದಾರ ನೀಡುವ ಸಣ್ಣ ಜಾಗಗಳಲ್ಲಿ ವಾಸಿಸುತ್ತಿರುವುದನ್ನು ಕಾಣಬಹುದು. ಈ ಸಮುದಾಯದ ಜನರು ಹೆಚ್ಚು ನೀರಿನಲ್ಲಿ ಕೆಲಸ ಮಾಡುವುದರಿಂದ ಎದುರಾಗುವ ಆರೋಗ್ಯದ ಸಮಸ್ಯೆಗಳ ಬಗೆಗೆ ಯಾರು ಗಮನಕೊಡುವುದಿಲ್ಲ. ಹೆಚ್ಚು ಹೊತ್ತು ನೀರಿನಲ್ಲಿ ಇರುವುದರಿಂದ ಅನೇಕ ಜಲಚರ ಪ್ರಾಣಿಗಳ, ವಿಷ ಜಂತುಗಳ ಕಡಿತಕ್ಕೆ, ಅವುಗಳ ತೊಂದರೆಗೆ ಒಳಗಾಗುತ್ತಾರೆ. ಎಷ್ಟೋ ಜನರು ಅವುಗಳ ಕಡಿತದಿಂದಾಗಿ ಸಾವನ್ನಪ್ಪಿರುವುದನ್ನು ಕಾಣಬಹುದು. ಇದಕ್ಕೆ ಯಾವ ಪರಿಹಾರವಾಗಲಿ, ಮಾರ್ಗೋಪಾಯವಾಗಲಿ ಇಲ್ಲದಿರುವುದು ಈ ಜನರ ದುರಂತ.

ಈ ರೀತಿಯ ಅದೆಷ್ಟೋ ಘಟನೆಗಳನ್ನು, ತೊಂದರೆಗಳನ್ನು ಇಂದಿಗೂ ಈ ಸಮುದಾಯದ ಜನ ಎದುರಿಸುತ್ತಿರುವ ವಿಚಾರ ಎಲ್ಲಿಯೂ ಸುದ್ಧಿಯಾಗುವುದಿಲ್ಲ, ಯಾರ ಗಮನಕ್ಕೂ ಬರುವುದಿಲ್ಲ. ಈ ಜನರು ಅನೇಕ ರೋಗರುಜಿನಕ್ಕೂ ತುತ್ತಾಗುವುದನ್ನು ಕಾಣಬಹುದು. ಯಾಕೆಂದರೆ ಹೆಚ್ಚು ನೀರಿನಲ್ಲಿ ಇರುವುದರಿಂದಾಗಿ ಬರಬಹುದಾದ ಶೀತಾ, ನೆಗಡಿ, ಕೆಮ್ಮು, ಅಸ್ತಮ, ಜ್ವರ, ಕಜ್ಜಿ, ಜಾಂಡಿಸ್, ಉಸಿರಾಟಕ್ಕೆ ಸಂಬಂಧಿಸಿದ ಕಾಯಿಲೆ ಮುಂತಾದ ತೊಂದರೆಗಳನ್ನು ಎದುರಿಸಬೇಕಾಗುತ್ತದೆ. ಇದಕ್ಕೆ ಯಾವ ಆರೋಗ್ಯ ವಿಮೆಯಾಗಲಿ, ಜೀವ ವಿಮೆಯಾಗಲಿ ಇರದಿರುವುದು ಈ ಜನಾಂಗದ ದುರಂತ. ಈ ರೀತಿ ಎಷ್ಟೋ

ಕಾಯಿಲೆಗಳಿಂದ ಈ ಸಮುದಾಯದ ಜನ ಸಾವನ್ನಪ್ಪಿರುವುದನ್ನು ಕಾಣಬಹುದು. ಈ ರೀತಿಯ ದುರಂತದಲ್ಲಿ ಸಾವನ್ನಪ್ಪಿದ ಜನಾಂಗಕ್ಕೆ ನೀಡುವ ಪರಿಹಾರವು ಕೂಡ ಅಷ್ಟೇ ಕನಿಷ್ಟ ಪ್ರಮಾಣದ್ದು. ಇಲ್ಲಿ ಜೀವಕ್ಕೆ ಬೆಲೆ ಇಲ್ಲದಿರುವುದು ಈ ಜನಾಂಗದ ಮೇಲಿನ ಅಸಡ್ಡೆಯನ್ನು ತೋರುತ್ತದೆ.

ಈ ಸಮುದಾಯ ಒಂದು ಅಸಂಘಟಿತ ಸಮುದಾಯವಾಗಿರುವುದರಿಂದ ಇಂದಿಗೂ ತಮ್ಮ ನೆಲೆಯನ್ನು ಕಂಡುಕೊಳ್ಳಲಾಗದ ಸ್ಥಿತಿಗೆ ತಲುಪಿರುವುದನ್ನು ಕಾಣಬಹುದು. ಇಂದು ಎಷ್ಟೋ ಕಸುಬುಗಳು ಈ ರೀತಿಯ ಸಮಸ್ಯೆಗಳನ್ನು ಎದುರಿಸುತ್ತಿವೆ. ಭಾರತದ ಒಬ್ಬ ಪ್ರಜೆಯಾಗಿ ರಾಷ್ಟ್ರದ ಯಾವುದೇ ಮೂಲೆಯಲ್ಲಿರಲಿ ಅಥವಾ ಯಾವುದೇ ಧರ್ಮ, ಜಾತಿ, ಪಂಥ ಇರಲಿ, ಯಾವುದೇ ವೃತ್ತಿ ಅವಲಂಬಿಸಿರಲಿ ಅವನಿಗೆ ಸಂವಿಧಾನಬದ್ಧವಾಗಿ ಸಿಗಬೇಕಾದ ಎಲ್ಲಾ ಸೌಲಭ್ಯಗಳು ಸಿಗುವಂತಾಗಬೇಕು. ಆಗ ಸಂವಿಧಾನದ ಆಶಯಕ್ಕೆ ಒಂದು ಗೌರವ ಸಿಕ್ಕಂತಾಗುತ್ತದೆ. ಅಂಬೇಡ್ಕರ್ ಕಂಡ ಕನಸು ನನಸಾಗುತ್ತದೆ. ಆದರೆ ವಾಸ್ತವ ಪರಿಸ್ಥಿತಿ ಇಂದು ಶೋಚನೀಯವಾಗಿರುವುದು ಸಂವಿಧಾನಕ್ಕೆ ನಾವೆಲ್ಲ ಮಾಡುತ್ತಿರುವ ಅಪಚಾರ.

ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ ಇಂದು ಈ ಸಮುದಾಯ ಎದುರಿಸುತ್ತಿರುವ ಸವಾಲುಗಳು ಮತ್ತು ಸಮಸ್ಯೆಗಳನ್ನು ಸರ್ಕಾರದ ಗಮನಕ್ಕೆ ತಂದು ಸರಿಯಾದ ಕ್ರಮ ಕೈಗೊಳ್ಳುವ ಅಗತ್ಯ ಈ ಸಮುದಾಯದ ಜನರ ಮುಂದಿದೆ.

ಈ ಅಧ್ಯಾಯದಲ್ಲಿ ಮಳವಳ್ಳಿ ಪರಿಸರದಲ್ಲಿರುವ ಬೆಸ್ತ ಸಮುದಾಯದಲ್ಲಿ ಬಳಕೆಯಲ್ಲಿರುವ ಪದಕೋಶದ ಬಗೆಗೆ ವಿವರಿಸಲಾಗಿದೆ. ಈ ಸಮುದಾಯದ ಕಸುಬಿನಲ್ಲಿ ಬಳಸುವ ವಸ್ತುಗಳು ಅವುಗಳ ಬಳಕೆಗೊಳ್ಳುವ ಬಗೆಯನ್ನು ಈ ಕೆಳಕಂಡಂತೆ ಕಾಣಬಹುದು.

**ಕಂಡ್ಲು ಬಲೆ**–ಪ್ಲಾಸ್ಟಿಕ್ ದಾರದಲ್ಲಿ ಎಣೆಯುವ ಬಲೆಯಾಗಿರುತ್ತದೆ. ಎರಡನೆಯ ನಂಬರ್ ದಾರವನ್ನು ಇದಕ್ಕೆ ಬಳಸಲಾಗುತ್ತದೆ. ಎರಡು ಬೆರಳಿನ ಆಕಾರದ ರೂಪವನ್ನು ಹೊಂದಿರುತ್ತದೆ.

**ಸಸ್ಲು ಬಲೆ**–ಸಣ್ಣ ಮೀನುಗಳನ್ನು ಇಡಿಯಲು ಈ ಬಲೆಯನ್ನು ಬಳಸಲಾಗುತ್ತದೆ. ಬಗರಿ ಮಣಿಗಳನ್ನು ಬಳಸಲಾಗುತ್ತದೆ. ಬಲೆಯ ಮೇಲೆ ಪಾರಿವಾಳದ ಮರದ ಬೆಂಡನ್ನು ಬಳಸಲಾಗುತ್ತದೆ. ಬಲೆಯ ಕೆಳಗೆ ಮಣ್ಣಿನ ಮಣಿಗಳನ್ನು ಬಳಸಲಾಗುತ್ತದೆ.

**ಆಯ್ಬಲೆ**–ಆಯುವ ಬಲೆಯು ಹತ್ತು ಅಡಿ ಎತ್ತರ, ಐವತ್ತು ಅಡಿ ಅಗಲ, ಕೆಳಗೆ ಮಣ್ಣಿನ ಮಣಿ, ಮೇಲ್ಭಾಗಕ್ಕೆ ಪ್ಲಾಸ್ಟಿಕ್ ಮಣಿಗಳನ್ನು ಹೊಂದಿರುತ್ತದೆ.

**ಸೀಗಡಿ ಬಲೆ**–ಬಿದಿರು ದೊಣ್ಣೆಗಳ ನಡುವೆ ಬಲೆಯನ್ನು ಇಡಲಾಗಿರುತ್ತದೆ. ಬಲೆಯ ಹಿಂಭಾಗಕ್ಕೆ ಚೀಲವನ್ನು ಇಡಲಾಗಿರುತ್ತದೆ. ಬಲೆಯ ಮೂಲಕ ಸೀಗಡಿಗಳು ಚೀಲದೊಳಗೆ ಬಂದು ಸೇರುತ್ತವೆ.

**ಬೀಸು ಬಲೆ**–ಬೀಸು ಬಲೆಯನ್ನು ವೃತ್ತಾಕಾರವಾಗಿ ಎಸೆಯಲಾಗುತ್ತದೆ. ತೋಳಿಗೆ ದಾರ ಕಟ್ಟಿಕೊಂಡು ಬಲೆಯನ್ನು ನೀರಿನ ಮೇಲ್ಭಾಗಕ್ಕೆ ಮೀನಿರುವ ಜಾಗ ನೋಡಿ ಎಸೆಯಲಾಗುತ್ತದೆ.

**ತೆಪ್ಪ–ಅರ್ಗಲ**–ಬಿದಿರಿನ ಅಚ್ಚೆಗಳಿಂದ ಎಣೆಯಲ್ಪಟ್ಟಿರುತ್ತದೆ. ಇದು ವೃತ್ತಾಕಾರವಾಗಿದ್ದು ತಳ ಭಾಗದಿಂದ ಮೇಲ್ಭಾದಗ ವರೆಗೆ ಪ್ಲಾಸ್ಟಿಕ್ ಅಥವಾ ಟಾರ್‌ನಿಂದ ಮುಚ್ಚಲ್ಪಟ್ಟಿರುತ್ತದೆ. ಅರ್ಗಲದೊಳಗೆ ನೀರು ಹೋಗದಂತೆ ಈ ರೀತಿ ಮಾಡಿರುತ್ತಾರೆ.

**ಮಣೆ–ಉಟ್ಟು**– ಇದು ತೆಪ್ಪ ಅಥವಾ ಅರ್ಗಲವನ್ನು ತಳ್ಳಲು ಬಳಸುತ್ತಾರೆ. ಇದು ಮರದ ತುಂಡಿನಿಂದ ಮಾಡಲಾಗಿರುತ್ತದೆ. ದೊಣ್ಣೆಯ ತುದಿ ಭಾಗದಲ್ಲಿ ಚಪ್ಪಟೆಯ ಆಕಾರವನ್ನು ಹೊಂದಿದ್ದು ಇದು ನೀರನ್ನು ಹಿಂದೆ ತಳ್ಳಲು ಬಳಸಲಾಗುತ್ತದೆ. ತೆಪ್ಪ ಸರಾಗವಾಗಿ ಮುಂದೆ ಹೋಗಲು ಸಹಾಯಕವಾಗುತ್ತದೆ.

**ಮೂಗದ ಕಡ್ಡಿ**– ಇದು ಬಲೆಯನ್ನು ಎಣೆಯಲೂ ಬಳಸುತ್ತಿದ್ದ ಸಾಧನವಾಗಿದೆ.

**ಮೀನಿನ ವಿಧಗಳು**– ಬಾಚಣಿಗೆ ಮೀನು, ಕಲ್ಕುರಿ ಮೀನು, ಗೆಂಡೆ ಮೀನು, ಮಳ್ಳಿ ಮೀನು, ಕೊರಮು, ಆನೆ ತಲೆ ಮೀನು, ಕುಂಡ ಚಾಪ್ಲು, ಅಯ್ಗಿರ್ಲು, ಬೀಳ್ ಮೀನು, ಕೀಳಿ ಗೆಂಡೆ, ಕರವಿ ಗೆಂಡೆ, ಕೆಂಮೀನು, ಬಿಳ್ಮೀನು, ಕಾಗ್ಮೀನು, ಕಂತ್ಲು ಮೀನು, ಕರ್ಮೀನು, ಮಳ್ಳಿ ಮೀನು, ಸಸ್ಲು ಮೀನು, ಗಿರ್ಲು ಮೀನು, ಚಿಟ್ಗಿರ್ಲು, ಇಡ್ಮನ ಮೀನು, ಉಳ್ಕತಲೆ ಮೀನು, ಅವ್ಲ್ ಮೀನು, ಜಿಲೇಬಿ ಮೀನು, ಕೆತ್ಲು ಮೀನು, ವಟ್ಟೆ ಮೀನು, ಆಂಬತ್ತಿ ಮೀನು, ಚೌಳ್ ಮೀನು, ಕ್ಯಾಟ್ಲಾಕ್ ಮೀನು, ನತ್ತಿಕಣ್ಣಿನ ಮೀನು, ಕೂಳೆಮೀನು, ಬಾಳೆಮೀನು, ಮುಂತಾದವುಗಳು.

**೬.೩.ಕುಂಬಾರರು**

"ಕುಂಬಾರಿಕೆಯ ವೃತ್ತಿ ನಿನ್ನೆ ಮೊನ್ನೆಯದಲ್ಲ, ತುಂಬ ಪ್ರಾಚೀನವಾದುದು. ಕ್ರಿ.ಶ.ಪೂ ೭೦೦–೬೫೦ರ ಶಿಲಾಯುಗ, ನವಶಿಲಾಯುಗದ ಪಳಯುಳಿಕೆಯ ಕೆಲಸವನ್ನು ಪರಿವೀಕ್ಷಿಸಿ

ಶೋಧಿಸಿದ ಪುರಾತತ್ವ ಶೋಧಕರಿಗೆ ಮಣ್ಣಿನ ಸಣ್ಣ-ದೊಡ್ಡ ಮಡಕೆಗಳು ದೊರೆತಿವೆ. ಮಡಿಕೆ ತಯಾರಿಸುವ ವಿಧಾನ ಕ್ರಿ. ಶ. ಪೂ. ೬ನೆ ಶತಮಾನಕ್ಕಿಂತಲೂ ಹಿಂದೆ ಇದ್ದಿರಬಹುದೆಂದು ಊಹಿಸಬಹುದಾಗಿದೆ. ಮಾನವನ ನಾಗರಿಕತೆಯ ಇತಿಹಾಸವನ್ನು ತಿಳಿಯುವಲ್ಲಿ ಮಡಿಕೆಗಳು ಮಹತ್ವದ ಪಾತ್ರ ಬೀರುತ್ತವೆ. ಕುಂಬಾರಿಕೆ ಭಾರತದ ಪ್ರಾಚೀನ ವೃತ್ತಿಯಾಗಿತ್ತೆಂಬುದನ್ನು ಅಲ್ಲಗಳೆಯಲಾಗುವುದಿಲ್ಲ.

ಕುಂಬಾರ ಎಂದರೆ ಮಣ್ಣಿನ ಪಾತ್ರೆಗಳನ್ನು ಮಾಡುವವನು. ಕುಂಭ (ಕುಂಬ) ಎಂದರೆ ಕಲಶ, ಗಡಿಗೆ ಅದನ್ನು ಮಾಡುವವ ಕುಂಭಕಾಱ (ಕುಂಗಾಱ<ಕುಂಬಱ) ಕುಂಬಾರ, ಕುಂಬರ ಇವನನ್ನು ಕುಂಬಿಗ, ಬಾಂಬ, ಕೋವ ಎಂದು ಕರೆದರೂ ಅಚ್ಚ ಕನ್ನಡವೇ. ಇವನ ಹೆಂಡತಿ ಕುಂಬಱತಿ (ಕುಂಬಾರಗಿತ್ತಿ) ಇವನ ಕಾರ್ಯಗಾರ ಕುಂಬಗಾಱಸಾಲೆ (ಕುಂಬಾರಸಾಲಿ) ಇಲ್ಲಿ ಇವನು ಬಳಸುವ ಮುಖ್ಯವಾದ ಉಪಕರಣಗಳು ಎರಡು ತಿಗುರಿ (ತಿಹುರಿ) ಮತ್ತು ತಿಗುರಿ ಕೋಲು ಇವನ್ನೆ 'ಕುಂಬಱನಚಕ್ರ', 'ಕುಲಾಲಚಕ್ರ', 'ಕೋವರನ ಚಕ್ರ' ಎಂದೂ ಕರೆಯುವರು. ಇವನ್ನು ಬಳಸಿ ಆತ ಮಾಡುವುದು ಕುಂಬಾರಿಕೆ. ಕುಂಬಾರ ವೆಸ, ಬಾನ್ ಎಂದರೆ ಕುಲಾಲಕರಣ ಇವರಿಗೆ ಕೊಟ್ಟ ದಾನವನ್ನು ಕುಂಬಾರ ಗೊಡಿಗೆಯೆಂದು ಬಿಟ್ಟಿ ತೆರಿಗೆಯನ್ನು ಕುಂಬಾಱದೆಱೆಗೆ ಎಂದು ಶಾಸನಗಳಲ್ಲಿ ವರ್ಣಿಸಿದೆ"[೨]

ಮಳವಳ್ಳಿ ಪರಿಸರದಲ್ಲಿ ಬಳಕೆಯಲ್ಲಿರುವ ಕುಂಬಾರ ಕುಲಕಸುಬಿನ ಪದಕೋಶವನ್ನು ಕಾಣಬಹುದು. ಪ್ರತಿಯೊಂದು ಕುಲಕಸುಬಿಗೂ ತನ್ನದೇ ಆದ ಪದಕೋಶದ ಜೊತೆಗೆ ವಸ್ತು ಪ್ರಧಾನ್ಯತೆಯನ್ನು ಹೊಂದಿರುತ್ತದೆ. ಕುಂಬಾರಿಕೆ ವೃತ್ತಿಪದಕೋಶವು ಮಳವಳ್ಳಿ ಪರಿಸರದಲ್ಲಿ ಬಳಕೆಗೊಂಡಿರುವುದನ್ನು ಕಾಣಬಹುದು. ಯಾವ ರೀತಿಯ ಪದಕೋಶವು ಈ ಪರಿಸರದಲ್ಲಿ ಬಳಕೆಗೊಳ್ಳುತ್ತದೆ ಎಂಬುದನ್ನು ಇಲ್ಲಿ ವಿವರಿಸಲಾಗಿದೆ. ಕುಂಬಾರರು ಬಳಸುವ ವಸ್ತುಗಳು ಗ್ರಾಮೀಣ ಜನರ ಬದುಕಿನ ದಿನ ನಿತ್ಯ ಬಳಕೆಯ ವಸ್ತುಗಳಾಗಿರುತ್ತವೆ. ಈ ವಸ್ತುಗಳು ಕಂಬಾರಿಕೆ ವೃತ್ತಿಯಲ್ಲಿ ಯಾವ ರೀತಿ ನೆಲೆಯಲ್ಲಿ ಬಳಕೆಗೊಂಡಿದೆ ಎಂಬುದನ್ನು ಈ ಕೆಳಕಂಡ ಪದಕೋಶಗಳ ಮೂಲಕ ವಿವರಿಸಲಾಗಿದೆ.

**ಮಡ್ಕೆ**-ಮಡ್ಕೆಗಳಲ್ಲಿ ಹಲವು ವಿಧಧ ಮಡಿಕೆಗಳಿವೆ. ಇವುಗಳನ್ನು ಮುದ್ದೆ ಮಾಡಲು, ನೀರು ಕುಡಿಯಲು, ದವಸ-ಧಾನ್ಯಗಳನ್ನು ಇಡಲು ಬಳಸುತ್ತಾರೆ.

**ಅರ್ಬಿ**-ಇದು ಮಡಿಕೆಯ ಇನ್ನೊಂದು ರೂಪ ಇದು ಚಿಕ್ಕದಾಗಿದ್ದು. ನೀರು ತುಂಬಿಡಲು, ಮದುವೆ ಮನೆಗಳಲ್ಲಿ ದೇವರು ತರಲು, ದೇವತಾ ಕಾರ್ಯಗಳಲ್ಲಿ, ಹಾಲರ್ಬಿ ತರಲು ಬಳಸುವರು.

**ಬೋಗುನಿ**-ಮಡಿಕೆಯ ಮೇಲೆ ಮುಚ್ಚುವ ಸಾಧನವನ್ನು ಬೋಗುನಿ ಎಂದು ಕರೆಯುತ್ತಾರೆ.

**ಬಕ್ರೆ**–ಕಾಳುಗಳನ್ನು ಉರಿಯಲು ಈ ವಸ್ತುವನ್ನು ಬಳಸಲಾಗುತ್ತಿತ್ತು. ಇದು ಬಾಂಡಲೆ ರೂಪದಲ್ಲಿ ಇರುತ್ತದೆ.

**ಅಂಚು**–ಮನೆಗಳನ್ನು ಮುಚ್ಚಲು ಬಳಸುವರು. ಇದನ್ನು ಕೈ ಅಂಚು ಎಂದು ಕರೆಯುತ್ತಾರೆ.

**ಕುಡ್ಕೆ**– ತುಂಬ ಚಿಕ್ಕ ಕುಡುಕೆಯಾಗಿದ್ದು ಇವುಗಳನ್ನು ಹೆಣ್ಣೆ ಇಡಲು ಬಳಸುತ್ತಾರೆ. ತಡ ಹೊಡೆಯಲು ಬಳಸುತ್ತಾರೆ.

**ಗಡಿಗೆ**–ದೇವರು ತರಲು ಇದನ್ನು ಬಳಸುತ್ತಾರೆ. ಮಧ್ಯಮ ಗಾತ್ರದ ಮಣ್ಣಿನ ಗಡಿಗೆಯಾಗಿರುತ್ತದೆ. ಮದುವೆಯ ಸಂದರ್ಭದಲ್ಲಿ ಗಂಡಿನ ತಂಗಿ ಅಥವಾ ಅಕ್ಕ ಗಡಿಗೆಯನ್ನು ಇಡಿದುಕೊಂಡಿರುತ್ತಾರೆ. ಅದರಲ್ಲಿ ಅಕ್ಕಿ, ಹೊಂಬಾಳೆಯನ್ನು ಹಾಕಿರುತ್ತಾರೆ.

**ಅಂಬಲಿ ಗಡಿಗೆ**–ಅಂಬಲಿ ಕಾಯಿಸಲು ಇರುವಂತಹ ಗಡಿಗೆ ಆಕಾರದಲ್ಲಿ ಪಾತ್ರೆಯ ರೂಪವನ್ನು ಹೊಂದಿರುತ್ತದೆ. ಇದರ ಬಾಯಿ ಅಗಲವಾಗಿರುತ್ತದೆ.

**ಎತ್ತೊಲೆ**–ಇದು ಒಲೆಯಾಗಿದ್ದು ಅಡುಗೆ ಮಾಡಲು ಬಳಸುತ್ತಾರೆ. ಇದನ್ನು ಎಲ್ಲಿ ಬೇಕೆಂದರಲ್ಲಿ ಇಟ್ಟುಕೊಳ್ಳಬಹುದು. ಅಡುಗೆ ಮಾಡು ಒಲೆಗೆ ಮಳವಳ್ಳಿ ಪರಿಸರದಲ್ಲಿ ಎತ್ತೊಲೆ ಎಂದು ಬಳಕೆಯಲ್ಲಿದೆ. ಇದನ್ನು ಎಲ್ಲಿ ಬೇಕೆಂದರಲ್ಲಿ ಕೊಂಡೊಯ್ಯುವುದರಿಂದ ಅದು ಎತ್ತೊಲೆ ಎತ್ತಿ ಕೊಂಡು ಹೋಗುವ ಒಲೆ ಎತ್ತೊಲೆಯಾಗಿದೆ.

**ಗುಡಾಣ**–ಇದು ಗಾತ್ರದಲ್ಲಿ ಮನುಷ್ಯರ ಎತ್ತರವನ್ನು ಹೊಂದಿರುತ್ತದೆ. ಇದನ್ನು ದವಸ–ಧಾನ್ಯಗಳನ್ನು ಸಂಗ್ರಹಿಸಿಡಲು ಬಳಸುತ್ತಾರೆ. ಇದರ ಹೊಟ್ಟೆಯ ಬಳಿ ಅಗಲವಾಗಿರುತ್ತದೆ. ಬಾಯಿ ಚಿಕ್ಕದಾಗಿರುತ್ತದೆ.

**ಅಳಗೆ**–ಇದನ್ನು ದವಸ ಧಾನ್ಯಗಳನ್ನು ತುಂಬಿಡಲು ಬಳಸುತ್ತಿದ್ದರು. ಗುಡಾಣಕ್ಕಿಂತು ಆಕಾರದಲ್ಲಿ ಸ್ವಲ್ಪ ಚಿಕ್ಕದಾಗಿರುತ್ತಿತ್ತು.

**ಆಮ್ಗೆ**–ಇದು ಬೆಂಕಿಯಾಗಿದ್ದು ಮಡಿಕೆಗಳನ್ನು ಸುಡುವ ಜಾಗಕ್ಕೆ ಆಮ್ಗೆ ಕೊಟ್ಟಿಗೆ ಎಂದು ಕರೆಯುತ್ತಾರೆ. ತಾವು ತಯಾರಿಸಿದ ಮಣ್ಣಿನ ವಸ್ತುಗಳನ್ನು ಸುಡುವ ಅಥವಾ ಬೇಯಿಸುವ ಸ್ಥಳಕ್ಕೆ ಆಮ್ಗೆಗೆ ಕೊಟ್ಟಿಗೆ ಎಂದು ಕರೆಯುತ್ತಿದ್ದರು. ಬೇಯಿಸುವ ಪ್ರಕ್ರಿಯೆಗೆ ಆಮ್ಗೆಗೆ ಎಂಬ ಹೆಸರಿನಿಂದ ಕರೆಯುತ್ತಿದ್ದರು.

**ಸೊಳ್ಳು**–ದೀಪ ಎಂದು ಕರೆಯುವ ಇದನ್ನು ಮಳವಳ್ಳಿ ಪರಿಸರದಲ್ಲಿ ಸೊಳ್ಳು ಎಂದು ಕರೆಯುತ್ತಾರೆ. ಮಣ್ಣಿನಿಂದ ಮಾಡಿದ ದೀಪಗಳು ಅನೇಕ ಗಾತ್ರದಲ್ಲಿ ಇರುತ್ತವೆ. ಇದನ್ನು ಮನೆಗಳಲ್ಲಿ, ದೇವಾಲಯಗಳಲ್ಲಿ, ಆರತಿ ದೀಪಗಳಾಗಿ ಬಳಸುತ್ತಾರೆ.

**ಬೆಚ್ಚು ಗಡಿಗೆ**–ಮನೆಗಳ ಮುಂದೆ, ಹೊಲ ಗದ್ದೆಗಳಲ್ಲಿ ದೃಷ್ಟಿಯಾಗುತ್ತದೆ ಎಂದು ಬೆಚ್ಚು ಮಡಿಕೆಗಳನ್ನು ಕಟ್ಟುತ್ತಾರೆ. ಗಡಿಗೆಗೆ ವಿಚಿತ್ರವಾದ ಮನುಷ್ಯ ಮುಖವನ್ನು ಬರೆದು ಕಟ್ಟುತ್ತಾರೆ. ಇದನ್ನು ಬೆಚ್ಚು ಗಡಿಗೆ ಎಂದು ಕರೆಯುತ್ತಾರೆ.

**ಮರ್ಗಿ**–ಚಿಕ್ಕ ಮಣ್ಣಿನ ಪಾತ್ರೆ. ಇದು ತಟ್ಟೆಯ ಆಕಾರದಲ್ಲಿದ್ದು ಮಧ್ಯ ಗುಳಿ ಇರುತ್ತದೆ. ಇದನ್ನು ಮುದ್ದೆ ಕಟ್ಟಲು ಬಳಸುತ್ತಾರೆ.

**ವೋಡು**–ಇದು ಅಗಲವಾದ ಬಾಯಿಯನ್ನು ಹೊಂದಿರುತ್ತದೆ. ಕಾಳುಗಳನ್ನು ಉರಿಯಲು ಬಳಸುತ್ತಾರೆ. ಇದನ್ನು ಮಳವಳ್ಳಿ ಪರಿಸರದಲ್ಲಿ ವೋಡು ಎಂಬ ಪದದಿಂದ ಕರೆಯಲ್ಪಡುತ್ತದೆ.

**ಪಾನಿ**–ಇದನ್ನು ಧನ, ಕರು, ಎಮ್ಮೆ, ಮೇಕೆಗಳಿಗೆ ನೀರು ಕುಡಿಯಲು ಇಡುತ್ತಾರೆ. ಇದರಲ್ಲಿ ಮನೆಯಲ್ಲಿ ಕೈತೊಳೆದ ನೀರು, ಊಟ ಮಾಡಿ ಉಳಿದ ಪದಾರ್ಥಗಳನ್ನು ಹಾಕಿ ಪ್ರಾಣಿಗಳಿಗೆ ಕೊಡುತ್ತಾರೆ. ಕೆಲವರು ಇದನ್ನು ನೆಲದಲ್ಲಿ ಊತಿರುತ್ತಾರೆ.

**ದೊಣ್ಣೆ**–ದೊಣ್ಣೆಯನ್ನು ಬಳಸಿ ಚಕ್ರವನ್ನು ತಿರುಹುತ್ತಾರೆ. ಚಕ್ರವನ್ನು ತಿರುಹಲು ಇದನ್ನು ಬಳಸುತ್ತಾರೆ. ಆ ಮೂಲಕ ಚಕ್ರದ ವೇಗವನ್ನು ಎಷ್ಟು ಬೇಕೊ ಅಷ್ಟು ನಿಯಂತ್ರಿಸುವ ಸಾಧನವಾಗಿ ಈ ದೊಣ್ಣೆಯನ್ನು ಬಳಸುತ್ತಾರೆ.

**ಕವಳಿ ಗಡಿಗೆ**–ಕೆಸರು ಗಡಿಗೆ ಮಡಿಕೆ ತಯಾರಿಸುವಾಗ ಕೈಯಲ್ಲಿ ಸಂಗ್ರಹವಾಗುವ ತೆಳುವಾದ ಹೆಚ್ಚುವರಿಯಾಗಿ ಬಂದ ಈ ಕವಳಿ ಮಣ್ಣನ್ನು ಚಕ್ರದ ಪಕ್ಕದಲ್ಲಿರುವ ಕವಳಿ ಗಡಿಗೆಗೆ ತೆಗೆದು ಹಾಕುವರು.

**ಕೆಮ್ಮಣ್ಣು**– ಕುಂಬಾರರು ಮಡಿಕೆ ತಯಾರಿಸಲು ಬಳಸುವ ಮಣ್ಣಿನ ವಿಧವಾಗಿದೆ.

**ಕಪ್ಪೋಣ್ಣು**–ಕುಂಬಾರರು ಮಡಿಕೆ ತಯಾರಿಸಲು ಬಳಸುವ ಮಣ್ಣಿನ ವಿಧವಾಗಿದೆ.

**ಜೇಡಿಮಣ್ಣು**–ಕುಂಬಾರರು ಮಡಿಕೆ ತಯಾರಿಸಲು ಬಳಸುವ ಮಣ್ಣಿನ ವಿಧವಾಗಿದೆ. ಈ ಮೂರು ವಿಧಥ ಮುಣ್ಣಿನಿಂದ ಮಡಿಕೆ ಮತ್ತು ಮಣ್ಣಿನ ವಿವಿಧ ವಸ್ತುಗಳನ್ನು ಕುಂಬಾರರು ಬಳಸುವುದನ್ನು ಕಾಣಬಹುದು.

**ಧೂಪದುಂಡಿಗೆ**–ದೇವಾಲಯಗಳಲ್ಲಿ ಧೂಪವನ್ನು ಹಾಕಲು ಬಳಸುತ್ತಾರೆ. ವೃತ್ತಾಕಾರದ, ಅಗಲ ಬಾಯಿಯ ವಸ್ತುವಾಗಿರುತ್ತದೆ. ಇದರಲ್ಲಿ ಬೆಂಕಿ ಕೆಂಡಗಳನ್ನು ಸುರಿದು ಗಂಧ, ಧೂಪಗಳನ್ನು ಹಾಕುತ್ತಾರೆ.

**ಚಕ್ರ**–ಇದನ್ನು ತಿರುಗುವುದರ ಮೂಲಕ ಮಡಿಕೆಯನ್ನು ತಯಾರಿಸುತ್ತಾರೆ. ಇದನ್ನು ಕುಂಬಾರ ಚಕ್ರ ಎಂದು ಕರೆಯಲಾಗುತ್ತದೆ. ಈ ಚಕ್ರವನ್ನು ಕುಂಬಾರ ತನಗೆ ಬೇಕಾದ ಅಳತೆಗೆ ಮಾಡಿಸಿಕೊಂಡಿರುತ್ತಾರೆ. ಚಕ್ರದ ಮಧ್ಯ ಭಾಗವು ವೃತ್ತಾಕಾರದ ಕಬ್ಬಿಣದ ಸಾಧನವನ್ನು

ಹೊಂದಿರುತ್ತದೆ. ವೃತ್ತಾಕಾರದ ಕಬ್ಬಿಣದ ಮಣೆಯ ಮೇಲೆ ಮಣ್ಣನ್ನು ಇಟ್ಟು ತಮಗೆ ಬೇಕಾದ ಮಡಿಕೆ, ಕುಡಿಕೆ ಇತ್ಯಾದಿಗಳನ್ನು ತಯಾರಿಸುತ್ತಾರೆ.

ಮಡಿಕೆ ಮಾಡಲು ಬಳಸುವ ಚಕ್ರವಾಗಿರುತ್ತದೆ. ಅವರವರ ಅನುಕೂಲಕ್ಕೆ ತಕ್ಕಂತೆ ಇದರ ಗಾತ್ರವನ್ನು ಮಾಡಿಸಿಕೊಳ್ಳುತ್ತಾರೆ. ಇದನ್ನು ತಿರುಗುವುದರ ಮೂಲಕ ಮಣ್ಣಿನ ವಿವಿಧ ವಸ್ತುಗಳನ್ನು ತಯಾರಿಸುತ್ತಾರೆ.

**ತಟ್ಟು**–ಬಡಿ ಎಂದು ಇದನ್ನು ಕರೆಯುತ್ತಾರೆ. ಸೊಳದಿಂದ ಇದನ್ನು ಹಸಿಮಡಿಕೆಗಳನ್ನು ಬಡಿದು ರೂಪಗೊಳಿಸುತ್ತಾರೆ. ತಯಾರಿಸಿದ ಯಾವುದೇ ವಸ್ತುಗಳನ್ನು ಸೊಳದಿಂದ ತಟ್ಟುವುದರ ಮೂಲಕ ಅದನ್ನು ಒಂದು ರೂಪಕ್ಕೆ ತಂದು ಅದಾ ಮಾಡುತ್ತಾರೆ.

**ಕಲ್ಲುಗಡಿಗೆ**–ತಳ ದಪ್ಪವಿರುವ ಮಧ್ಯಮ ಗಾತ್ರದ ಗಡಿಗೆ, ಉಪ್ಪು, ಎಣ್ಣೆ ಇತ್ಯಾದಿ ವಸ್ತುಗಳನ್ನು ಹಾಕಿಡಲು ಇದನ್ನು ಬಳಸುವರು.

ಈ ರೀತಿಯಾಗಿ ಮಳವಳ್ಳಿ ಪರಿಸರದ ಜನರು ತಮ್ಮ ವೃತ್ತಿ, ಕುಲಕಸುಬುಗಳಲ್ಲಿ ಬಳಸುವ ಭಾಷಿಕ ಪದಕೋಶಗಳನ್ನು ಕಾಣಬಹುದಾಗಿದೆ. ಮಳವಳ್ಳಿ ಪರಿಸರದ ಜನರಾಡುವ ಮಾತಿನಲ್ಲಿ ಇಂದಿಗೂ ಈ ಪದಗಳು ಆಯಾ ಕುಲಕಸುಗಳನ್ನು ನಂಬಿಕೊಂಡು ಇರುವ ಜನರ ಬದುಕಿನಲ್ಲಿ ಆಸುಹೊಕ್ಕಾಗಿರುವುದನ್ನು ಕಾಣಬಹುದು.

ಪ್ರತಿಯೊಂದು ನುಡಿಗಟ್ಟು, ಪದಗಳು ಪ್ರತಿಯೊಂದು ಸಮುದಾಯಗಳ ವೃತ್ತಿಗಳಿಂದ ಹುಟ್ಟಿಕೊಂಡಿರುವವು. ಕೆಲವು ನುಡಿಗಟ್ಟುಗಳನ್ನು ಕೆಲವರು ಮಾತ್ರ ಬಳಸುತ್ತಾರೆ. ಅವರು ಬಳಸುವ ಮಾತಿನ ಮೂಲಕ ಅವರ ಸಮುದಾಯ ಮತ್ತು ಕಸುಬುಗಳನ್ನು ಗುರುತಿಸಬಹುದು. ಆ ರೀತಿಯಾಗಿ ಸಮಾಜದಲ್ಲಿ ಭಾಷೆಯು ತನ್ನ ವೈಶಿಷ್ಟ್ಯತೆಯನ್ನು ಉಳಿಸಿಕೊಂಡು ಬಂದಿದೆ. ಕುಲ ಕಸುಬುಗಳಲ್ಲಿ ಬಳಸುವ ಒಳನುಡಿಗಳ ಮೂಲಕ ಭಾಷೆಯ ಬೆಳವಣಿಗೆ ಮತ್ತು ಜೀವಂತಿಕೆಯನ್ನು ಕಾಣಬಹುದು.

ಅದೇ ರೀತಿ ಈ ಮೇಲಿನ ಮೂರು ಸಮುದಾಯಗಳು ವೃತ್ತಿ ಆಧಾರಿತ ಜಾತಿಗಳಾಗಿ ಸಮಾಜದಲ್ಲಿ ಇರುವುದನ್ನು ಕಾಣಬಹುದು. ಮ್ಯಾದರು, ಬೆಸ್ತರು, ಕುಂಬಾರ ಸಮುದಾಯದ ಜನರು ಬಳಸುವ ಮಾತಿನ ಮೂಲಕ ಇವರು ಇದೇ ಸಮುದಾಯದ ಜನರು ಎಂದು ಗುರುತಿಸುವಷ್ಟು ಸ್ವತಂತ್ರ ಮತ್ತು ಕಸುಬು ಆಧಾರಿತ ಭಾಷೆಯನ್ನು ಬಳಸುವುದನ್ನು ಗುರುತಿಸಲಾಗುವುದು. ವೃತ್ತಿ ಆಧಾರಿ ಭಾಷೆಯ ಮೂಲಕ ಒಂದು ಜನಾಂಗವನ್ನು ಹೇಗೆ ಗುರುತಿಸಲಾಗುತ್ತದೆ ಎನ್ನುವುದನ್ನು ಕೆಲವು ಉದಾಹರಣೆಗಳೊಂದಿಗೆ ನೋಡಬಹುದು.

ಮ್ಯಾದ ಜನಾಂಗದಲ್ಲಿ ಬಳಕೆಯಲ್ಲಿರುವ ಭಾಷೆಯನ್ನು ಗಮನಿಸುವುದಾದರೆ,

- ಕುಕ್ಕೆ ಕುಕ್ದಂಗೆ ಕುಕ್‌ಬುಡ್ತಿನಿ ನಿನ್ನ
- ಕ್ವಟ್ದಲ್ ಎಟ್ಟು ಅವನ್ಗೆ ಅದೇಷ್ಟ್ ಕುಡ್ದನು ಕುಡಿಲಿ
- ಕ್ವಟ ತಕ ಎಟ್‌ಬುಡ್ತಿನಿ
- ತಟ್ಟಿ ತಾರ್‍ಸದಂಗೆ ತಾರ್‍ಸಬುತಿನ್ ನಿನ್ನ
- ಮೂಡೆಗ್ ಬುಟ್ಟಂಗ್ ಬುಡ್ತಿನ್ ನೋಡು
- ತೊಂಬ್ಯಂಗ್ವಳೆ
- ತೊಂಬ್ಯಂಗ್ವನೆ
- ಚಾಪೆ ಸುತ್ತಂಗ್‌ಸುತ್‌ಬುಡ್ತಿನಿ

ಈ ರೀತಿಯಾದ ಪದಗಳನ್ನು ಬಳಸುವುದು ಈ ಮ್ಯಾದರು ಮಾತ್ರ. ಈ ರೀತಿಯ ವಾಕ್ಯಗಳ ಬಳಕೆಯು ಈ ಸಮುದಾಯದ ಜನರಲ್ಲಿ ಬಳಸುವುದರಿಂದ ನಾವು ಆ ಸಮುದಾಯದ ಜನರೆಂದು ಗುರುತಿಸಬಹುದು. ಭಾಷಾ ಬಳಕೆಯ ಹಿನ್ನೆಲೆಯಿಂದಲು ಸಹ ಒಂದು ಸಮುದಾಯದ ಅಸ್ಮಿತೆಯನ್ನು, ಅವರ ಭಾಷೆಯ ಬಳಕೆಯ ಕ್ರಮವನ್ನು ಗುರುತಿಸಲು ಸಾಧ್ಯವಾಗುತ್ತದೆ.

ಒಂದು ಜನಾಂಗವು ಬಳಸುವ ಭಾಷೆಯ ಮೂಲಕ ಆ ಸಮುದಾಯದ ಅಸ್ಮಿತೆಯನ್ನು ಗುರುತಿಸಲು ಸಾಧ್ಯವಾಗುತ್ತದೆ. ಇನ್ನು ಬೆಸ್ತ ಸಮುದಾಯದೊಳಗೆ ಬಳಸುವ ಮಾತುಗಳನ್ನು ಗಮನಿಸಬಹುದು.

- ಬಲೆ ಬೀಸ್ದಂಗ ಬೀಸ್ಬುಡ್ತಿನಿ ನಿನ್ನ
- ಗಾಣ/ಗಾಳ ಆಕ್ತಾವ್ನೆ ನೋಡು
- ಪುಟ್‌ಗಾಕ್ದ್ ಸೀಗ್ಡಿಯಂಗಾಡ್ತನೆ
- ಮೀನಿದ್ರೆ ಮಿಂಡ, ಖಂಡ ಇದ್ರೆ ಗಂಡ
- ಕೊಕ್ರುಗೊಂದ್ ಕೆರೆಯೆ, ಕೊರ್‍ಮನ್‌ಗೊಂದೂರೆ

ಈ ರೀತಿಯ ಬಳಕೆಯ ಪದಗಳು, ನುಡಿಗಟ್ಟುಗಳು, ಗಾದೆಗಳು ಆ ಜನಾಂಗದಲ್ಲಿ ಮಾತ್ರ ಬಳಸುವ ಪದಗಳಾಗಿರುತ್ತವೆ. ಈ ರೀತಿ ಪ್ರತ್ಯೇಕ ಮಾತಿನ ಬಳಕೆಯ ಮೂಲಕ ನಾವು ಅವರ ಕುಲಕಸುಬುಗಳನ್ನು ಗುರುತಿಸಬಹುದು. ಒಂದು ಭಾಷೆಯು ಈ ರೀತಿಯಾಗಿ ಕಸುಬುಗಳ ಒಳನುಡಿಗಳೊಂದಿಗೆ ವಿಶಿಷ್ಟವಾದ ಭಾಷಾ ಬಳಕೆಯನ್ನು ಗುರುತಿಸಬಹುದು.

ಕುಂಬಾರ ಸಮುದಾಯದಲ್ಲಿ ಬಳಸುವ ಮಾತಿಗಳು, ನುಡಿಗಟ್ಟುಗಳ, ಗಾದೆಗಳನ್ನು ಕಾಣಬಹುದು. ಕುಂಬಾರರನ್ನೆ ಆದರಿಸಿ ಹುಟ್ಟಿಕೊಂಡಿರುವ ಮಾತುಗಳು ಮತ್ತು ಈ

ಸಮುದಾಯದೊಳಗೆ ಬಳಕೆಯಲ್ಲಿರುವ ಮಾತಿನ ರೂಪಗಳನ್ನು ಈ ಕೆಳಕಂಡಂತೆ ಗುರುತಿಸಬಹುದು.

- ಮಡ್ಕೆ ತಟ್ದಂಗೆ ತಟ್‌ಬುಡ್ತಿನಿ
- ಅದ ಮಾಡ್‌ಬುಡ್ತಿನಿ ನೋಡು
- ಗುಡಾಣಂದ್ಗೆ ವಟ್ಟೆ ಬೆಳ್ಸಕಂಡ್ವನೆ ನೋಡು
- ಚಕ್ರ ತಿರ್ಗದಂಗೆ ತಿರ್ಗಿಸ್‌ಬುಡ್ತಿನ್ ನೋಡು
- ಕುಂಬಾರನಿಗೆ ವರುಷ ದೊಣ್ಣೆಗೆ ನಿಮಿಷ
- ಕುಂಬಾರ್‌ನುಗು ಮಾಡ್‌ಕ್ ಕೆಲ್ಸಿಲ್ದೆ ಮಡ್ಕೆ ತಟ್ತಿದ್ನಂತೆ
- ಮೂತಿ ನೋಡು ಕರಿ ಮಡ್ಕೆ ಇದ್ದಂಗದೆ
- ಕುಂಬಾರ್‍ನ್ಗೆ ಮಾಡ್ಕೆ ಕೇಮಿಲ್ದೆ ಮಕ್ಕಳ್ ತಿಕ ಬಡ್ದಂತೆ

ಈ ರೀತಿಯಾಗಿ ಪ್ರತಿಯೊಂದು ಕುಲಕಸುಬುಗಳಲ್ಲಿ ಅದರದ್ದೇ ಆದ ಕಸುಬು ಆಧಾರಿತ ಭಾಷೆಗಳು ಬಳಕೆಯಲ್ಲಿರುವುದನ್ನು ಗುರುತಿಸಬಹುದು. ಕೆಲವು ಪದಗಳನ್ನು ಕೆಲವರು ಮಾತ್ರ ಬಳಸುತ್ತಾರೆ. ಕೆಲವರು ಬಳಸುವ ಮಾತಿನ ವಿಶೇಷ ರೂಪಗಳ ಮೂಲಕ ಅವರ ಕಸುಬು ಮತ್ತು ಆ ಕಸುಬಿನಲ್ಲಿ ಬಳಸುವ ಒಳನುಡಿಗಳು ಇಂದಿಗೂ ಉಳಿದುಕೊಂಡಿರುವುದು. ಅವುಗಳನ್ನು ಮೇಲಿನ ಮೂರು ಸಮುದಾಯದ ಜನಾಂಗದವು ಬಳಸುವ ಪ್ರತ್ಯೇಕ ಮಾತಿನ ಮೂಲಕ ಉದಾಹರಣೆಯೊಂದಿಗೆ ಗುರುತಿಸುವ ಪ್ರಯತ್ನವನ್ನು ಮಾಡಲಾಗಿದೆ.

ಮ್ಯಾದರು, ಬೆಸ್ತರು, ಕುಂಬಾರರು ಈ ಸಮುದಾಯಗಳಲ್ಲಿ ಬಳಕೆಗೊಳ್ಳುತ್ತಿರುವ ಪದಗಳು, ನುಡಿಗಟ್ಟುಗಳು, ಗಾದೆಗಳು, ಅವುಗಳ ಅರ್ಥ ಇಂದು ಬೇರೆ ಜನರು ಬಳಸುವುದನ್ನು ಕಾಣಬಹುದು. ಆದರೆ ಅವುಗಳ ಅರ್ಥ ಮತ್ತು ಸಂದರ್ಭಗಳು ಬೇರೆ ಆಗಿರುವುದನ್ನು ಕಾಣಬಹುದು. ಉದಾಹರಣೆಗೆ

"ನಮ್ಮ ಪಕ್ಷದ ಶಾಸಕರಿಗೆ ಗಾಳ ಹಾಕಲಾಗಿದೆ" ಎನ್ನುವ ವಾಕ್ಯವನ್ನು ರಾಜಕಾರಣಿಗಳು ಬಳಸುವ ಭಾಷೆಯಾಗಿದೆ. ರಾಜಕೀಯ ಪರಿಭಾಷೆಯಲ್ಲಿ "ಗಾಳ" ಎನ್ನುವ ಅರ್ಥ ಬೇರೆ ಬಗೆಯದು. ಇಲ್ಲಿ ಬಳಸುವ "ಗಾಳ" ಮನುಷ್ಯರನ್ನು ಸೆಳೆಯಲು ಎಂಬ ಅರ್ಥವನ್ನು ಕೊಡುತ್ತದೆ. ಆದ್ದರಿಂದ ಇದನ್ನು ಬಳಸಿದವರು ಬೆಸ್ತ ಸಮುದಾಯಕ್ಕೆ ಸೇರಿದವರೆಂದು ತೀರ್ಮಾನಿಸಲು ಬರುವುದಿಲ್ಲ. ಆಧುನಿಕ ಸಂದರ್ಭದಲ್ಲಿ ಈ ರೀತಿಯ ಅದೆಷ್ಟೋ ಪದಗಳು ಬೇರೆ ಬೇರೆ ಕ್ಷೇತ್ರಗಳಲ್ಲಿ, ಬೇರೆಯ ಅರ್ಥದ ನೆಲೆಯಲ್ಲಿ ಬಳಕೆಯಾಗುತ್ತಿರುವುದನ್ನು ಗಮನಿಸಬಹುದು. ಆದರೆ ಈ ರೀತಿಯ ಪರಿಭಾಷೆಯ ನುಡಿಗಟ್ಟುಗಳು ಆ ಸಮುದಾಯಗಳಿಂದ

ಬಂದ ಪದಗಳೆ ಆಗಿರುತ್ತವೆ. ಬೇರೆಯ ಸಮುದಯದವರು ಬಳಸುವಾಗ ಅರ್ಥ ಮತ್ತು ಸಂದರ್ಭಗಳು ಬೇರೆ ರೂಪಗಳಾಗಿರುತ್ತವೆ ಎನ್ನುವುದನ್ನು ಮರೆಯಬಾರದು. ಈ ರೀತಿಯ ಅನೇಕ ಉದಾಹರಣೆಗಳನ್ನು ಇಂದು ಕಾಣಬಹುದು. ಅದರಲ್ಲೂ ಮಾಧ್ಯಮಗಳು ಬಳಸುವ ಭಾಷೆಯಂತು ಬಹಳ ಹೀನಾರ್ಥದಿಂದ ಸಮುದಾಯಗಳನ್ನು ಅಣಕಿಸುವಂತೆ ಇಂದು ಬಳಸುತ್ತಿರುವುದು ದುರಂತ. ಮಾಧ್ಯಮ ಮತ್ತು ರಾಜಕೀಯ ಪರಿಭಾಷೆಗಳು ಬಂದು ತಲುಪಿರುವ ಸ್ಥಿತಿಯನ್ನು ಎತ್ತಿ ತೋರಿಸುತ್ತದೆ.

## ಕೊನೆ ಟಿಪ್ಪಣಿ

೧. ಬುಡಕಟ್ಟು ಕುಲಕಸುಬುಗಳು–ಡಾ.ಕೆ.ಎಂ.ಮೈತ್ರಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ಪುಟ–೧೮೨, ೧೮೩

೨. ಟಿ.ವಿ.ವೆಂಕಟಾಚಲಶಾಸ್ತ್ರಿ–'ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಕುಂಬಾರನ ಚಕ್ರ' ಪ್ರಾಚೀನ ಕನ್ನಡ ಸಾಹಿತ್ಯ–ಕೆಲವು ನೋಟಗಳು, ಪುಟ–೯೯

# ಅಧ್ಯಾಯ ಏಳು

## ಮಳವಳ್ಳಿ ಪರಿಸರದ–ಗಾದೆ, ಬಯ್ಗಳ, ಸ್ಥಳನಾಮಗಳ: ಭಾಷಿಕ ಸ್ವರೂಪ

ಈ ಅಧ್ಯಯದಲ್ಲಿ ಮಳವಳ್ಳಿ ಪರಿಸರದಲ್ಲಿ ಬಳಕೆಗೊಳ್ಳುವ ಗಾದೆಗಳು, ಬಯ್ಗಳ, ಸ್ಥಳನಾಮಗಳ ಭಾಷಿಕ ಬಳಕೆಯ ಬಗ್ಗೆ ಚರ್ಚಿಸಲಾಗುತ್ತದೆ. ಪ್ರತಿಯೊಂದು ಪ್ರದೇಶಗಳಲ್ಲೂ ಅದರದ್ದೇ ಆದ ಜನಪದ ಚರ್ಚೆಗಳು ಭಿನ್ನವಾದ ರೀತಿಯಲ್ಲಿ ಬಳಕೆಗೊಳ್ಳುವುದನ್ನು ಕಾಣಬಹುದು. ಅದೆ ರೀತಿ ಮಳವಳ್ಳಿ ಪರಿಸರದಲ್ಲಿ ಬಳಕೆಗೊಳ್ಳುವ ಜನಪದ ಮತ್ತು ಭಾಷಿಕ ಮೂಲದ ಅಂಶಗಳು ಹೇಗೆ ಪ್ರಾದೇಶಿಕವಾಗಿ ವೈವಿದ್ಯತೆಯನ್ನು ಕಾಯ್ದುಕೊಂಡಿದೆ ಎಂಬ ವಿಚಾರವನ್ನು ಕಾಣಬಹುದು.

ಭಾಷೆ ಎನ್ನುವುದು ಮಾತಿನ ರೂಪವಾಗಿರುವುದರಿಂದ ಒಂದು ಭಾಷೆ ಉಳಿದಿರುವುದೇ ಆ ಭಾಷೆಯನ್ನು ಆಡುವ ಜನರ ಮೂಲಕ. ಇಂದು ಭಾಷೆ ಉಳಿದಿರುವುದು ಹಳ್ಳಿಗಾಡಿನ ಜನರ ಮೂಲಕ ಎಂದರೆ ತಪ್ಪಲ್ಲ. ಜನಪದರು ಪ್ರತಿಯೊಂದು ಘಟನೆಯನ್ನು ಕಟ್ಟಿ ಆಡುವ ಪದ್ಧತಿ ಇರುವುದನ್ನು ಕಾಣಬಹುದು. ಖುಷಿ ಇರಲಿ, ದುಃಖ ಇರಲಿ, ಹುಟ್ಟಿರಲಿ, ಸಾವಿರಲಿ, ಹಬ್ಬ, ಆಚರಣೆ, ಮದುವೆ, ಒಸುಗೆ ಎಲ್ಲದ್ದಕ್ಕೂ ಒಂದೊಂದು ಅರ್ಥ ಇರುತ್ತಿತ್ತು. ಆ ಸಂದರ್ಭಗಳಲ್ಲಿ ಬಳಸುವ ಭಾಷೆ ಬಹಳ ವಿಶೇಷವಾದ ಸಂದರ್ಭ ಮತ್ತು ಮಾತಾಗಿರುತ್ತಿತ್ತು. ಆ ಮಾತಿನ ಬಳಕೆಯ ಕ್ರಮ ಮತ್ತು ಅರ್ಥವನ್ನು ತಿಳಿಸುವುದೇ ಈ ಅಧ್ಯಾಯದ ಬಹಳ ಮುಖ್ಯವಾದ ಪ್ರಯತ್ನ.

### ೭.೧. ಗಾದೆ

ಗಾದೆಗಳು ಮನುಷ್ಯನ ಹುಟ್ಟಿನಿಂದ ಆರಂಭವಾಗಿವೆ ಎನ್ನಲಾಗುತ್ತದೆ. ಬದುಕಿನ ಅವಿಭಾಜ್ಯ ಅಂಗವಾಗಿ ಈ ಗಾದೆಗಳು ಮೈಗೂಡಿರುವುದನ್ನು ಕಾಣಬಹುದು. ಗಾದೆಗಳು ವ್ಯಾಪಕ ಮಾನವೀಯ ಮೌಲ್ಯಗಳನ್ನು ಹೊಂದಿವೆ. ಸುತ್ತಮುತ್ತಲ ಜಗತ್ತಿನ ಸಂಪರ್ಕ ಕಲ್ಪಿಸಿಕೊಳ್ಳುವಾಗ ಚಾಣಾಕ್ಷತನದಿಂದ ಹುಟ್ಟಿಕೊಂಡದ್ದೇ ಗಾದೆಗಳು. ಗಾದೆಗಳು ಮನುಷ್ಯ ಸ್ವತಂತ್ರ ಸೃಷ್ಟಿ, ಅವನ ಪ್ರತಿಭೆಗನುಗುಣವಾಗಿ ಹುಟ್ಟಿಕೊಂಡದ್ದು, ಇದು ಮನುಷ್ಯನ ಸ್ವತ್ತಾಗಿ ರೂಪಿಗೊಂಡಿರುವಂತಹದ್ದು.

ಗಾದೆಗಳು ಜನಸಾಮಾನ್ಯರಿಂದ ಹುಟ್ಟಿ ಸಾಹಿತ್ಯ ಮಟ್ಟಕ್ಕೆ ಬೆಳೆದು ನಿಂತಿರುವುದನ್ನು ಗಮನಿಸಬಹುದು. ಗಾದೆಗಳಿಲ್ಲದ ದೇಶವಾಗಲಿ, ಭಾಷೆಯಾಗಲಿ ಇಲ್ಲ. ಜನ ಸಾಮಾನ್ಯರಿಂದ ಹುಟ್ಟಿಕೊಂಡ ಗಾದೆಗಳು ಪ್ರತಿಯೊಂದು ಸ್ವಭಾವದ ಜೀವಿಗಳ ಚಿತ್ರಣವನ್ನು ಈ ಗಾದೆಗಳಲ್ಲಿ ಕಾಣಬಹುದು. ಜನಪದರ ಬದುಕಿನ ಅವಿಭಾಜ್ಯ ಅಂಗವಾಗಿ ಬೆಳೆದು ಅವರ ನೋವು-ನಲಿವು, ಕಷ್ಟ-ಸುಖ, ಹಬ್ಬ-ಆಚರಣೆ ಇತ್ಯಾದಿಗಳಿಂದ ಹುಟ್ಟಿಕೊಂಡದ್ದು. ಗಾದೆಗಳಲ್ಲಿ ಮನುಷ್ಯನ ಬದುಕಿನ ಅನೇಕ ಅಂಶಗಳು ಇದರಲ್ಲಿ ಸೇರಿರುವುದನ್ನು ಗಮನಿಸಬಹುದು.

ಈ ಗಾದೆಗಳು ಮನುಷ್ಯರ ಶ್ರಮ ಮತ್ತು ಸಮಯಕ್ಕೆ ಅನುಗುಣವಾಗಿ ಹುಟ್ಟಿಕೊಂಡವು. ಇವು ಹಳ್ಳಿಗಾಡಿನ ಜನರ ಭಾಷಿಕ ಕ್ರಮ, ಬಳಕೆಯ ವಿಧಾನ, ಅರ್ಥದ ನೆಲೆಗಳನ್ನು ಈ ಗಾದೆಗಳಲ್ಲಿ ಗುರ್ತಿಸಬಹುದು. ಇವು ಯಾರ ಸ್ವತ್ತಲ್ಲ ಸಾರ್ವತ್ರಿಕವಾದ ಬಳಕೆಯ ಭಿನ್ನತೆಯನ್ನು ಹೊಂದಿರುತ್ತವೆ. ಗಾದೆಗಳು ಸಮಾಜದಿಂದ ಸಮಾಜಕ್ಕೆ, ವೃತ್ತಿಯಿಂದ ವೃತ್ತಿಗೆ, ಜಾತಿಯಿಂದ ಜಾತಿಗೆ, ಪ್ರದೇಶದಿಂದ ಪ್ರದೇಶಕ್ಕೆ ಭಿನ್ನತೆಯನ್ನು ಹೊಂದಿರುವುದನ್ನು ಕಾಣಬಹುದು. ಗಾದೆಗಳು ಮನುಷ್ಯರ ಪ್ರತಿಭೆಯನ್ನು, ಅವರ ನೈಪುಣ್ಯತೆಯನ್ನು ಎತ್ತಿ ತೋರುತ್ತವೆ.

ಗಾದೆಗಳು ಮನುಷ್ಯರ ಅನುಭವಗಳ ಆಗರವಾಗಿವೆ. ಗಾದೆಗಳು ಜನಭಾಷೆ ಅಂಗಗಳು. ಭಾಷಿಕ ಚರಿತ್ರೆಗೆ ಬಹಳ ಮುಖ್ಯವಾದ ಅಂಗ. ಇವುಗಳಲ್ಲಿ ಜೀವನ ಪ್ರತಿಮೆಗಳನ್ನಾಗಿ ಬಳಸುತ್ತಿವೆ. ಇಲ್ಲಿ ಬಳಕೆಗೊಂಡಿರುವ ಭಾಷೆ ಆಯಾ ಪ್ರದೇಶದ ಜನಭಾಷೆಯನ್ನು ಪ್ರತಿನಿಧಿಸುತ್ತದೆ. ಗಾದೆಗಳ ಕರ್ತೃ ಯಾರು? ಎಂದು ಗುರುತಿಸುವುದು ಕಷ್ಟ.

ಗಾದೆಗಳು ಒಂದು ಜನಾಂಗ ಸಂಸ್ಕೃತಿಯನ್ನು ಪ್ರಸಾರಮಾಡುವ ಪ್ರತಿಬಿಂಬದಂತೆ ಗೋಚರಿಸುತ್ತವೆ. ಯಾರೂ ಇವುಗಳನ್ನು ಉದ್ದೇಶಪೂರಕವಾಗಿ ಕಟ್ಟಿದ್ದಲ್ಲ. ಮಾತಿನ ಸೂಕ್ತ ಸಂದರ್ಭದಲ್ಲಿ, ಸನ್ನಿವೇಶಗಳನ್ನು ಆಧರಿಸಿ ಹುಟ್ಟಿಕೊಂಡವುಗಳು.

ಗಾದೆಗಳು ಜನಪದ ಸಾಹಿತ್ಯದ ಒಂದು ಪ್ರಕಾರವಾಗಿ ಇಂದು ಬೆಳೆದಿವೆ. ಇದರ ಹುಟ್ಟಿಗೆ ಭಾಷೆಯ ಬಹಳ ಮುಖ್ಯವಾದ ಅಂಗ ಎಂದರೆ ತಪ್ಪಾಗಲಾರದು. ಜನರ ಜೀವನಾನುಭವಗಳನ್ನು ಗಾದೆಗಳ ಮೂಲಕ ಹಿಡಿದಿಡಲಾಗಿದೆ.

'ಗಾಥಾ' ಎನ್ನುವ ಸಂಸ್ಕೃತ ಪದದಿಂದ ಗಾದೆಯು ಹುಟ್ಟಿರುವುದನ್ನು ಗುರುತಿಸಬಹುದು. ಈ ರೀತಿಯಾಗಿ ಗಾದೆಗಳು ತಮ್ಮದೇ ಆದ ಭಾಷಿಕ ಮಹತ್ವವನ್ನು ಹೇಗೆ ಪಡೆದುಕೊಂಡಿವೆ

ಎನ್ನುವುದನ್ನು ಇಲ್ಲಿ ವಿವರಿಸಲಾಗಿದೆ. ಮಳವಳ್ಳಿ ಪರಿಸರದಲ್ಲಿ ಬಳಕೆಗೊಳ್ಳುವ ಗಾದೆಗಳ ಭಾಷಿಕ ಬಳಕೆ, ಅರ್ಥದ ನೆಲೆಗಳನ್ನು ಈ ಅಧ್ಯಾಯದಲ್ಲಿ ವಿವರಿಸಲಾಗುವುದು.

**ಅಟ್ ಮ್ಯಾಲೆ ವೊಲೆ ಉರಿತು, ಕೆಟ್ ಮ್ಯಾಲೆ ಬುದ್ದಿಬತ್ತು**–ಈ ಗಾದೆ ಮಾತನ್ನು ವ್ಯಕ್ತಿಗಳಿಗೆ ಬಳಸಿ ಹೇಳುವ ಮಾತು. ಅಡಿಗೆ ಆದ ಮೇಲೆ ಒಲೆ ಉರಿದರೆ ಪ್ರಯೋಜನ ಇಲ್ಲ, ಕೆಟ್ಟದ್ದಾದ ಮೇಲೆ ಬುದ್ಧಿ ಬಂದರೆ ಪ್ರಯೋಜನವಿಲ್ಲ ಎನ್ನುವ ಅರ್ಥದಲ್ಲಿ ಈ ಗಾದೆಯನ್ನು ಬಳಸುತ್ತಾರೆ.

**ಕೋಳಿ ಕೇಳಿ ಕಾರ ಅರೀಬೇಕೇ**– ಇದು ಸವಾಲಿನ ಮಾತಾಗಿ ಪರಿಣಮಿಸಿರುವುದನ್ನು ಕಾಣಬಹುದು. ಯಾರ ಅಪ್ಪಣೆಯನ್ನು ಕೇಳದೆ ಕೆಲಸ ಮಾಡುವುದು ಎನ್ನುವ ಅರ್ಥದ ನೆಲೆಯಲ್ಲಿ ಈ ಗಾದೆಯನ್ನು ಬಳಸುತ್ತಾರೆ. ಯಾರ ಮುಲಾಜಿಗೂ ಒಳಗಾಗದೆ ರಾಜಾರೋಷವಾಗಿ, ಯಾರ ಅಪ್ಪಣೆಗಾಗಿ ಕಾಯದೆ ಸ್ವತಂತ್ರವಾಗಿ ಕೆಲಸಮಾಡುವುದು ಎನ್ನುವ ಅರ್ಥದಲ್ಲಿ ಬಳಸಲಾಗುತ್ತದೆ.

**ಕೊಟ್ಟೋನು ಕೋಡಂಗಿ ಈಸ್ಗಂಡೋನು ಈರ್‌ಬದ್ರ**– ಯಾವುದೇ ವಸ್ತುಗಳನ್ನು ಕೊಟ್ಟು ಅವರಿಂದ ತೆಗೆದುಕೊಳ್ಳಲು ಕಷ್ಟ ಪಡುವ ವ್ಯಕ್ತಿಗಳು ಈ ಮಾತನ್ನು ಹೇಳಲಾಗಿದೆ. ಕೊಟ್ಟವನು ದಡ್ಡ, ಕೊಟ್ಟವನು ಕೋತಿ ಎನ್ನುವ ಅರ್ಥದಲ್ಲಿಯೂ ಸಹ ಬಳಸಲಾಗುತ್ತದೆ. ಇದು ಹಣವನ್ನು ಕೊಟ್ಟು ಅದನ್ನು ವಾಪಾಸು ತೆಗೆದುಕೊಳ್ಳಲಾಗದ ವ್ಯಕ್ತಿಗಳಿಗೆ ಹೆಚ್ಚು ಬಳಸುವುದನ್ನು ಕಾಣಬಹುದು.

**ಮೀನಿದ್ರೆ ಮಿಂಡ, ಖಂಡ ಇದ್ರೆ ಗಂಡ**– ಇದು ಹೆಣ್ಣನ್ನು ಕುರಿತು ಬಳಸುವ ಮಾತಾಗಿದೆ. ಇದೊಂದು ಪಕ್ಷಾಂತರ ಮಾಡುವ, ವ್ಯಕ್ತಿಗಳನ್ನು ಬದಲಾಯಿಸುವ, ಗಂಡಂದಿರುನ್ನು ಬಿಟ್ಟು ಬೇರೆ ಗಂಡಸಿನ ಜೊತೆ ಸಂಬಂಧ ಹೊಂದುವ, ಆಸ್ತಿ, ಹಣ, ಅಂತಸ್ತು ನೋಡಿ ಮಣೆ ಹಾಕುವ ಹೆಣ್ಣಿಗೆ ಬಳಸುವ ಗಾದೆಯ ಮಾತಾಗಿದೆ. ಮಿಂಡ ಎಂದರೆ–ಗಂಡನಲ್ಲದ ಗಂಡಸನ್ನು ಮಿಂಡ ಎಂದು ಕರೆಯುತ್ತಾರೆ. ಖಂಡ ಎಂದರೆ ಮಾಂಸ. ಮೀನು ಮತ್ತು ಮಾಂಸಗಳನ್ನು ತಂದು ಕೊಡುವ ವ್ಯಕ್ತಿಗಳ ರೂಪಕವಾಗಿ ಇಲ್ಲಿ ಬಳಸಲಾಗಿದೆ.

**ಬಡವಾ ನೀ ಮಡ್ಗದಂಗಿರು**–ಈ ಗಾದೆಯು ಯಾರ ಸಹವಾಸವನ್ನು ಮಾಡದೆ ತನ್ನ ಪಾಡಿಗೆ ಇರು ಎನ್ನುವ ಅರ್ಥದಲ್ಲಿ ಬಳಸಲಾಗುತ್ತದೆ. ಬೇರೆಯವರ ತಂಟೆ ತಕರಾರಿಗೆ ಹೋಗದೆ ಇರು ಎನ್ನುವ ಅರ್ಥವನ್ನು ಸಹ ಕೊಡುತ್ತದೆ.

**ಬಡವನ ಕೋಪ ದವಡೆಗೆ ಮೂಲ**–ಇಲ್ಲದವರ ಬಗೆಗೆ ಹೇಳುವ ಮಾತು. ಆರ್ಥಿಕವಾಗಿ ದುರ್ಬಲರಾದ ವ್ಯಕ್ತಿಗಳನ್ನು ಕುರಿತು ಹೇಳುವ ಮಾತು. ಬಡವ ಕೋಪಿಸಿಕೊಂಡರೆ ವ್ಯರ್ಥ ಎನ್ನುವ ಅರ್ಥದಲ್ಲಿ ಬಳಸಲಾಗುತ್ತದೆ. ಇರುವವರ ಮೇಲೆ ಇಲ್ಲದವರು ಎಷ್ಟೇ ಕೋಪಿಸಿಕೊಂಡರು ಪ್ರಯೋಜನಕ್ಕೆ ಬರುವುದಿಲ್ಲ, ಅದು ಅವನಿಗೆ ತೊಂದರೆ ಕೊಡುತ್ತದೆ ಎನ್ನುವ ಅರ್ಥದಲ್ಲಿ ಬಳಸಲಾಗಿದೆ.

**ಬಡವನ ಹೆಂಡತಿಯನ್ನು ಬಲ್ಗಾರ್ ಕೇದ್ರೆ, ಬಲ್ಗಗರನ ಯಂಡ್ತಿಯ ಬಗ್ವಂತ ಕೇದ**–ಬಡವ ಶ್ರೀಮಂತರ ನಡವಿನ ಮಾತಾಗಿದೆ. ಬಲಗಾರ ಎಂದರೆ ಶ್ರೀಮಂತ. ಶ್ರೀಮಂತರು ಬಡವರನ್ನು ನಡೆಸಿಕೊಳ್ಳುವ ರೀತಿ, ಶೋಷಿಸುವ ಬಗೆಯನ್ನು ಈ ಗಾದೆ ಹೇಳುತ್ತಿದೆ. ಬಡವರ ಅಸಹಾಯಕ ಸ್ಥಿತಿ ಮತ್ತು ಶ್ರೀಮಂತರ, ದೈಹಿಕವಾಗಿ ಬಲ ಇರುವ ವ್ಯಕ್ತಿಗಳ ಬಗೆಗೆ, ಅವರ ನಡುವಿನ ಅಂತರದ ಬಗ್ಗೆ ಈ ಗಾದೆ ವಿವರಿಸುತ್ತದೆ.

**ತಬ್ಲಿಗೆ ತಲೆ ಎಲ್ಲ ಅರ್ಪೆ**–ತುಂಬ ಮಾತನಾಡುವವ, ವಾಚಾಳಿಗೆ ಬಳಸುವ ಗಾದೆಯಾಗಿದೆ. ತಬ್ಲಿ ಎಂದರೆ ಯಾರು ಇಲ್ಲದ ಅನಾಥ ವ್ಯಕ್ತಿಗೆ ಬಳಸಲಾಗುತ್ತದೆ. ಯಾರ ಅಂಕೆ ಶಂಕೆಯಲ್ಲಿ ಬೆಳೆಯದ ವ್ಯಕ್ತಿ ಯಾರಿಗೂ ಎದರುವುದಿಲ್ಲ ಎನ್ನುವ ಅರ್ಥದಲ್ಲಿ ಬಳಸಲಾಗುತ್ತದೆ. ಅರ್ಪೆ ಎನ್ನುವುದು ತುಂಬಾ ಮಾತನಾಡುವವನು ಎನ್ನುವ ಅರ್ಥದಲ್ಲಿ ಬಳಸಲಾಗುತ್ತದೆ.

**ಅನ್ನ ಆಕ್ದ್ ಮನ್ಗೆ ಕನ್ನಾ ಆಕ್ದಂಗೆ**–ನಂಬಿದವರಿಗೆ ಮೋಸ ಮಾಡುವುದು ಎನ್ನುವ ಅರ್ಥದಲ್ಲಿ ಬಳಸುವ ಗಾದೆಯಾಗಿದೆ. ಕನ್ನ ಎಂದರೆ ಕಳ್ಳತನ ಮಾಡುವುದು. ತಾನು ಇದ್ದ ಮನೆಯಲ್ಲಿ, ತನ್ನನ್ನು ನಂಬಿದವರ ಮನೆಯಲ್ಲಿ ಕದಿಯುವ ವ್ಯಕ್ತಿಗಳಿಗೂ ಈ ಗಾದೆಯ ಮಾತನ್ನು ಬಳಸಲಾಗುತ್ತದೆ.

**ಆಳಿದ್ದೋನ್ಗೆ ಆರಂಬ, ಕೂಳಿದ್ದೋನ್ಗೆ ಬಂದು ಬಳ್ಗ**–ಇದು ವ್ಯವಸಾಯ ಮತ್ತು ಧಾನ್ಯಗಳ ಬಗೆಗೆ ಹೇಳುವಾಗಿನ ಮಾತು. ಆಳು ಎಂದರೆ ವ್ಯವಸಾಯ ಮಾಡಲು ಹೆಚ್ಚು ಜನರು ಬೇಕು, ಜನರಿದ್ದರೆ ವ್ಯವಸಾಯ ಸುಗಮವಾಗಿ ಮಾಡಬಹುದು. ಇಲ್ಲ ಎಂದರೆ ಬಹಳ ಕಷ್ಟವಾಗುತ್ತದೆ. ಕೂಳು ಎಂದರೆ ಅನ್ನ. ಆಹಾರ ಇದ್ದರೇ, ಊಟ ಕೊಟ್ಟರೆ ಬಂದು ಬಳ್ಗ ಬಂದು ಹೋಗುವವರು ಹೆಚ್ಚು, ಇಲ್ಲ ಎಂದರೆ ಯಾರು ಬರವುದಿಲ್ಲ ಎನ್ನುವ ಅರ್ಥದಲ್ಲಿ ಬಳಸಿರುವ ಗಾದೆ.

**ಆಳ್ ನೋಡುದ್ರೆ ಗಟಾನ್ ಗಟ, ಬಾಳ್ ನೋಡುದ್ರೆ ಬಂಡ್ಗೇಡು**–ಈ ಗಾದೆ ಮಾತು ದೇಹ ದೊಡ್ಡದಾಗಿ ಬೆಳೆಸಿಕೊಂಡು ಕೆಲಸ ಮಾಡದೆ ಸೋಂಬೇರಿ ತನವನ್ನು ತೋರುವ ವ್ಯಕ್ತಿಗೆ ಬಳಸುವ ಮಾತು. ಆಳ್ ಎನ್ನುವುದು ವ್ಯಕ್ತಿಯನ್ನು, ಬಾಳ್ ಎನ್ನುವುದು ಬದುಕು ಎನ್ನುವುದನ್ನು ಸೂಚಿಸುತ್ತದೆ. ಬಂಡ ಎನ್ನುವುದು ಯಾವುದಕ್ಕೂ ಎದರದ ವ್ಯಕ್ತಿ ಎನ್ನುವುದನ್ನು ಬಳಸಲಾಗುತ್ತದೆ.

**ಆಸೆ ಅದೆ ಅಂತ ಆಕಾಸ್ಕೆ ಏಣಿ ಆಕಕಾದದೆ**–ಆಸೆ ಬುರುಕರಿಗೆ ಹೇಳುವ ಗಾದೆಯ ಮಾತು. ಅತಿಯಾದ ಆಸೆ ಉಳ್ಳ ವ್ಯಕ್ತಿಗಳಿಗೆ ಬಳಸುವ ಗಾದೆ ಮಾತು. ನಮ್ಮ ಮಿತಿಗೆ ತಕ್ಕಂತೆ, ನಮ್ಮ ನಮ್ಮ ಖರ್ಚಿಗೆ ತಕ್ಕಂತೆ ನಮ್ಮ ಬಯಕೆಗಳನ್ನು ಹೊಂದಬೇಕು ಎಂದು ಈ ಗಾದೆ ಮಾತು ತಿಳಿಸುತ್ತದೆ. ಆದಾಯಕ್ಕೆ ತಕ್ಕಂತೆ ಆಸೆ ಪಡಬೇಕು ಎಂದು ಈ ಗಾದೆ ಮಾತು ತಿಳಿಸುತ್ತದೆ.

**ಮನ್ಗೆ ಮಾರಿ ಊರ್ಗೆ ಉಪ್ಕಾರಿ**–ಈ ಗಾದೆ ಮಾತನ್ನು ತನ್ನ ಮನೆಗೆ ಉಪಯೋಗವಾಗದೆ, ಬೇರೆ ವ್ಯಕ್ತಿಗಳಿಗೆ, ತನ್ನವರನ್ನು ಹೊರತು ಪಡಿಸಿ ಉಳಿದೆಲ್ಲರಿಗೂ ಉಪಯೋಗ ಮಾಡುವ ವ್ಯಕ್ತಿಗೆ ಬಳಸುವ ಗಾದೆ ಮಾತಾಗಿದೆ.

**ವಣ್ ಮರ ಗಿಣೆ ಕಾದಂಗೆ**–ಕಾಯುವ ಬೇಜಾರನ್ನು, ಏನೂ ಉಪಯೋಗವಿಲ್ಲದ ಕೆಲಸವನ್ನು, ಕಾಯುವಿಕೆಯನ್ನು ಈ ರೀತಿ ಮಳವಳ್ಳಿ ಪರಿಸರದಲ್ಲಿ ಹೇಳುತ್ತಾರೆ. ವಣಗಿರುವ ಮರದಲ್ಲಿ ಏನೂ ಪ್ರಯೋಜನವಿರುವುದಿಲ್ಲ, ಆ ಮರದಲ್ಲಿ ಗಿಳಿ ಕುಳಿತರೆ ಅದಕ್ಕೆ ಯಾವುದೇ ಪ್ರಯೋಜನ ಇರುವುದಿಲ್ಲ. ಅದೇ ರೀತಿ ಪ್ರಯೋಜನಕ್ಕೆ ಬಾರದ ವ್ಯಕ್ತಿಗಳನ್ನು ಕಾಯುವುದು ಕೂಡ ವ್ಯರ್ಥ ಎನ್ನುವ ಅರ್ಥದಲ್ಲಿ ಬಳಕೆಗೊಳ್ಳುವ ಗಾದೆ ಮಾತಾಗಿದೆ.

**ಕೊಕ್ರುಗೊಂದ್ ಕೆರೆಯೆ, ಕೊರ್ಮನ್‌ಗೊಂದೂರೆ**–ಅಲೆಯುವ ವ್ಯಕ್ತಿಗೆ ಬಳಸುವ ಗಾದೆಯ ಮಾತಾಗಿದೆ. ಒಂದು ಕಡೆ ನೆಲೆನಿಲ್ಲದೆ ಅಲೆಮಾರಿ ಬದುಕು ನೆಡೆಸುವ ವ್ಯಕ್ತಿಗಳನ್ನು ಕುರಿತು ಹೇಳಲಾಗುತ್ತದೆ. ಕೊಕ್ಕರೆಗೆ ಒಂದು ಕೆರೆ ಇರುವುದಿಲ್ಲ, ಇದು ಪಕ್ಷಿಗೆ ಸೂಚಿಸಿದರೆ, ಕೊರಮ ಎನ್ನುವುದು ಸಮುದಾಯವನ್ನು ಸೂಚಿಸುತ್ತದೆ. ಕೊರಮ ಸಮುದಾಯದ ವ್ಯಕ್ತಿಗಳು ಅಲೆಮಾರಿಗಳಾಗಿದ್ದರಿಂದ ಈ ಗಾದೆ ಹುಟ್ಟಿದೆ.

**ಯಡೊತ್ನಲ್ ಬಂದ ಎದೆ ಕೆರ್‍ಯೋ ನಂಟ**–ಯಡೊತ್ತು ಎಂದರೆ ಮಧ್ಯಾಹ್ನ ಎಂದು. ಮಧ್ಯಾಹ್ನದಲ್ಲಿ ಬಂದ ನಂಟರು ಸಂಜೆ ಉಳಿಯುತ್ತಾರೆ ಅದರಿಂದ ಖರ್ಚು ಆಗುತ್ತದೆ

ಎನ್ನುವ ಅರ್ಥದ ಹಿನ್ನೆಲೆಯಲ್ಲಿ ಈ ಗಾದೆ ಮಾತನ್ನು ಬಳಸಲಾಗಿದೆ. ಎದೆ ಕೆರೆಯುವುದು ಎಂದರೆ ಗೋಳುಯ್ಯುದುಕೊಳ್ಳುವುದು, ಹಿಂಸೆ ಕೊಡುವುದು, ತೊಂದರೆ ಎನ್ನುವ ಅರ್ಥದಲ್ಲಿ ಬಳಸುತ್ತಾರೆ.

**ಬಡುನ್ಗೆ ಏನ್ ಕೇಮಿ ಅಂದ್ರೆ, ಅಡಿದೇ ಕೇಮಿ**–ಬಡತನದ ಹಸಿವಿನ ತೀವ್ರತೆಯನ್ನು ಹೇಳುವ ಗಾದೆ ಮಾತಾಗಿದೆ. ತಿನ್ನಲು ಆಹಾರವಿಲ್ಲದ ವ್ಯಕ್ತಿಗೆ ತಿನ್ನಬೇಕು ಎನ್ನುವ ಹಂಬಲ ಸದಾ ಇರುತ್ತದೆ ಅದಕ್ಕೆ ಈ ಗಾದೆ ಮಾತು ಬಂದಿದೆ. ಹಸಿದವನು ಸದಾ ಆಹಾರದ ಬಗೆಗೆ ಯೋಚಿಸುತ್ತಿರುತ್ತಾನೆ, ಮಾತನಾಡುತ್ತಿರುತ್ತಾನೆ ಎನ್ನುವ ಅರ್ಥದಲ್ಲಿ ಬಳಸಲಾಗಿರುವ ಮಾತು.

**ಕೊತ್ತಿಗೆ ಚೆಲ್ಲಾಟ, ಇಲಿಗೆ ಪ್ರಾಣ್ ಸಂಕ್ಟ**–ಇದು ಸಮಸ್ಯೆ ಎದುರಾದಾಗ ಬಳಸುವ ಗಾದೆ ಮಾತು. ಕೊತ್ತಿ ಎಂದರೆ ಬೆಕ್ಕು, ಇದರ ಸ್ವಭಾವ ಇಲಿಗಳನ್ನು ಇಡಿದು ತಿನ್ನುವುದು. ಇಲಿಗಳಿಗೆ ಬೆಕ್ಕಿನಿಂದ ತಪ್ಪಿಸಿಕೊಂಡು ಪ್ರಾಣ ಉಳಿಸಿಕೊಳ್ಳುವುದು ಬಹಳ ದೊಡ್ಡ ಸವಾಲಾಗಿರುತ್ತದೆ. ಅದು ಈ ರೂಪದಲ್ಲಿ ಬಳಸಲಾಗುತ್ತದೆ. ಸಮಸ್ಯೆ ಇರುವ ವ್ಯಕ್ತಿಗಳು ಬಳಸುವ ಗಾದೆಯ ಮಾತು.

**ವ್ಯವಸಾಯ ಮನೆ ಮಂದಿ ಎಲ್ಲ ಸಾಯ**–ವ್ಯವಸಾಯದ ಹಿನ್ನೆಲೆಯಿಂದ ಬಂದ ಗಾದೆ ಮಾತಾಗಿದೆ. ವ್ಯವಸಾಯವನ್ನು ನಂಬಿಕೊಂಡು ಬದುಕುತ್ತಿರುವ ವ್ಯಕ್ತಿಗಳು ಬಳಸುವ ಮಾತಾಗಿದೆ. ವ್ಯವಸಾಯವನ್ನು ನಂಬಿಕೊಂಡು ಇಡೀ ಕುಟುಂಬ ಬದುಕು ನಡೆಸುತ್ತಿರುತ್ತದೆ. ವ್ಯವಸಾಯದಲ್ಲಿ ನಷ್ಟವಾದರೆ ಇಡೀ ಕುಟುಂಬ ಬೀದಿಗೆ ಬರುವ ಸ್ಥಿತಿ ಎದುರಾಗುತ್ತದೆ. ಕೊನೆಗೆ ಸಾಯುವ ಸಂಭವವು ಇರುತ್ತದೆ. ಯಾಕೆಂದರೆ ಬೆಳೆಗಳಿಗೆ ಸಾಲ ಮಾಡಿ ಹಣವನ್ನು ವ್ಯಯ ಮಾಡಿರುತ್ತಾರೆ ಅದು ಬರದ ಸಂದರ್ಭದಲ್ಲಿ ರೈತನಿಗೆ ಸಾವೆ ಕೊನೆಯಾಗಿರುತ್ತದೆ. ವ್ಯವಸಾಯವನ್ನು ನಂಬಿಕೊಂಡು ಬದುಕು ನೆಡೆಸುವವರು ನಷ್ಟ ಅನುಭವಿಸಿ ಸಾವನ್ನು ಹೊಂದುವ ಸ್ಥಿತಿಗೆ ತಲುಪುವ ಪ್ರಸಂಗ ಎದುರಾದಾಗ ಈ ಗಾದೆಯ ಮಾತನ್ನು ಬಳಸುತ್ತಾರೆ. ಇದರ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ಗಾದೆಯಾಗಿದೆ.

**ಅದ ನೋಡಿ ಅರ್ಗು, ಬೆದೆ ನೋಡಿ ಬಿತ್ತು**–ಅರ್ಗು ಎಂದರೆ ಬೆಳೆ ಬಂದ ನಂತರ ಕಳೆಯನ್ನು ತೆಗೆಯಲು/ ನಾಶಮಾಡಲು ಬಳಸುವ ಸಾಧನವಾಗಿದೆ. ಇದೊಂದು ವ್ಯವಸಾಯ ಮೂಲದಿಂದ ಬಂದ ಗಾದೆ ಮಾತಾಗಿದೆ. ಅದ ಎಂದರೆ ಸರಿಯಾದ ರೀತಿ ವ್ಯವಸಾಯಕ್ಕೆ ಸರಿ ಹೊಂದುವ ಹಾಗೆ ಭೂಮಿಯನ್ನು ಸಿದ್ಧಗೊಳಿಸುವುದು. ಬೆದೆ ಎಂದರೆ ಬೆಳೆಯನ್ನು

ಆಕಲು ಸರಿಯಾದ ಕಾಲವನ್ನು ನೋಡಿ ಬಿತ್ತನೆ ಮಾಡಬೇಕು ಎನ್ನುವ ಅರ್ಥದ ಹಿನ್ನೆಲೆಯಲ್ಲಿ ಬಳಸಿರುವ ಗಾದೆ ಮಾತು.

ಅರ್ಗ್ಗಿ ಎನ್ನುವುದ ಉಳಿಮೆ ಎನ್ನುವ ಅರ್ಥದಲ್ಲಿ ಬಳಸಿರು ಮಾತು. ಉಳಿಮೆ ಮಾಡಲು ಭೂಮಿ ಮಳೆಯಿಂದ ಸಮ ಪ್ರಮಾಣದ ತೇವಾಂಶವನ್ನು ಹೊಂದಿರಬೇಕು ಆಗ ಸರಿಯಾದ ಉಳಿಮೆ ಮಾಡಲು ಸಾಧ್ಯವಾಗುತ್ತದೆ ಇಲ್ಲವಾದರೆ ಉಳಲು ಆಗುವುದಿಲ್ಲ ಎನ್ನುವ ಅರ್ಥದಲ್ಲಿ ಬಳಸಲಾಗಿದೆ.

**ಅಂಕೆ ಇಲ್ದ್ ಕಪಿ ಲಂಕೆ ಆರ್‌ತಂತೆ**–ನಿಯಂತ್ರಣವಿಲ್ಲದ ಮನಸ್ಥಿತಿಗಳಿಗೆ, ಮನುಷ್ಯರಿಗೆ ಬಳಸುವ ಗಾದೆಯ ಮಾತಾಗಿದೆ. ಅಂಕೆ ಎನ್ನುವುದು ಸರಿಯಾಗಿ, ನಿಯಂತ್ರಣ ಹೊಂದಿರದ ಎನ್ನುವ ಅರ್ಥವನ್ನು ಕೊಡುತ್ತದೆ. ಯಾರ ನಿಯಂತ್ರಣವಿರದ ವ್ಯಕ್ತಿಗಳು ಹೇಗೆ ಬೇಕು ಹಾಗೆ ತಮ್ಮ ಇಷ್ಟ ಬಂದಂತೆ ವರ್ತಿಸುವ ವ್ಯಕ್ತಿಗಳಿಗೆ ಬಳಸುವ ಗಾದೆ ಮಾತಾಗಿದೆ.

**ಗಾಣಗಿತ್ತಿ ಅಯ್ಯೋ ಅಂದ್ರೆ ನತ್ತಿ ತಣ್‌ಗಾದದೆ**–ಗಾಣವನ್ನು ನೆಡೆಸುವವನ ಹೆಂಡತಿ ಗಾಣಗಿತ್ತಿ ಎನ್ನುತ್ತಾರೆ. ಕೇವಲ ಮಾತಲ್ಲಿ ಕರುಣೆ ತೋರಿದರೆ ನತ್ತಿ ತಣ್ಣಗಾಗದು. ಅವಳು ಎಣ್ಣೆ ಹಾಕಿದರೆ ಮಾತ್ರ ತಲೆಯ ಮೇಲಿನ ಉಷ್ಣ ಕಡಿಮೆಯಾಗುತ್ತದೆ ಎನ್ನುವ ಅರ್ಥವನ್ನು ಕೊಡುತ್ತದೆ.

ಉಳ್ಳವರು ಇಲ್ಲದವರರಿಗೆ ಕೊಡುವ ಮನಸ್ಸಿಲ್ಲದೆ ಅವರ ಮೇಲೆ ಕೇವಲ ಮಾತಿಗಷ್ಟೆ ಕರುಣೆ ತೋರಿದರೆ ಪ್ರಯೋಜನವಾಗದು ಎನ್ನುವ ಅರ್ಥದಲ್ಲಿಯೂ ಸಹ ಈ ಗಾದೆ ಮಾತನ್ನು ಬಳಸಲಾಗುತ್ತದೆ.

**ಎಲ್ಲಾ ಗೊತ್ತು ಗಾಣ್ತ್ರಿ ಸಂದಿ ಒಂದ್ ಗೊತ್ತಿಲ್ಲ**–ಎಲ್ಲಾ ವಿಚಾರಗಳು ತಿಳಿದ ವ್ಯಕ್ತಿಗೆ ಬಳಸುವ ಮಾತು. ಪ್ರಬುದ್ಧತೆ ಹೊಂದಿರುವವರಿಗೆ ಹೇಳುವ ಮಾತು. ಎಲ್ಲಾ ತಿಳಿದಿದ್ದರು ತಿಳಿಯದ ಹಾಗೆ ಮಾತನಾಡುವ, ವರ್ತಿಸುವ ವ್ಯಕ್ತಿಗಳಿಗೆ ಬಳಸುವ ಗಾದೆ ಮಾತಾಗಿದೆ

**ಸುಂಕ್ದೋನ್ ತಾವು ಸುಕ್ದುಕ ಏಳ್ಕಂಡ್ರೆ ಏನ್ ಪ್ರಯೋಜ್ನ**–ಸುಂಕ ಕಟ್ಟಿಸಿಕೊಳ್ಳುವ ವ್ಯಕ್ತಿಯ ಜೊತೆ ನಮ್ಮ ಕಷ್ಟಗಳನ್ನು ಹೇಳಿಕೊಂಡರೆ ಆ ವ್ಯಕ್ತಿ ಸುಂಕ ತೆಗೆದುಕೊಳ್ಳುವುದನ್ನು ಬಿಡುವುದಿಲ್ಲ ಎನ್ನುವ ಅರ್ಥದಲ್ಲಿ ಈ ಗಾದೆ ಮಾತನ್ನು ಬಳಸಲಾಗಿದೆ.

**ಹೊಲೆನ್ ಮಾತು, ನೆಲ್ಲುಲ್ಲು ಬೆಂಕಿ ಎರಡೂ ಒಂದೇ**–ಇದು ಜಾತಿ ಸೂಚಕವಾಗಿ ಬಳಕೆಗೊಂಡಿರುವ ಮಾತು. ಜೊತೆಗೆ ಜಾತಿಯ ವ್ಯಕ್ತಿಗಳ ಗುಣ ಮತ್ತು ವರ್ತನೆಯನ್ನು ತಿಳಿಸುವ ಮಾತಾಗಿ ಬಳಸಲಾಗಿದೆ.

ನೆಲ್ಲುಲ್ಲು ಎಂದರೆ ಭತ್ತದ ಸೋಗಿನ ಹುಲ್ಲು. ಅದರಿಂದ ಬೆಂಕಿ ಹಾಕಿದರೆ ಅದು ಪ್ರಯೋಜನಕ್ಕೆ ಬರದು. ಹುಲ್ಲಿನ ಬೆಂಕಿ ಬೇಗ ನಂದಿ ಹೋಗುತ್ತದೆ. ಹೆಚ್ಚು ಪರಿಣಾಮಕಾರಿ ಅಲ್ಲದ್ದು ಎನ್ನುವ ಅರ್ಥದಲ್ಲಿ ಬಳಸಲಾಗುವ ಗಾದೆಯ ಮಾತು.

**ದಂಡ್ ಗೆದ್ರುಲಿಲ್ಲ ದಾಳ್ಗೆದ್ರುಲಿಲ್ಲ ದಾಸಯ್ಯ ನಿನ್ ಗಣಗಂಟೆ ಎದ್ರನೇ**–ದಂಡು ಎಂದರೆ ಸೈನ್ಯ, ಸೈನ್ಯ ಉಂಟುಮಾಡುವ ದಾಳಿಗೆ ಎದರದ ಕೇವಲ ದಾಸಯ್ಯ ಉಂಟುಮಾಡುವ ಗಂಟೆಯ ಸದ್ದಿಗೆ ನಾನು ಎದರುವವನಲ್ಲ, ನಾನೊಬ್ಬ ದೈರ್ಯಶಾಲಿ ಎನ್ನುವುದನ್ನು ತೋರಿಸಿಕೊಳ್ಳುವ ಗಾದೆಯ ಮಾತಾಗಿದೆ. ಯಾರಿಗೂ ಎದರದ ವ್ಯಕ್ತಿಗಳ ದೈರ್ಯದ ಮಾತಿ ದಾಟಿ ಇದಾಗಿದೆ.

**ಕೆಟ್ಟು ಪಟ್ಣ ಸೇರು**–ಕೆಟ್ಟು ಎಂದರೆ ಸರಿಯಾಗಿ ಬದುಕು ನಡೆಸಲಾಗಿದೆ, ಮೂಲ ಸೌಕರ್ಯಗಳಿಲ್ಲದೆ ಇರುವ ವ್ಯಕ್ತಿಗಳು ನಗರವನ್ನು ಸೇರುವುದು ಎನ್ನುವ ಅರ್ಥ.

ಸಾಲ ಮಾಡಿ ತೀರಿಸಲಾಗದೆ. ಕಷ್ಟ ಎದುರಾದಾಗ ಅದನ್ನು ಎದುರಿಸಲಾರದೆ ಇದ್ದಾಗ ಈ ಗಾದೆ ಮಾತು ಬಳಕೆಗೊಳ್ಳುತ್ತದೆ. ಈ ರೀತಿಯ ವ್ಯಕ್ತಿಗಳು ನಗರದಲ್ಲಿ ಹೋಗಿ ತಮ್ಮ ಸಮಸ್ಯೆ ನಿವಾರಿಸಿಕೊಳ್ಳಲ್ಲಿ ಎನ್ನುವ ಕಾರಣದಿಂದ ಪಟ್ಟಣ ಸೇರು ಎಂದು ಹೇಳುವುದು. ನಗರದಲ್ಲಿ ಒಂದಲ್ಲ ಒಂದು ಕೆಲಸ ಮಾಡಿ ಬದುಕಬಹುದು ಎನ್ನುವ ಅರ್ಥದ ಹಿನ್ನೆಲೆಯಲ್ಲಿ ಈ ಗಾದೆ ಮಾತನ್ನು ಬಳಸಲಾಗಿದೆ.

**ಅಲ್ಪನ್ಗೆ ಅಯ್‌ಸ್ವರ್ಯ ಬಂದ್ರೆ ಅರ್ದ ರಾತ್ರಿಲಿ ಕೊಡೆ ಇಡುದ್ರಂತೆ**–ಅಲ್ಪ ಅಂದರೆ ಕಡಿಮೆ ಸಂಪಾದಿಸಿರುವವ ಎಂದು ಅರ್ಥ. ಅದು ಬುದ್ಧಿ ಇರಬಹುದು, ವಿದ್ಯೆ ಇರಬಹುದು, ಹಣ, ಆಸ್ತಿ ಇರಬಹುದು ಯಾವುದೇ ಇರಲಿ ಅದು ಅವನಲ್ಲಿ ಅವಶ್ಯಕತೆಗಿಂತ ಕಡಿಮೆ ಇದ್ದರೆ ಅವರನ್ನು ಅಲ್ಪ ತೃಪ್ತರು ಎಂದು ಕರೆಯಲಾಗುತ್ತದೆ. ಈ ರೀತಿಯ ವ್ಯಕ್ತಿಗಳಿಗೆ ತಕ್ಷಣ ತನಗೆ ಯಾವುದು ಸಿಕ್ಕಿರಲಿಲ್ಲವೊ ಅದು ದೊರೆತಾಗ ವ್ಯಕ್ತಿತ್ವದಲ್ಲಿ ಬದಲಾವಣೆ ಹೊಂದಿದ ವ್ಯಕ್ತಿಗೆ ಬಳಸುವ ಮಾತಾಗಿದೆ.

**ದೇಸಾಂತ್ರ ಓದ್ರು ಸ್ವತಂತ್ರ ಓಗು, ಉಚ್ಚೆ ಕುಡ್ರು ನಿನ್ ಇಚ್ಚೆ ಇಂದ ಕುಡಿ**–ಯಾವುದೇ ಕೆಲಸ ಮಾಡಿದರು ನಮ್ಮ ಸ್ವಂತ ಬುದ್ಧಿಯಿಂದ ಮಾಡಬೇಕು. ಬೇರಯವರ ಮಾತು ಕೇಳಿ ಮಾಡಬಾರದು. ಎಲ್ಲೇ ಹೋದರು ಇಷ್ಟ ಪಟ್ಟು ಹೋಗಬೇಕು ಎನ್ನುವ ಅರ್ಥದಲ್ಲಿ ಈ ಗಾದೆ ಮಾತನ್ನು ಬಳಸಲಾಗಿದೆ. ಬೇರೊಬ್ಬರ ಮಾತು ಕೇಳದೆ ನಮಗೆ ಅನಿಸಿದಂತೆ ಮಾಡುವುದು, ನಡೆಯಯುವುದು ಎನ್ನುವುದನ್ನು ಈ ಗಾದೆ ಮಾತು ಹೇಳುತ್ತದೆ.

**ಊರ್ಗ ಬಂದವಳು ನೀರ್ಗ ಬರಲ್ಲೆ**–ಹೊಸದಾಗಿ ಬಂದ ಹೆಣ್ಣಿಗೆ ಹೇಳುವ ಮಾತು. ಹೊಸದಾಗಿ ಪರಿಚಯವಾದ ಯಾವುದೇ ವಸ್ತುಗಳಿಗೂ ಸಹ ಈ ಗಾದೆ ಮಾತನ್ನು ಬಳಸುತ್ತಾರೆ. ಊರಿಗೆ ಬಂದ ನಂತರ ಪ್ರತಿಯೊಬ್ಬರೂ ನೀರು ತರಲು ಬಾವಿಯ ಬಳಿ ಬರಬೇಕು. ಆಗ ಆ ವ್ಯಕ್ತಿಯನ್ನು ನೋಡಬಹುದು, ಹೊಸದಾಗಿ ಬಂದ ವ್ಯಕ್ತಿಗಳನ್ನು ನೋಡಲು ಕೆಲವರಿಗೆ ಬಹಳ ಕುತೂಹಲ ಇರುತ್ತದೆ ಆ ಸಂದರ್ಭದಲ್ಲಿ ಬಳಸುವ ಗಾದೆ ಮಾತಾಗಿದೆ.

**ಆಪತ್ನಲ್ಲಿ ಆದೋನೆ ನಂಟ**–ಕಷ್ಟ ಕಾಲದಲ್ಲಿ ಯಾರು ಸಹಾಯಕ್ಕೆ ನಿಲ್ಲುತ್ತಾರೊ ಅವರಿಗೆ ಬಳಸುವ ಮಾತು. ಅದು ಯಾರೇ ಆಗಿರಲಿ ಅವರಿಗೆ ಈ ಮಾತನ್ನು ಬಳಸುತ್ತಾರೆ.

ಈ ರೀತಿಯಾಗಿ ಮಳವಳ್ಳಿ ತಾಲೋಕಿನಲ್ಲಿ ಬಳಸುವ ಗಾದೆ ಮಾತುಗಳನ್ನು ಇಲ್ಲಿ ವಿವರಿಸಲಾಗಿದೆ. ಗಾದೆಗಳು ಈ ಪರಿಸರದಲ್ಲಿ ಬಳಕೆಗೊಳ್ಳುವ ಕ್ರಮ, ಅರ್ಥಗಳ ಬಗೆಗೂ ಇಲ್ಲಿ ವಿರಿಸಲಾಗಿದೆ. ಬಹಳ ಭಿನ್ನವಾದ ಮಾದರಿಗಳಲ್ಲಿ ಈ ಪರಿಸರದ ಜನ ಗಾದೆಗಳನ್ನು ಬಳಸುವುದನ್ನು ಕೆಲವು ಉದಾಹರಣೆಗಳೊಂದಿಗೆ ನೋಡಬಹುದು. ಈ ಗಾದೆಯಲ್ಲಿ ಬಳಕೆಗೊಂಡಿರುವ ಭಾಷಿಕ ವಿವರವನ್ನು ಇಲ್ಲಿ ನೋಡಬಹುದು. ಒಂದು ಭಾಷೆಯನ್ನು ಕೇವಲ ಮಾತಿನ ಮೂಲಕವಷ್ಟೆ ಅಲ್ಲ ಸಂಸ್ಕೃತಿಯ ಮೂಲಕ, ಆಚರಣೆಯ ಮೂಲಕವೂ ಸಹ ಗುರ್ತಿಸಬಹುದು ಅದು ಆ ಭಾಷೆಯ ಭಿನ್ನತೆಯನ್ನು ತೋರಿಸುತ್ತದೆ.

### ೭.೨.ಬಯ್ಗುಳ

ಬಯ್ಗುಳ ಶಬ್ಧ ಕಿವಿಗೆ ಬಿದ್ದ ತಕ್ಷಣ ಎಲ್ಲರ ಮನಸ್ಸಿನಲ್ಲಿ ಹೇಳುವ ಪ್ರಶ್ನೆ ಒಂದೆ ಇದೊಂದು ಕೆಟ್ಟ ಸಂಗತಿ ಎನ್ನುವುದು. ಬಯ್ಗುಳವನ್ನು ಕೇವಲ ಕೆಟ್ಟದ್ದುನ್ನು ಹೇಳಲು ಮಾತ್ರ ಬಳಸುವುದಿಲ್ಲ. ಮತ್ತೊಬ್ಬರನ್ನು ತೆಗಳಲು, ಹೀಯಾಳಿಸಲು, ಜರಿಯಲು, ಹಂಗಿಸಲು, ಒರಟಾಗಿ

ತಿಳಿಸಲು, ಕೆಟ್ಟ ಮಾತುಗಳನ್ನಾಡಲು, ಶಾಪ ಹಾಕಲು, ಮತ್ತೊಬ್ಬರನ್ನು ಎದುರಿಸಲು ಬಯ್ಗಳವನ್ನು ಬಳಸುತ್ತಾರೆ.

ಬಯ್ಗಳ ಎಂಬ ಪದವು ಬಯ್ ಎನ್ನುವ ಪದಕ್ಕೆ ಗಳ ಎಂಬ ಅಕ್ಷರಗಳು ಒಡಗೂಡಿ ರೂಪಿಗೊಂಡಿರುವುದನ್ನು ಕಾಣಬಹುದು. ಬಯ್+ಗಳ=ಬಯ್ಗಳ ಎಂದಾಗಿದೆ ಈ ಪದವನ್ನು ಬಯ್ಗಳ, ಬಯಿಗಳ, ಬಯ್ಗುಳ ಎಂದೆಲ್ಲ ಕರೆಯುವರು.

ಈ ಬಯ್ಗಗಳವು ಜನರ ಬದುಕಿನಲ್ಲಿ ಆಸುಒಕ್ಕಾಗಿರುತ್ತದೆ. ಬಯ್ಗಳವನ್ನು ತಿನ್ನದ ವ್ಯಕ್ತಿಗಳಿಲ್ಲ, ಬಯ್ಯದ ವ್ಯಕ್ತಿಗಳಿಲ್ಲ, ಬಯ್ಗಳ ಕೇಳದ ವ್ಯಕ್ತಿಗಳನ್ನು ಕಾಣದಿರಲು ಸಾಧ್ಯವೆ ಇಲ್ಲ. ಎಲ್ಲರೂ ಒಂದಲ್ಲಾ ಒಂದು ರೀತಿಯಲ್ಲಿ ಬಯ್ಗಳದ ಕೃಪೆಗೆ ಒಳಗಾಗಿರುತ್ತಾರೆ, ಇಲ್ಲವೆ ಕೇಳಿಸಿಕೊಂಡಿರುತ್ತಾರೆ.

ಬಯ್ಗಳು ಅನೇಕ ಕಾರಣದಿಂದಾಗಿ, ಅನೇಕ ಸನ್ನಿವೇಶಗಳಲ್ಲಿ, ಪ್ರಾದೇಶಿಕವಾಗಿ, ಜಾತಿ ಸೂಚಕವಾಗಿ, ವೃತ್ತಿ ಸೂಚಕವಾಗಿ ಬಳಕೆಗೊಳ್ಳುವುದನ್ನು ಕಾಣಬಹುದು. ಈ ರೀತಿ ಬಳಕೆಗೊಳ್ಳುವ ಬಯ್ಗಳದಲ್ಲಿ ಅನೇಕ ರೀತಿಯ ವ್ಯತ್ಯಾಸ ಮತ್ತು ಅಂತರವನ್ನು ಕಾಣಲು ಸಾಧ್ಯವಿರುತ್ತದೆ. ಈ ವ್ಯತ್ಯಾಸಗಳಿಗೆ ಕಾರಣ ವ್ಯಕ್ತಿಯ ಪರಿಸರ, ಸಾಮಾಜಿಕ ಪರಿಸ್ಥಿತಿ, ಆರ್ಥಿಕ ಪರಿಸ್ಥಿತಿಗಳು ಕಾರಣವಾಗಿರುತ್ತವೆ. ಅಷ್ಟೆ ಅಲ್ಲದೆ ಇದರೊಂದಿಗೆ ಲಿಂಗ ತಾರತಮ್ಯ, ವಯಸ್ಸಿನ ಅಂತರವೂ ಸಹ ಕೂಡಿರುತ್ತದೆ. ಈ ಎಲ್ಲಾ ಕಾರಣಗಳಲ್ಲಿ ಬಳಕೆಗೊಳ್ಳುವ ಬಯ್ಗಳವು ಬಹಳ ಭಿನ್ನವಾದ ವ್ಯತ್ಯಾಸಗಳನ್ನು ಹೊಂದಿರುತ್ತದೆ.

ಈ ರೀತಿಯಾಗಿ ಮಳವಳ್ಳಿ ಪರಿಸರದಲ್ಲಿ ಬಳಕೆಗೊಳ್ಳುವ ಬಯ್ಗಳಗಳನ್ನು ಇಲ್ಲಿ ಕಾಣಬಹುದು. ಆ ಬಯ್ಗಳವು ಬಳಕೆಗೊಳ್ಳುವ ವಿಧಾನ, ಸನ್ನಿವೇಶ, ಅರ್ಥದ ನೆಲೆಗಳನ್ನು ಇದರಲ್ಲಿ ವಿವರಿಸಲಾಗುತ್ತದೆ.

**ಅಟ್ಟಿಕ್ಕೊರ್ಗಿಂತ ಬಟ್ಟಿಕೊರ್ ಮೇಲು**–ಈ ಬಯ್ಗಳದಲ್ಲಿ ಶ್ರಮವಹಿಸಿ ಕೆಲಸಮಾಡುವವರಿಗಿಂತ ಮಾತನಾಡಿ ಜನರನ್ನು ಮೆಚ್ಚಿಸುವವರಿಗೆ ಇದನ್ನು ಬಳಸುತ್ತಾರೆ. ಈ ಬಯ್ಗಳದಲ್ಲಿ ಅಟ್ಟಿಕ್ಕು ಎನ್ನುವ ಪದ ರೂಪದಲ್ಲಿ ಅಟ್ಟು+ಇಕ್ಕು ಎಂಬ ಎರಡು ಪದಗಳಿರುವುದನ್ನು ಕಾಣಬಹುದು.

ಅಡು–ಎಂದರೆ ಮಾಡುವುದು, ಬೇಯಿಸುವುದು, ತಯಾರಿಸು ಎಂಬ ಅರ್ಥಗಳನ್ನು ಕೊಡುತ್ತದೆ. ಇಕ್ಕು– ಎಂದರೆ ಬಡಿಸು ಎಂಬ ಅರ್ಥವನ್ನು ಕೊಡುತ್ತದೆ.

ಬಟ್ಟಿಕ್ಕು ಎಂಬ ಪದವನ್ನು ಬಿಡಿಸಿ ಬರೆದಾಗ ಬಟ್ಟು+ಇಕ್ಕು ಎಂದಾಗುತ್ತದೆ. ಬಟ್ಟು- ಎಂದರೆ ಹಣೆಗೆ ಇಡುವ ತಿಲಕ ಎಂಬ ಅರ್ಥವನ್ನು ಕೊಡುತ್ತದೆ. ಹಣೆಗೆ ಬಟ್ಟನ್ನು ಇಡುವುದು ಯಾರ ದೃಷ್ಟಿ ತಾಗದಿರಲೆಂದು. ಈ ಬಯ್ಗಳದಲ್ಲಿ ಶ್ರಮವಹಿಸಿ ಅಡಿಗೆ ಮಾಡಿ ಬಡಿಸಿ ತಿನ್ನಿಸಿ ಕಳುಹಿಸಿದ ನಂತರ ಮಾತಿನ ಮೂಲಕ ಯಾರ ಕಣ್ಣು ತಾಗದಿರಲೆಂದು ದೃಷ್ಟಿ ತೆಗೆಯುವ ವ್ಯಕ್ತಿಗಳ ಸ್ವಭಾವವನ್ನು ವಿವರಿಸುತ್ತದೆ. ಇಲ್ಲಿ ಶ್ರಮಪಟ್ಟು ಕೆಲಸ ಮಾಡಿದವರಿಗಿಂತ ಕೇವಲ ಮಾತಿನ ಮೂಲಕ ನಿಭಾಯಿಸುವ ಜನರನ್ನು ಕುರಿತು ಹೇಳುವ ಬಯ್ಗಳವಾಗಿದೆ. ನಾಜೂಕಿನ ವ್ಯಕ್ತಿಗಳೆಂದರೆ ತಪ್ಪಾಗಲಾರದು. ಈ ತಿಲಕ ಇಡುವುದರ ಮೂಲಕ ತಾವೇ ತಿಲಕವಿಟ್ಟ ವ್ಯಕ್ತಿಗಳ ಬಗೆಗೆ ಕಾಳಜಿ ಹೊಂದಿರುವವರು ಎಂಬುದನ್ನು ತೋರಿಸಿಕೊಳ್ಳುವ ಸಲುವಾಗಿ ಈ ರೀತಿ ಮಾತು ವ್ಯಕ್ತವಾಗುತ್ತದೆ. ತೋರಿಕೆಯ ನುಡಿಗಳು ಹೆಚ್ಚು ಮನ್ನಣೆ ಪಡೆದುಕೊಳ್ಳುತ್ತವೆ, ಕಷ್ಟಪಟ್ಟು ಕೆಲಸಮಾಡಿದವರಿಗೆ ಬೆಲೆ ಇಲ್ಲ ಎನ್ನುವ ಅರ್ಥವನ್ನು ಈ ಬಯ್ಗಳ ಅರ್ಥವನ್ನು ನೀಡುತ್ತದೆ.

**ಅಡ್ಕಸ್ಬಿ**-ಈ ಬಯ್ಗಳವನ್ನು ಯಾವುದೇ ಕೆಲಸವನ್ನು ಸರಿಯಾಗಿ ಮಾಡದೆ ಇರುವ ವ್ಯಕ್ತಿಗಳಿಗೆ ಬಳಸುವ ಪದವಾಗಿದೆ. ಈ ಪದದಲ್ಲಿ ಎರಡು ಪದಗಳಿರುವುದನ್ನು ಕಾಣಬಹುದು. ಅಡ್ ಮತ್ತು ಕಸಬ್ ಎಂಬ ಪದಗಳ ಸಂಯುಕ್ತಾಕ್ಷರವೇ ಅಡ್ಕಸ್ಬಿ ಆಗಿದೆ. ಅಡ್ ಎಂಬ ಉರ್ದು ಪದ ಕಸಬ್ ಎಂಬ ಅರಾಬಿಕ್ ಪದಗಳು ಸೇರಿ ಆಗಿರುವ ಪದವೇ ಅಡ್ಕಸ್ಬಿ. ಅಡ್ ಎಂದರೆ ನಿಲ್ಲು, ಇಲ್ಲವಾಗು, ತಡೆ ಎಂಬ ಅರ್ಥವನ್ನು ಕೊಟ್ಟರೆ, ಕಸಬ್ ಎಂದರೆ ಕೆಲಸ, ಉದ್ಯೋಗ, ವೃತ್ತಿ ಎಂಬ ಅರ್ಥವನ್ನು ಕೊಡುತ್ತದೆ. ಅಂದರೆ ಕೆಲಸವನ್ನು ನಿಲ್ಲಿಸಿ ಸರಿಯಾಗಿ ಮಾಡದೆ ಇರುವವನು. ಅವನ ಕೆಲಸದಲ್ಲಿ ನಿರಂತರತೆ ಇಲ್ಲದಿರುವವನು, ಆಶಕ್ತಿ ತೋರದವನು ಎಂಬ ಅರ್ಥವನ್ನು ಕೊಡುತ್ತದೆ.

ಉರ್ದು ಮತ್ತು ಅರಾಬಿಕ್ ಪದಗಳ ಬಳಕೆಯು ಟಿಪ್ಪು ಕಾಲಘಟ್ಟದಲ್ಲಿ ಈ ಪ್ರಾಂತ್ಯದಲ್ಲಿ ಬಳಕೆಗೆ ಬಂದಿದೆ. ಯಾಕೆಂದರೆ ಟಿಪ್ಪು ಸುಲ್ತಾನನ ಸೇನೆ ಮಳವಳ್ಳಿಯ ಸುತ್ತಮುತ್ತ ಯುದ್ಧ ಸಂದರ್ಭದಲ್ಲಿ ಬೀಡುಬಿಟ್ಟಿರುವುದನ್ನು ಕಾಣಬಹುದು. ಆ ಪ್ರಭಾವದಿಂದಾಗಿ ಈ ಪದ ಇಲ್ಲಿಯ ಜನರ ಬಾಯಲ್ಲಿ ಬಳಕೆಯಲ್ಲಿರಬಹುದು.

**ಅಡ್ಜಂಬ್ರದ ಬಡ್ಡತ್ತದ್ದು**- ಅಡ್ಡ ಎಂದರೆ ತೊಂದರೆ ಅಥವಾ ಮಧ್ಯ ಎಂದರ್ಥ, ಜಂಬ್ರ ಎಂದರೆ- ಕೆಲಸ, ಕ್ರಿಯೆ ಎನ್ನುವ ಅರ್ಥವನ್ನು ಕೊಡುತ್ತದೆ. ತಾನು ಮಾಡುವ ಒಂದು ಕೆಲಸವನ್ನು ಪೂರ್ಣಗೊಳಿಸದೆ, ಮೊತ್ತೊಂದು ಕೆಲಸಕ್ಕೆ ಕೈ ಹಾಕುವವರಿಗೆ ಈ ಪದ

ಬಳಸುತ್ತಾರೆ. ಒಂದು ಕೆಲಸಕ್ಕೆ ಅಡ್ಡಿ ಪಡಿಸುವವ ಎಂಬ ಅರ್ಥವನ್ನು ಈ ಬಯ್ಗಳ ಕೊಡುತ್ತದೆ. ಈ ಪ್ರಾಂತ್ಯದಲ್ಲಿ ಕೆಲಸ ಎಂಬ ಪದಕ್ಕೆ ಜಂಬ್ರ ಎಂಬ. ಪದವನ್ನು ಬಳಕೆಗೊಳ್ಳುವುದನ್ನು ಕಾಣಬಹುದು. 'ಏನ್ ಜಂಬ್ರ ಬಂದಿದ್ದು?' ಅಂತ ಬಳಸುವ ವಾಕ್ಯವನ್ನು ಸಹ ಬಳಸುವುದನ್ನು ಕಾಣಬಹುದು.

ಈ ಅಡ್ಜಂಬ್ರ ಪದದ ಜೊತೆಗೆ ಬಡ್ಡತ್ತದ್ದು ಎಂಬ ಪದ ಬಳಕೆಗೊಳ್ಳುವುದನ್ನು ಕಾಣಬಹುದು. ಬಯ್ಗಳದ ತೀವ್ರತೆಯನ್ನು ಹೆಚ್ಚಿಸುವ ಸಲುವಾಗಿ ಈ ಪದ ಬಳಸಿರಬಹುದು. ಬಡ್ಡತ್ತದ್ದೆ ಎನ್ನುವ ಪದವು ಸೂಳೆಯ ಮಗನೆ ಎನ್ನುವ ಅರ್ಥವನ್ನು ಕೊಡುತ್ತದೆ. ಬಡ್ಡಿ ಎನ್ನುವುದು ಹೆಂಡತಿಯಲ್ಲದ, ಮೊತ್ತೊಬ್ಬ ಹೆಣ್ಣಿಗೆ ಬಳಸುವ ಪದವನ್ನು ಈ ಪರಿಸರದಲ್ಲಿ ಬಳಸಲಾಗುತ್ತದೆ. ಈ ಎರಡು ಸಂಯುಕ್ತ ಪದಗಳ ಬಳಕೆಯಿಂದಾಗಿ ಈ ಪದ ಮಳವಳ್ಳಿ ಪರಿಸರದಲ್ಲಿ ಬಳಕೆಯಲ್ಲಿರುವುದನ್ನು ಕಾಣಬಹುದು.

**ಅಡ್ಮೋರೆ**– ಅಡ್ಡ ಎನ್ನುವುದು ನಾಲ್ಕಾರು ಜನರು ಸೇರಿರುವ ಸ್ಥಳ. ಈ ನಾಲ್ಕಾರೂ ಜನರಿದ್ದಾಗ ಕೆಲಸಕ್ಕೆ ತೊಂದರೆ ಪಡಿಸುವವನು ಎಂಬ ಅರ್ಥವನ್ನು ಈ ಪದ ಕೊಡುತ್ತದೆ. ಈ ಪದವನ್ನು ಬಿಡಿಸಿ ಬರೆದಾಗ ಅಡ್ಡ+ಮೋರೆ=ಅಡ್ಮೋರೆ ಎಂದಾಗುತ್ತದೆ. ಸರಿಯಾದ ರೀತಿ ಕೆಲಸ ಮಾಡಲು ಮನಸ್ಸಿಲ್ಲದವ ಮುಖದಲ್ಲಿ ಬೇಸರವನ್ನು ವ್ಯಕ್ತವಡಿಸುವವನಿಗೆ ಈ ಪದವನ್ನು ಬಳಸುತ್ತಾರೆ.

ಯಾವುದೇ ಕೆಲಸವನ್ನು ಮಾಡದೇ ತೊಂದರೆಗೊಳಗಾದವರಂತೆ ಮುಖವನ್ನು ಸಿಂಡರಿಸಿಕೊಂಡಿರುವ ವ್ಯಕ್ತಿಗಳಿಗೆ ಈ ಬಯ್ಗಳವನ್ನು ಮಳವಳ್ಳಿ ಪರಿಸರದಲ್ಲಿ ಬಳಸುತ್ತಾರೆ. 'ಏನ್ ಅಡ್ಮೋರೆ ಅಥವಾ ಅಡ್ಮೋರ್ತ ನಿಂಗೆ ಕೆಲ್ಸ ಮಾಡುಕೆ' ಎಂದು ಬಯ್ಯುತ್ತಾರೆ.

**ಅನ್ಕ**–ಬಾಯಿ ಚಪಲವುಳ್ಳ ವ್ಯಕ್ತಿಗಳಿಗೆ ಬಳಸುವ ಪದ. 'ಅನ್ಕ ಬುದ್ಧಿಯಿಂದಾಗಿ ನೀನ್ ಇಂಗಾಗಿರೊದು ಎಂದು ಬಯ್ಯುತ್ತಾರೆ'. ರುಚಿಕಟ್ಟಾದ ಪದಾರ್ಥಗಳನ್ನು ನೆನೆಸಿಕೊಂಡು ಮಾಡಿದ ಆಹಾರವನ್ನು ತಿಂದರು ಅದು ಸರಿಯಾದ ರೀತಿಯಲ್ಲಿ ಮೈಗತ್ತದೆ ಇರುವ ವ್ಯಕ್ತಿಗಳಿಗೆ ಬಯ್ಯುವ ಪದ. ಈ ಅನ್ಕ ತನದಿಂದಾಗಿ ಅವರ ದೇಹವು ಸರಿಯಾದ ರೀತಿಯಲ್ಲಿ. ಬೆಳವಣಿಗೆಯಾಗುವುದಿಲ್ಲ ಎನ್ನುವುದು ಇಲ್ಲಿಯ ಜನರ ನಂಬಿಕೆ. ಸಣ್ಣನೆಯ ದೇಹ ಇರುವವರಿಗೆ, ಒಂದು ಆಹಾರವನ್ನು ಬಯಸಿ, ಮೊತ್ತೊಂದನ್ನು ತಿಂದರು ಅದು ಸರಿಯಾದ ರೀತಿಯಲ್ಲಿ ಬೆಳವಣಿಗೆಗೆ ಸಹಕಾರಿಯಾಗದೆ ಇರುವುದು ಎನ್ನುವ ಅರ್ಥದಲ್ಲಿ ಬಳಸುತ್ತಾರೆ.

**ಅನ್ನಾಡಿ ನನ್ ಮಗ**–ಅನ್ನಾಡಿ ಎಂಬ ಪದವು ಯಾವುದೇ ಕೆಲಸದಲ್ಲಿ ಚತುರತೆ, ಆಶಕ್ತಿ, ನಿಮಣತೆ ಇಲ್ಲದ ವ್ಯಕ್ತಿಗಳಿಗೆ ಬಳಸುವ ಪದವಾಗಿದೆ. ಈ ಪದವನ್ನು ಕೆಲ್ಸಬಾರದೇ ಇರುವ ಅನ್ನಾಡಿ ನನ್ ಮಗ ಎಂದು ಬಯ್ಯುವುದನ್ನು ಕಾಣಬಹುದಾಗಿದೆ.

**ಅನ್ನೇಕಾರ**– ಕೆಟ್ಟದ್ದನ್ನು ಮಾಡುವವನು, ಸ್ವಲ್ಪವೂ ಕರುಣೆಯಿಲ್ಲದ ವ್ಯಕ್ತಿಗೆ ಅನ್ನೇಕಾರ ಎಂದು ಬಳಸುತ್ತಾರೆ. ಅನ್ನೆ ಕ್ರಿಯಾಪದದೊಂದಿಗೆ, ಕಾರ ಎಂಬ ತದ್ಧಿತಾಂತ ಪದವು ಸೇರಿಕೊಂಡು ಅನ್ನೇಕಾರ ಆಗಿರುವುದನ್ನು ಕಾಣಬಹುದು. ಅನ್ಯಾಯವನ್ನು ಮಾಡುವವನೇ ಅನ್ನೇಕಾರ ಆಗಿದೆ. ಜನರ ಬಳಕೆಯಲ್ಲಿ ಈ ಬಯ್ಗಳವು ಅನ್ನೇಕಾರ ಎಂದಾಗಿದೆ.

ಅನ್ಯಾಯ ಎನ್ನುವ ಸಂಸ್ಕೃತ ಪದದೊಂದಿಗೆ ಕಾರ ಎಂಬ ಪದ ಸೇರಿ ಅನ್ಯಾಯಕಾರ ಎಂದಾಗಿದ್ದು. ಇದು ಜನರ ಬಳಕೆಯಲ್ಲಿ ಅನ್ನೇಕಾರ ಆಗಿರುವುದನ್ನು ಗಮನಿಸಬಹುದು. ಜನ ಬಳಕೆಯಲ್ಲಿ ಈ ಪದವನ್ನು 'ಅನ್ನೇಕಾರ ಆ ಮೊಗಿಗೆ ದನಿಗೊಡ್ಡಂಗೊಡ್ಡಲ್ಲ ನಿಂಗ ವಟ್ಟೆ ಉರಿಯಲ್ದೆ'

**ಅಲ್ಕೆಟ್ ನನ್ಮಗ**–ಅಲ್ಕೆಟ್ ನನ್ಮಗ ಎಂಬ ಪದದಲ್ಲಿ ಹಲ್ಕಾ ಎಂಬ ಪದವು ಹಿಂದಿ, ಉರ್ದು, ಮರಾಠಿಯಲ್ಲಿ ಚಿಕ್ಕ, ಹಗುರ, ಸಣ್ಣ ಎಂಬ ಅರ್ಥವನ್ನು ಕೊಡುತ್ತದೆ. ಈ ಪದವು ಮಳವಳ್ಳಿ ಪರಿಸರದಲ್ಲಿ ಹಕಾರ ಅಕಾರವಾಗಿ ಬಳಕೆಗೊಂಡು ಅರ್ಥ ಆಗೆ ಉಳಿದಿರುವುದನ್ನು ಕಾಣಬಹುದು.

ಕೆಟ್ಟ ವ್ಯಕ್ತಿಗಳಿಗೆ, ಕೀಳು ಸ್ವಭಾವದ ವ್ಯಕ್ತಿಗಳಿಗೆ ಬಳಸುವ ಬಯ್ಗಳವಾಗಿದೆ. ಕೆಟ್ಟ ಕಲಸ ಮಾಡುವ ವ್ಯಕ್ತಿಗಳಿಗೆ ಅಲ್ಕೆಟ್ ಎಂಬ ಪದವನ್ನು ಬಳಸುವುದನ್ನು ಕಾಣಬಹುದು. ಇವನು ಸರಿಯಾಗಿ ಇಲ್ಲ ಎಂಬುದನ್ನು ತಿಳಿಸಲು ಈ ಪದವನ್ನು ಬಳಸಿ ಬೈಯುವುದನ್ನು ಕಾಣಬಹುದು. 'ಇಮ ಅಲ್ಕೆಟ್ ಓಗವ್ನೆ ಸರಿಯಾಗ್ ಬುದ್ದಿ ಕಲಿಸ್ ಬೇಕು, ಇವ್ನಗೆ'

**ಉಡಾಳ**– ಉಡಾಳ ಎನ್ನುವ ಪದವನ್ನು ಸರಿಯಾದ ರೀತಿಯಲ್ಲಿ ಇಲ್ಲದೆ ಒಂದು ಕಡೆ ನೆಲೆನಿಲ್ಲದೆ ಅಲೆಯುವ ವ್ಯಕ್ತಿಗೆ ಬಳಸುವ ಪದ. ಎಲ್ಲವನ್ನು ಉಡಾಯಿಸುವ, ಯಾವುದಕ್ಕೂ ಎದರದೆ ಇರುವವನಿಗೆ ಬಳಸುವ ಉಡಾಳ ಪದ ಮರಾಠ ಸಮುದಾಯದಲ್ಲಿ ಈ ಪದ ಬಳಕೆಗೊಳ್ಳುವುದನ್ನು ಕಾಣಬಹುದು. ಈ ಪದವು ಮರಾಠಿ ಭಾಷೆಯ ಸಂಪರ್ಕದಿಂದಾಗಿ ಮಳವಳ್ಳಿ ಪರಿಸರದ ಜನರಲ್ಲಿ ಬಳಕೆಗೆ ಬಂದಿದೆ.

**ಉರ್ಮಾರಿ–** ಸಿಡುಕಿನ ಸ್ವಭಾವದ ವ್ಯಕ್ತಿಗೆ ಬಳಸುವ ಪದವಾಗಿದೆ. ಎಲ್ಲರನ್ನು ಗೋಳುಗರೆಯುವ ಸ್ವಭಾವದವನು ಎನ್ನುವ ಅರ್ಥದ ನೆಲೆಯಲ್ಲಿ ಈ ಬಯ್ಗಳ ಬಳಕೆಯಾಗುವುದನ್ನು ಕಾಣಬಹುದು.

ಪದೇ ಪದೇ ಸಿಟ್ಟು ಮಾಡಿಕೊಳ್ಳುವ ಸ್ವಭಾವ ಉಳ್ಳವರಿಗೆ ಉರ್ಮಾರಿ ಎಂದು ಕರೆಯುತ್ತಾರೆ. ಇಂದಿಗೂ ಹಳ್ಳಿಗಳಲ್ಲಿ ಮಾರಿ ದೇವತೆಯನ್ನು ವರ್ಷಕ್ಕೊಮ್ಮೆ ಪೂಜಿಸುವುದನ್ನು ಕಾಣಬಹುದು. ಕಾರಣ ಮಾರಿ ದೇವತೆಯನ್ನು ಶಾಂತಿಯಿಂದಿಡಲು. ಅವಳು ಸಿಟ್ಟು ಮಾಡಿಕೊಳ್ಳದಿರಲು ಎಂಬ ನಂಬಿಕೆ ಇದೆ. ಕಾರಣ ಅವಳು ಬಹಳ ಸಿಡುಕಿನ ಸ್ವಭಾವದವಳು ಎಲ್ಲರಿಗೂ ಶಾಪಕೊಟ್ಟು ಬಿಡುತ್ತಾಳೆ ಎನ್ನುವ ಭಯದಿಂದಾಗಿ ಜನರು ಆ ದೇವತೆಯನ್ನು ಪೂಜಿಸುವುದನ್ನು ಕಾಣಬಹುದು.

ಇದೇ ರೀತಿಯ ಸ್ವಭಾವವನ್ನು ಹೊಂದಿರುವ ವ್ಯಕ್ತಿಗಳಿಗೆ ಈ ಪದ ಇಂದಿಗೂ ಬಳಸುವುದನ್ನು ಕಾಣಬಹುದು. ಈ ಬಯ್ಗಳವು ಎರಡು ಸಂಯುಕ್ತ ಪದಗಳಿಂದ ಕೂಡಿದೆ. ಉರಿಯುವ ಮಾರಿ ಎಂಬ ಪದಗಳು ಸೇರಿ ಉರ್ಮಾರಿ ಎಂದು ಜನ ಬಳಕೆಯಲ್ಲಿ ಬಳಕೆಗೊಳ್ಳತ್ತಿರುವುದನ್ನು ಗಮನಿಸಬಹುದು.

**ಉರ್ಸಿಂಗಿ–** ಯಾವಾಗಲೂ ಸಿಡುಕು ಸ್ವಭಾವದ ವ್ಯಕ್ತಿಗೆ ಬಳಸುವ ಪದ. ಎಲ್ಲರ ಮೇಲೂ ಸಿಡುಕು ಸ್ವಭಾವವನ್ನು ಪ್ರದರ್ಶಿಸುವ ವ್ಯಕ್ತಿಗೆ ಮಳವಳ್ಳಿ ಪರಿಸರದಲ್ಲಿ ಉರ್ಸಿಂಗಿ ಎಂಬ ಪದವನ್ನು ಬಳಸುತ್ತಾರೆ.

ಉರ್ಸಿಂಗಿ ಎನ್ನುವ ಜಾತಿ ಹಾವು ಇರುವುದನ್ನು ಗಮನಿಸಬೇಕು. ಆ ಹಾವಿನ ಸ್ವಭಾವವು ಇದೇ ರೀತಿಯಾಗಿರುತ್ತದೆ. ಆ ಕಾರಣದಿಂದಾಗಿ ಈ ಪದ ಬಂದಿದೆ ಎನ್ನುತ್ತಾರೆ. ಈ ಉರ್ಸಿಂಗಿ ಹಾವು ತುಂಬಾ ಕೋಪದ, ಆತುರವಾಗಿ ಓಡುವ ಸ್ವಭಾವವನ್ನು ಹೊಂದಿರುವುದರಿಂದ ಈ ಪದ ಆ ಲಕ್ಷಣ ಹೊಂದಿರುವ ವ್ಯಕ್ತಿಗಳಿಗೆ ಬಳಸುವುದನ್ನು ಕಾಣಬಹುದು.

**ಎಳ್ ತಿಂಗಳ್ಗೆ ಹುಟ್ಟೋನ್–** ಮುಂದಾಲೋಚನೆ ಇಲ್ಲದವ, ಶಕ್ತಿ ಇಲ್ಲದವನು, ಕೊಟ್ಟ ಕೆಲಸವನ್ನು ಮಾಡದೇ ಪದೇ ಪದೇ ಗೊಣಗುಡುವವರಿಗೆ ಈ ಪದವನ್ನು ಬಳಸಿ ಬೈಯುವುದನ್ನು ಕಾಣಬಹುದು.

ಏಳು ತಿಂಗಳಿಗೆ ಜನಿಸುವ ಮಗು ಸರಿಯಾಗಿ ಬೆಳವಣಿಗೆ ಆಗಿರುವುದಿಲ್ಲ ಎನ್ನುವ ಅರ್ಥದಲ್ಲಿ ಬಳಸಲಾಗುವ ಪದ. ಅದೇ ರೀತಿ ಎಳಸು ಸ್ವಭಾದ ವ್ಯಕ್ತಿಗಳಿಗೂ ಈ ಪದವನ್ನು ಬಳಸಿ ಬೈಯುವುದನ್ನು ಕಾಣಬಹುದು. ಆತುರದ ಸ್ವಭಾವದ, ತಾಳ್ಮೆ ಇಲ್ಲದ ವ್ಯಕ್ತಿಗಳಿಗೂ ಸಹ ಈ ಪದವನ್ನು ಬಳಸುತ್ತಾರೆ. ಸರಿಯಾಗಿ ಗ್ರಹಿಸದೇ ಮಾತನಾಡುವವರಿಗೂ ಸಹ ಈ ಬೈಗಳವನ್ನು ಬಳಸುತ್ತಾರೆ.

**ಕಲ್ಕೆತಿ**–ಇದೊಂದು ಹೆಣ್ಣಿಗೆ ಬೈಯ್ಯುವ ಪದವಾಗಿದೆ. ಸರಿಯಾದ ರೀತಿಯಲ್ಲಿ ಬುದ್ಧಿ ಕಲಿಯದ ಹೆಣ್ಣಿಗೆ ಬಳಸುವ ಬಯ್ಗಳದ ಪದವಾಗಿದೆ.

**ಕಂತ್ರಿ ನನ್ಮಗ**–ಸರಿಯಾಗಿ ಕೆಲಸ ಮಾಡದ, ಸರಿಯಾದ ಸ್ವಭಾವನ್ನು ಹೊಂದಿರದ ವ್ಯಕ್ತಿಗಳಿಗೆ ಬಳಸುವ ಪದ. ಕಂತ್ರಿ ಎನ್ನುವ ಪದವು ಇಂಗ್ಲೀಷ್‌ನ ಕಂಟ್ರಿ ಎನ್ನುವ ಪದದಿಂದ ಬಂದಿದೆ. ಕಂಟ್ರಿ ಎನ್ನುವ ಪದವನ್ನು ಮಳವಳ್ಳಿಯ ಪರಿಸರದ ಜನರು ಕಂತ್ರಿ ಎಂದು ಬಳಸುವುದನ್ನು ಗಮನಿಸಬಹುದು. ಈ ಪ್ರದೇಶದಲ್ಲಿ ಟ ಕಾರಕ್ಕೆ ತಕಾರ ಬಳಸುವುದನ್ನು ಕಾಣಬಹುದಾಗಿ. ಈ ವಿಚಾರವನ್ನು ಹಿಂದಿನ ಅಧ್ಯಾಯಗಳನಲ್ಲಿ ಚರ್ಚಿಸಿರುವುದನ್ನು ಕಾಣಬಹುದು. ಉದಾಹರಣೆಗೆ ಟಗರು ಎನ್ನುವುದನ್ನು ತಗರು ಎಂದು ಕರೆಯುವುದು ಇಂದಿಗೂ ಬಳಕೆಯಲ್ಲಿರುವುದನ್ನು ಕಾಣಬಹುದು. ಆ ಹಿನ್ನೆಲೆಯಲ್ಲಿ ಈ ಪದ ಬಳಕೆಗೊಂಡಿದೆ ಎನಿಸುತ್ತದೆ. ಇಲ್ಲಿಯ ಜನರ ಬಾಯಲ್ಲಿ ಕಂತ್ರಿ ಕೆಲಸ, ಕಂತ್ರಿ ನಾಯಿ, ಕಂತ್ರಿ ಜನ ಹೀಗೆ ಕಂತ್ರಿ ಎನ್ನುವ ಪದವನ್ನು ಬಳಸಿ ಬಯ್ಗಳದ ರೂಪದಲ್ಲಿ ಬಳಸುವುದನ್ನು ಕಾಣಬಹುದು.

**ಕಚಡಾ ನನ್ಮಗ**–ಕಚಡ ಎನ್ನುವುದ ಕೆಟ್ಟ ಸ್ವಭಾವ ಎನ್ನುವ ಅರ್ಥದಲ್ಲಿ ಬಳಕೆಗೊಳ್ಳುತ್ತದೆ. ಕಚಡ ಎನ್ನುವುದು ಕೊಳಕು ಎನ್ನುವ ಅರ್ಥದಲ್ಲಿ ಬಳಕೆಗೊಳ್ಳುತ್ತದೆ. ಕೊಳಕು ಸ್ವಾಭಾವವನ್ನು ಹೊಂದಿರುವ ವ್ಯಕ್ತಿಗಳಿಗೆ ಬಳಕೆಗೊಳ್ಳುವ ಬಯ್ಗಳವಾಗಿದೆ. ಎಲ್ಲವನ್ನು ಹದಗೆಡಿಸುವ ವ್ಯಕ್ತಿತ್ವವನ್ನು ಹೊಂದಿರುವವನು ಎನ್ನುವ ಅರ್ಥದಲ್ಲಿ ಬಳಕೆಗೊಳ್ಳುವುದನ್ನು ಕಾಣಬಹುದು.

**ಕಚ್ಚಳ್ಕ**– ಕಚ್ಚೆ ಎನ್ನುವ ಪದ, ಕಚ್ಚೆಯನ್ನು ಕಳೆದು ಕೊಳ್ಳುವ ಎನ್ನುವ ಪದಗಳು ಸೇರಿ ಕಚ್ಚಳ್ಕ ಎಂದಾಗಿದೆ. ಇದು ಕಾಮದ ನಡುವಿನ ನಂಟನ್ನು ತಿಳಿಸಲು, ಗಂಡು ಹೆಣ್ಣಿನ ಕಾಮಕೇಳಿ ಸ್ವಭಾವವನ್ನು ಕುರಿತು ಹೇಳುವ ಬಯ್ಗಳವಾಗಿದೆ. ಅನೇಕ ಹೆಣ್ಣುಗಳ ಜೊತೆ ವ್ಯವಹರಿಸುವ ಹೆಣ್ಣು ಮತ್ತು ಗಂಡಸರಿಗೆ ಈ ಪದವನ್ನು ಬಳಸುತ್ತಾರೆ. ಈ ಬಯ್ಗಳವು ವ್ಯಕ್ತಿಗಳ ಸ್ವಭಾವವನ್ನು ತಿಳಿಸುವ ಬಯ್ಗಳವಾಗಿದೆ.

**ಕದೀಮ**– ಕೆಲಸವನ್ನು ಕದಿಯುವ ಸ್ವಭಾವ ಉಳ್ಳವನಿಗೆ ಬಳಸುವ ಬಯ್ಗಳ. ಕಳ್ಳತನದ ಸ್ವಭಾವ ಹೊಂದಿರುವವನು ಎನ್ನುವ ಅರ್ಥವನ್ನು ಕೊಡುತ್ತದೆ. ಕದೀಮ ಎನ್ನುವ ಪದವು ಉರ್ದು, ಹಿಂದಿ, ಅರೇಬಿಕ್ ಪದಗಳಿಂದ ಬಳಕೆಗೆ ಬಂದಿರುವ ಪದ. ಕದೀಮ್ ಎನ್ನುವ ಪದವನ್ನು ಕದೀಮ ಎಂದು ಬಳಸುತ್ತಾರೆ.

**ಕರ್ಮ್ಗೇಡಿ**–ಒಳ್ಳೆಯದು ಆಗದೆ ಬರಿ ಕೆಟ್ಟದ್ದು, ತೊಂದರೆಗಳಾಗುವ ವ್ಯಕ್ತಿಗೆ ಈ ಪದವನ್ನು ಬಳಸುತ್ತಾರೆ. ಕರ್ಮ ಎನ್ನುವ ಪದಕ್ಕೆ ಗೇಡಿ ಎನ್ನುವ ಪದ ಸೇರಿ ಕರ್ಮ್ಗೇಡಿಯಾಗಿದೆ. ಕರ್ಮ ಎನ್ನುವುದು ಇಲ್ಲಿ ಕರ್ಮಮಾಡಿರುವವನು ಅಂದರೆ ಒಳ್ಳೆಯದನ್ನು ಪಡೆದುಕೊಂಡು ಬರದೆ ಕೆಟ್ಟದನ್ನು ಪಡೆದಿರುವವನು ಎನ್ನುವ ಅರ್ಥದ ಹಿನ್ನೆಲೆಯಲ್ಲಿ ಬಳಸಲಾಗುತ್ತದೆ. 'ಎನ್ ಕರ್ಮ್ಗೇಡಿ ಮಗ್ನೊ ಅಪ್ಪ, ಅವ್ವನ್ ಕಳ್ಕತು'

**ಕಮ್ಜಾತೀಗೆ ಹುಟ್ಟೋನು**–ಕಮ್ಜಾತಿ ಎನ್ನುವುದು–ಕೆಳಜಾತಿ ಎನ್ನುವ ಅರ್ಥವನ್ನು ಕೊಡುತ್ತದೆ. ಕೀಳರಿಮೆಯ ಸ್ವಭಾವದಿಂದ ಬಳಸುವ ಬಯ್ಗಳ. ಮೇಲು ಕೀಳಿನ ಜಾತಿಗಳ ಸ್ವಭಾವವನ್ನು ತಿಳಿಸಲು ಈ ಪದವನ್ನು ಬಳಸುತ್ತಾರೆ.

**ಕಿತಾಪತಿ ನನ್ಮಗ**–ಕೆಲಸ ಕೆಡಿಸುವ ವ್ಯಕ್ತಿಗಳಿಗೆ ಬಳಸು ಬಯ್ಗಳ. ಬೇರಯವರ ಕೆಲಸಗಳಿಗೆ ಅಡ್ಡಿ ಪಡಿಸುವ, ತಡೆ ಒಡ್ಡುವ, ತೊಂದರೆ ನೀಡುವವನು ಎಂಬ ಅರ್ಥವನ್ನು ಕೊಡುತ್ತದೆ. ಬೇರೆಯವರ ಕೆಲಸದಲ್ಲಿ ತಲೆಯಾಕಿ ಅದನ್ನು ಹಾಳು ಮಾಡುವ ಸ್ವಭಾವದವರಿಗೆ ಬಳಸುವ ಬಯ್ಗಳವಾಗಿದೆ.

**ಕಿತ್ತೋದ್ ನನ್ಮಗ**–ಯಾರಿಗೂ ಎದರದೆ, ನಾಚಿಕೆ, ಅಂಜಿಕೆಯ ಸ್ವಭಾವಗಳನ್ನು ಹೊಂದಿರದ ವ್ಯಕ್ತಿಗಳಿಗೆ ಈ ಬಯ್ಗಳವನ್ನು ಬಳಸುತ್ತಾರೆ. ಎಲ್ಲಾ ಸ್ವಭಾವಗಳನ್ನು ಹಾಳು ಮಾಡಿಕೊಂಡಿರುವವನು ಎನ್ನುವ ಅರ್ಥದಲ್ಲಿ ಈ ಪದವನ್ನು ಬಳಸುತ್ತಾರೆ.

**ಕೊಳ್ಕ ನನ್ಮಗ**–ಕೊಳಕು ಎನ್ನುವುದು ಅಶುದ್ಧತೆ ಎನ್ನುವ ಅರ್ಥದಲ್ಲಿ ಬಳಸುವ ಪದ. ಶುದ್ಧವಾದ ಸ್ವಭಾವವನ್ನು ಬೆಳೆಸಿಕೊಳ್ಳದ ವ್ಯಕ್ತಿಗಳಿಗೆ ಬಳಸುವ ಪದವಾಗಿದೆ.

**ಗಡ್ವ**–ಗಡ್ವ ಎನ್ನವುದು ವ್ಯಕ್ತಿ ಗಾತ್ರವನ್ನು ನೋಡಿ ಬಳಸುವ ಪದ. ಕೋತಿಯ ಸ್ವಭಾವ ಎನ್ನುವ ಅರ್ಥದಲ್ಲಿ ಬಳಸುತ್ತಾರೆ. 'ಗಡ್ವ ಗತ್ತೆತರ ಇದಿಯ ಗೊತ್ತಾಗಲ್ವ' ಎಂದು ಬೈಯುವುದನ್ನು ಕಾಣಬಹುದು.

ಗಂಡು ಕೋತಿಗೆ ಗಡವ ಎಂದು ಕರೆಯುವುದನ್ನು ಕಾಣಬಹುದು. ಪದೇ ಪದೇ ಇತರರೊಂದಿಗೆ ಕಾಲು ಕೆರೆದು ಜಗಳ ತೆಗೆಯುವ ಸ್ವಭಾವದವರಿಗೆ ಈ ರೀತಿ ಬಳಸುತ್ತಾರೆ. ವಯಸ್ಸಾಗಿದ್ದರೂ ಬುದ್ಧಿ ಬೆಳೆಯದಿದ್ದರೆ ಈ ರೀತಿ ಬೈಯುವುದನ್ನು ಕಾಣಬಹುದು.

**ಗಾಳ್ ಗಂಟ್ಲು ನನ್ಮಗ**–ಯಾವುದೇ ಕೆಲಸಗಳನ್ನು ಸರಿಯಾಗಿ ಪೂರೈಸಲು ಬಿಡದೆ ಅಡ್ಡಿ ಪಡಿಸುವ ವ್ಯಕ್ತಿಗೆ ಈ ಪದವನ್ನು ಬಳಸಿ ಬೈಯುವುದನ್ನು ಕಾಣಬಹುದು. ಗಾಳ್ ಎನ್ನುವ ಪದಕ್ಕೆ ಗಂಟ್ಲು ಎಂಬ ಪದ ಸೇರಿ ಆಗಿದೆ. ಗಂಟ್ಲು ಎಂದರೆ ಗೋಜಲು ಎನ್ನುವ ಅರ್ಥದಲ್ಲಿ ಬಳಸುತ್ತಾರೆ. ಯಾವುದನ್ನು ಸರಿಯಾಗಿಮಾಡದೆ ಗೋಜಲು ಗೋಜಲಾದ ಸ್ವಭಾವದವನು ಎನ್ನುವ ಅರ್ಥವನ್ನು ಕೊಡುತ್ತದೆ.

**ಚಿನಾಲಿ**–ಚಿನಾಲಿ ಎನ್ನುವುದು ಹೆಂಗಸರನ್ನು ಬೈಯಲು ಬಳಸುವ ಪದ. ಇದೊಂದು ಹೆಣ್ಣಿನ ಕೆಟ್ಟ ಸ್ವಭಾವ, ನಡವಳಿಕೆಯನ್ನು ಸೂಚಿಸುವ ಪದವಾಗಿ ಬಳಸುವುದನ್ನು ಕಾಣಬಹುದು. ಚಿನಾಲಿ ಎಂದರೆ ಸೂಳೆ ಎಂಬ ಅರ್ಥದಲ್ಲಿ ಬಳಕೆಯಲ್ಲಿರವುದನ್ನು ಗಮನಿಸಬಹುದು. ಈ ಪದವು ಹಿಂದಿ, ಮರಾಠಿ, ಉರ್ದು ಭಾಷೆಯಲ್ಲಿ ಛಿನಾಲ್, ಛಿನಾಲೀ ಎಂಬ ಪದಗಳು ಬಳಕೆಯಲ್ಲಿದ್ದು ಇದೇ ಅರ್ಥದ ಹಿನ್ನೆಲೆಯಲ್ಲಿ ಬಳಕೆಗೊಳ್ಳುತ್ತಿದ್ದು, ಈ ಭಾಷೆಗಳ ಸಂಪರ್ಕದಿಂದಾಗಿ ಈ ಬಯ್ಗಳ ಕನ್ನಡದಲ್ಲಿ ಬಳಕೆಯಲ್ಲಿರುವುದನ್ನು ಕಾಣಬಹುದು.

**ಚಿಲ್ರೆ ನನ್ಮಗ**– ಚಿಲ್ಲರೆ ಹಣಕ್ಕೆ ಅಷ್ಟು ಮಹತ್ವವಿಲ್ಲ ಹಾಗೇ ಸಣ್ಣ ಸ್ವಭಾವದ ವ್ಯಕ್ತಿಗಳು ಸಮಾಜದಲ್ಲಿ ಅಷ್ಟು ಮಹತ್ವವಿಲ್ಲದಿರುವುದನ್ನು ಕಾಣಬಹುದು. ಚಿಲ್ರೆ ಎನ್ನುವುದು ಸಣ್ಣತನದ ವ್ಯಕ್ತಿತ್ವವನ್ನು ಹೊಂದಿರುವ ವ್ಯಕ್ತಿಗಳಿಗೆ ಬಳಸುವ ಬಯ್ಗಳ.

**ಚೆಂಗ್ಲು**–ಚೆಂಗ್+ಅಲು=ಚೆಂಗ್ಲು ಆಗಿದೆ. ಚೆಂಗ್ಲು ಎನ್ನವುದು ಸರಿಯಾದ ಸ್ವಭಾವನ್ನು ಹೊಂದಿರದ ವ್ಯಕ್ತಿಗಳಿಗೆ ಬಳಸುವ ಬಯ್ಗಳ.

**ಪಂಟ್ರು**–ಪಂಟ್ರು ಎನ್ನುವುದು ಕೆದರಿದ ತಲೆಯ, ಕೊಳಕು ಬಟ್ಟೆಯ ವ್ಯಕ್ತಿಗಳಿಗೆ ಬಳಸುವ ಪದ. ಹೆಣ್ಣೆಕಾಣದ ಕೂದಲಿಗೆ ಪಂಟ್ರು ಎಂದು ಕರೆಯುತ್ತಾರೆ. ತಲೆಕೂದಲು ಅಸ್ತವ್ಯಸ್ಥವಾಗಿರವುದಕ್ಕೆ ಈ ರೀತಿ ಬಳಸುತ್ತಾರೆ

**ತಟವಟಗಾರ**–ಸುಳ್ಳು ಹೇಳುವ ವ್ಯಕ್ತಿಗೆ ತಟವಟಗಾರ ಎಂದು ಕರೆಯುತ್ತಾರೆ. ಕಪಟ, ಮೋಸಗೊಳಿಸುವ, ಕೈಚಳಕವನ್ನು ಹೊಂದಿರುವ ವ್ಯಕ್ತಿಗಳಿಗೆ ಈ ರೀತಿಯ ಬೈಗಳವನ್ನು

ಬಳಸುವುದನ್ನು ಕಾಣಬಹುದು. ಈ ರೀತಿಯ ಸ್ವಭಾವದ ವ್ಯಕ್ತಿಗಳಿಗೆ ತಾಟ್‌ಪೋಟಿ ಎನ್ನುವ ಮತ್ತೊಂದು ಪದವನ್ನು ಬಳಸಿ ಬೈಯುವುದನ್ನು ಕಾಣಬಹುದು.

**ತಲಿಡ್ಕ**–ಈ ಪದವು ಹಣಕ್ಕಾಗಿ ಮಾಡುವ ಕೆಲಸ. ಇದೊಂದು ಕೆಟ್ಟ ಕೆಲಸವಾಗಿದ್ದು ದುಡಿಯಲು ಆಗದ ವ್ಯಕ್ತಿಗಳು ಬೇರೆಯವರನ್ನು ದುರ್ಬಳಕೆ ಮಾಡಿಕೊಂಡು ಹಣ ಸಂಪಾದಿಸುವ ವ್ಯಕ್ತಿಗಳಿಗೆ ಬಳಸುತ್ತಾರೆ. ಗಂಡಸರ ಕಾಮವನ್ನು ಪೂರೈಸಲು ಹೆಣ್ಣು ಮಕ್ಕಳನ್ನು ಒದಗಿಸುವವನು ಎನ್ನುವ ಅರ್ಥದ ಹಿನ್ನೆಲೆಯಲ್ಲಿ ಬಳಸುತ್ತಾರೆ.

**ತಲ್ಪಾತ್ಕ**–ಆಗದ ಕೆಲಸಗಳನ್ನು ಪೂರ್ಣಗೊಳಿಸುವವನು, ಹೆಚ್ಚು ಬುದ್ಧಿ ಉಪಯೋಗಿಸಿ ಕೆಲಸ ಮಾಡುವವರಿಗೆ ಬಳಸುವ ಪದವಾಗಿದೆ. ತಲೆ+ಪಾತಕಿ ಎಂಬ ಎರಡು ಪದಗಳು ಸೇರಿ ಈ ಪದ ಹುಟ್ಟಿರುವುದನ್ನು ಕಾಣಬಹುದು. ತಲೆ ಎನ್ನುವ ಪದಕ್ಕೆ ಪಾತಕ ಎನ್ನುವ ಪದ ಸೇರಿದೆ. ಪಾತಕ ಎನ್ನುವುದು ಕೆಟ್ಟದನ್ನು ಮಾಡುವವನು ಎನ್ನುವ ಅರ್ಥವನ್ನು ಕೊಡುತ್ತದೆ. ಈ ಎರಡು ನೆಲೆಯಲ್ಲಿ ಈ ಪದ ಬಳಕೆಗೊಳ್ಳುವುದನ್ನು ಕಾಣಬಹುದು.

**ತೊಡ್ಗಾಲ**–ಎಲ್ಲವನ್ನು ಕಳೆಯುವವನು, ನಾಶ ಮಾಡುವವನು ಎನ್ನುವ ಅರ್ಥದಲ್ಲಿ ಬಳಸುವ ಪದವಾಗಿದೆ.

**ನಸ್ಗುನಿ**–ನಸ್ಗುನಿ ಎನ್ನುವ ಪದವು ಹೊರನೋಟಕ್ಕೆ ಒಳ್ಳೆಯವರಂತೆ ಕಾಣುವ, ಆದರೆ ಆಂತರ್ಯದಲ್ಲಿ ಕೆಟ್ಟ ಸ್ವಭಾವನ್ನು ಹೊಂದಿರುವ ವ್ಯಕ್ತಿಗಳಗೆ ಬಳಸುವ ಬಯ್ಗುಳವಾಗಿದೆ. ಹೊರಗೊಂದು ಒಳಗೊಂದು ಇರಿಸಿಕೊಂಡು ನಾಟಕವಾಡುವ ವ್ಯಕ್ತಿಗೆ ನಸ್ಗುನಿ ಎನ್ನುತ್ತಾರೆ.

ನಸ್ಗುನಿ ಎನ್ನುವುದು ಒಂದು ಕಾಯಿ, ಇದು ಬೇಲಿಯ ಪಕ್ಕದಲ್ಲಿ ಅಂಬಿನ ರೂಪದಲ್ಲಿ ಅಬ್ಬುವ ಅಂಬು. ಇದರಲ್ಲಿ ಬಿಡುವ ಕಾಯಿ ನಸ್ಗುನ್ನಿ ಕಾಯಿ. ಇದರ ಮೈ ಮುಳ್ಳುಗಳಿಂದ ಕೂಡಿರುತ್ತದೆ.

**ನಾಮರ್ದ**–ನಪುಂಸಕ, ಗಂಡಸುತನ ಇಲ್ಲದವನು ಎನ್ನುವ ಅರ್ಥದಲ್ಲಿ ಈ ಪದವನ್ನು ಬಳಸಲಾಗುತ್ತದೆ.

**ಪಾಕ್ಡ ನನ್ಮಗ**–ಕಿಲಾಡಿ, ಬುದ್ಧಿವಂತ, ಎನ್ನುವ ಅರ್ಥದಲ್ಲಿ ಈ ಪದವನ್ನು ಬಳಸಲಾಗುತ್ತದೆ. ಅವನು ಬಾಳ ಪಾಕ್ಡ ಎಂದು ಬಳಸುವುದನ್ನು ಕಾಣಬಹುದು.

**ಪಾಪರ್ ನನ್ಮಗ**–ಎಲ್ಲವನ್ನು ಕಳೆದುಕೊಂಡು ಬಿಕಾರಿಯಾಗುವ ವ್ಯಕ್ತಿಗೆ ಬಳಸುವ ಪದವಾಗಿದೆ. ಗತಿಗೆಟ್ಟು ನಿಂತಿರುವವನು, ಎಲ್ಲಾ ಆಸ್ತಿಪಾಸ್ತಿ ಕಳೆದುಕೊಂಡು ತಿನ್ನಲು ಸಹ ಇಲ್ಲದೆ ಇರುವವನು ಎನ್ನುವ ಅರ್ಥದಲ್ಲೂ ಸಹ ಬಳಸಲಾಗುತ್ತದೆ. ಇದೊಂದು ಇಂಗ್ಲೀಷ್ ಪದದಿಂದ ಬಂದಿರುವ ಪದವಾಗಿದೆ. 'ಪಾಪರ್ ಚೀಟಿ ಆಗೋದ' ಎನ್ನುವ ಪದವನ್ನು ಬಳಸುತ್ತಾರೆ.

**ಬೋಸುಡಿ**– ಬೋಸುಡಿ ಎನ್ನುವುದು ಭಿಕ್ಷೆ ಅರ್ಥದಲ್ಲಿ ಬಳಸಲಾಗುವು ಪದ. ಬೋಸಿ ಎಂದರೆ ಪಾತ್ರೆ, ಇಡಿ ಎಂದರೆ ಬಿಕ್ಷೆಯನ್ನು ಕೇಳು ಎನ್ನುವ ಅರ್ಥವನ್ನು ಕೊಡುತ್ತದೆ. ತಿರುಪೆ ಎತ್ತಿ ಬದುಕುವವರಿಗೆ ಈ ಮಾತಿನಲ್ಲಿ ಇಂದಿಗೂ ಬಯ್ಯುವುದನ್ನು ಕಾಣಬಹುದು.

**ಬೊಡ್ಡತ್ತದ್ದೆ**–ಬೊಡ್ಡಿ ಎಂದರೆ ಸೂಳೆ ಎನ್ನುವ ಅರ್ಥದಲ್ಲಿ ಬಳಸುತ್ತಾರೆ. ಅದಲ್ಲದೆ ಕೆಲವರು ಬೊಡ್ಡಿ ಎಂದರೆ ಹೆಂಡತಿ ಎನ್ನುವ ಅರ್ಥದಲ್ಲಿಯೂ ಸಹ ಬಳಸುತ್ತಾರೆ. ಮಗ ಎನ್ನುವ ಅರ್ಥದಲ್ಲಿ ಬಳಸುವ ಪದವಾಗಿದೆ.

**ಬೋಳಿಮಗ**–ಬೋಳಿ ಎಂದರೆ ತಲೆಯಲ್ಲಿ ಕೂದಲು ಇಲ್ಲದವಳು ಎನ್ನುವ ಅರ್ಥವನ್ನು ಕೊಡುತ್ತದೆ. ಅಪ್ಪನನ್ನು ಕಳೆದುಕೊಂಡು ಅಮ್ಮನ ಆಶ್ರಯದಲ್ಲಿ ಇರುವ ಮಕ್ಕಳಿಗೆ ಈ ಪದವನ್ನು ಬಳಸಿ ಬಯ್ಯುತ್ತಾರೆ.

**ನಿಂಗೆ ಅಳ್ ಕಟ್ಟ**–ನಿಂಗೆ ಸಾವು ಬರಲೆಂದು ಆಕುವ ಶಾಪ ಇದು. ಅಳ್ ಎಂದರೆ ಉಸಿರು ಕಟ್ಟು, ನಿಂತಿಹೋಗು ಎನ್ನುವ ಅರ್ಥವನ್ನು ಕೊಡುತ್ತದೆ. ಅಂದರೆ ಉಸಿರುನಿಂತು ಹೋಗಲಿ ಅರ್ಥಾತ್ ಸಾವು ಬರಲಿ ಎನ್ನುವ ರೀತಿಯ ಬಯ್ಗಳವಾಗಿದೆ. ಉಸಿರುಕಟ್ಟಿ ಸಾಯಿ ಎಂದು ಶಾಪ ಹಾಕಿ ಬೈಯುವ ಬಯ್ಗಳವಾಗಿದೆ.

ಮತ್ತೊಂದು ರೂಪದಲ್ಲಿಯೂ ಸಹ ಇದನ್ನು ಅರ್ಥೈಸುತ್ತಾರೆ ಅಳ್ ಎಂಬುದು ಅರಳು ಎಂಬ ಅರ್ಥವನ್ನು ಕೊಡುತ್ತದೆ. ಅಂದರೆ ಬುಜದ ಕೆಳ ಭಾಗದಲ್ಲಿ ಅರಳಿನ ರೂಪದ ಗುಳ್ಳೆ ಎದ್ದು ಜ್ವರ ಬಂದು ಅದು ವಾಸಿಯಾಗದೇ ಸಾಯುವವರಿಗೆ ಈ ರೀತಿ ಹೇಳುತ್ತಾರೆ.

**ನಿಂಗೆ ಆಪತ್ ಬಂದ್ ಚಾಪೇಲಿ ಸುತ್ಕೊಂಡೋಗ**–ಆಪತ್ ಎಂದರೆ ತೊಂದರೆ ಬಂದು ಸಾಯಿ ಎನ್ನುವ ಅರ್ಥದಲ್ಲಿ ಬಳಸುತ್ತಾರೆ. ಅಂದರೆ ಯಾವುದಾದರು ತೊಂದರೆ, ರೋಗ,

ಅಪಘಾತಕ್ಕೆ ಒಳಗಾಗಿ ಆಯಸ್ಸು ತುಂಬುವ ಮೊದಲೆ ಸಾಯಿ ಎನ್ನುವ ಅರ್ಥದಲ್ಲಿ ಬೈಯುವ ಬಯ್ಗಳವಾಗಿದೆ.

**ನಿಂಗ್ ತುಪಾಕಿ ರೋಗ್ಬಂದು ತುಪ್ಪುನ್ ಬೀಳ–** ತುಪಾಯಿ ಎಂದರೆ ಬಂದೂಕು, ಬಂದೂಕಿನಲ್ಲಿರುವ ಗುಂಡಿನಂತೆ ಬಿದ್ದು ಸಾಯಿ ಎನ್ನುವ ಅರ್ಥದಲ್ಲಿ ಬಳಸುವ ಬಯ್ಗಳ.

**ನಿಂಗೆ ನೆಲ್ಪಟ್ ಹೊಡಿಯ–** ನೆಲ್ಪಟ್ ಎನ್ನುವುದು ಎದೆ ಬಡಿತ ನಿಂತು ಹೋಗಿ ಸಾಯುವುದು ಎನ್ನುವ ಅರ್ಥದಲ್ಲಿ ಬಳಸಲಾಗುತ್ತದೆ. ಅಂದರೆ ಹೃದಯಾಘತವಾಗಿ ಸಾಯವುದು ಎನ್ನುವ ಅರ್ಥದಲ್ಲಿ ಈ ಪದವನ್ನು ಬಳಸಲಾಗುತ್ತದೆ.

**ನಿಂಗೆ ಪಳ್ಕಿನ್ ಮಾರಿ ತಗ್ಲ–**ಪ್ಲೇಗ್ ಕಾಯಿಲೆಯನ್ನು ಜನರು ಈ ರೀತಿ ಬಯ್ಗಳದ ರೂಪದಲ್ಲಿ ಪ್ಲೇಗ್ ಎನ್ನುವುದನ್ನು ಪಳ್ಕಿನ್ ಮಾರಿ ಎಂದು ಕರೆಯುತ್ತಿದ್ದಾರೆ. ಪ್ಲೇಗ್ ಎನ್ನುವ ಉಚ್ಚಾರಣೆಯನ್ನು ಪಳ್ಕಿನ್ ಮಾರಿ ರೋಗ ಎಂದು ಇಂದಿಗೂ ಕರೆಯುವುದನ್ನು ಕಾಣಬಹುದು. ಈ ರೋಗ ಬಂದಾಗ ಮಾರಿ ದೇವತೆಗೆ ಅರಳೆಣ್ಣೆ ಮತ್ತು ಅಕ್ಕಿಯನ್ನು ಮಾರಿ ದೇವತೆಯ ಮುಂದಿನ ಕಲ್ಲು ಕಂಬಕ್ಕೆ ಸುರಿದು ಬಂದು ಅರಿಸಿಣ ಮತ್ತು ಬೇವಿನ ಸೊಪ್ಪನ್ನು ಮೈಯಿಗೆ ಬಳಿದುಕೊಂಡು ಸ್ನಾನ ಮಾಡುವುದನ್ನು ಕಾಣಬಹುದು.

**ನಿಂಗೆ ಬಂದುದ್ದು ಬಯಲಾಗ್ದೆ ಹೋಗ–** ವ್ಯಕ್ತಿಗಳಿಗೆ ಬಂದ ರೋಗವು ವಾಸಿಯಾಗದೇ ಹೋಗಲಿ ಎನ್ನುವ ಅರ್ಥದಲ್ಲಿ ಬಳಸುವ ಬಯ್ಗಳ. ಬಯಲು ಎನ್ನುವುದು ಹೊರಗೆ ಎನ್ನುವುದನ್ನು ತಿಳಿಸುತ್ತದೆ. ಅಂದರೆ ನಿನಗೆ ಬಂದ ರೋಗ ಜನರಿಗೆ ತಿಳಿಯಲಿ ಎನ್ನುವ ಅರ್ಥದಲ್ಲಿಯೂ ಸಹ ಬಳಸುತ್ತಾರೆ. ಯಾವ ರೋಗವೆಂದು ತಿಳಿಯದಾಗಲಿ, ಅದು ವಾಸಿಯಾಗದೇ ಸಾವನ್ನು ಹೊಂದಲಿ ಎನ್ನುವ ಅರ್ಥದಲ್ಲಿ ಬಳಸುತ್ತಾರೆ.

**ನಿಂಗೆ ಮೊಲ್ಲಾಗ್ರು ಬರ–**ಮೊಲ್ಲಾಗ್ರ ಎನ್ನುವುದು ಒಂದು ರೋಗ ಅದು ಬಂದರೆ ಜನರು ಪ್ರಜ್ಞೆ ತಪ್ಪಿ ಹೋಗುತ್ತಾರೆ. ಅಂದರೆ ಮೂರ್ಚೆ ರೋಗ ಎಂದು ಕರೆಯುತ್ತಾರೆ. ಬುದ್ಧಿ ಗೆಡುವ ರೋಗ ಎಂದು ಸಹ ಇದನ್ನು ಕರೆಯಲಾಗುತ್ತದೆ.

**ನಿನ್ ಇಂಡೇಕೂಳ್ ಮಾಡ–**ಇದೊಂದು ಆಚರಣೆಯ ಬಯ್ಗಳ. ವ್ಯಕ್ತಿಯು ಸತ್ತ ನಂತರ ಮಾಡುವ ಕ್ರಿಯೆ. ಇದನ್ನು ತಿಥಿ ಎಂದು ಕರೆಯುತ್ತಾರೆ. ಕೂಳು ಎಂದರೆ ಅನ್ನ, ಇಂಡೆ ಎಂದರೆ ಮುಷ್ಟಿಯಷ್ಟು ಎನ್ನುವ ಅರ್ಥವನ್ನು ಕೊಡುತ್ತದೆ. ಪಿಂಡ ಇಡುವ ಪದ್ಧತಿ ಇಂದಿಗೂ ಅನೇಕ ಜನರು ಮಾಡುವ ಕ್ರಿಯೆ. ಸತ್ತ ಜನರಿಗೆ ಮಾಡುವ ಕ್ರಿಯೆ. ಪಿಂಡ

ಇಂಡೆಯಾಗಿ ಮಳವಳ್ಳಿ ಪರಿಸರದಲ್ಲಿ ಬಳಕೆಯಲ್ಲಿರುವುದನ್ನು ಕಾಣಬಹುದು. ಸತ್ತ ವ್ಯಕ್ತಿಗಳ ಎದೆಯ ಮೇಲೆ ಇಡುವ ಆಹಾರ ಪದಾರ್ಥಗಳನ್ನು ಇಂಡೇಕೂಳು ಎಂದು ಕರೆಯುತ್ತಾರೆ.

**ನಿನ್ ಕಪಾಲ್ ಸಿಡಿಯ**–ಅಂದರೆ ಕಪಾಲ ಸಿಡಿಯುವುದು ಎಂದರೆ ತಲೆ ಸಿಡಿಯುವುದು ಎನ್ನುವ ಅರ್ಥವನ್ನು ಕೊಡುತ್ತದೆ. ಸತ್ತ ವ್ಯಕ್ತಿಗೆ ತಲೆ ಸಿಡಿಯುವ ರೀತಿ ನಿನ್ನ ಕಪಾಲ ಸಿಡಿಯಲಿ ಎಂದು ಶಾಪ ಹಾಕುವ ಬಯ್ಗಳವಾಗಿದೆ.

**ನಿನ್ ಗೆಡ್ಡೆ ಕಿತ್ತೋಗ**–ಒಬ್ಬ ವ್ಯಕ್ತಿ ನಾಶವಾಗಲೆಂದು ಹಾಕುವ ಶಾಪವಾಗಿದೆ. ಗೆಡ್ಡೆ ಎಂದರೆ ಬೇರು ಎನ್ನುವ ಅರ್ಥವನ್ನು ಕೊಡುತ್ತದೆ. ನಿನ್ನ ಕುರುಹು ಸ್ವಲ್ಪವೂ ಇರದಂತೆ ನಾಶವಾಗು ಎನ್ನುವ ಅರ್ಥದಲ್ಲಿ ಬಳಸಲಾಗುತ್ತದೆ. ಒಂದು ಮರ ನಾಶವಾಗಲು ಅದರ ಬೇರು ಸಮೇತ ಇಲ್ಲವಾಗಿಸಿದರೆ ಅದು ನಾಶ ಹೊಂದುತ್ತದೆ ಇಲ್ಲವಾದರೆ ಅದು ಮತ್ತೇ ಬೆಳೆಯುತ್ತದೆ. ಆ ರೀತಿ ಒಬ್ಬ ವ್ಯಕ್ತಿಯನ್ನು ನಾಮಾವಶೇಷಗೊಳಿಸುವುದು ಎನ್ನುವ ಅರ್ಥದಲ್ಲಿ ಈ ಬಯ್ಗಳ ಬಳಕೆಗೊಂಡಿರವುದನ್ನು ಕಾಣಬಹುದು.

ಈ ರೀತಿಯಾಗಿ ಮಳವಳ್ಳಿ ಪರಿಸದಲ್ಲಿ ಬಳಕೆಯಲ್ಲಿರುವ ಕೆಲವು ಬಯ್ಗಳಗಳನ್ನು ಇಲ್ಲಿ ವಿವರಿಸಲಾಗಿದೆ. ಇನ್ನೂ ಅನೇಕ ರೀತಿಯ ಬಯ್ಗಳಗಳನ್ನು ಈ ಪರಿಸರದಲ್ಲಿ ಕಾಣಬಹುದು.

**೭.೩.ಸ್ಥಳನಾಮಗಳು**

ಮಳವಳ್ಳಿ ತಾಲೊಕಿನ ಸ್ಥಳನಾಮಗಳ ಬಗ್ಗೆ ಈ ಅಧ್ಯಾಯದಲ್ಲಿ ವಿವರಿಸಲಾಗಿದೆ. ಮಳವಳ್ಳಿ ಪರಿಸರದ ಸ್ಥಳನಾಮಗಳ ಹುಟ್ಟು, ಉಚ್ಚಾರಣೆ, ಬಳಕೆಯ ಕ್ರಮಗಳ ಬಗ್ಗೆ ವಿವರಿಸಲಾಗುವುದು.

ಪ್ರತಿಯೊಂದು ವಸ್ತುವಿಗೂ ಅದರದೆ ಆದ ಹೆಸರಿರುತ್ತದೆ. ಹೆಸರಿಲ್ಲದ ವಸ್ತುವಿಲ್ಲ, ವ್ಯಕ್ತಿ ಇಲ್ಲ, ಸ್ಥಳಗಳಿಲ್ಲ, ಪ್ರದೇಶಗಳಿಲ್ಲ, ದೇಶಗಳಿಲ್ಲ. ಎಲ್ಲರನ್ನು, ಎಲ್ಲವನ್ನು ಹೆಸರಿನಿಂದಲೇ ಹೆಸರಿಸುವುದು. ಪ್ರತಿಯೊಬ್ಬ ಮನುಷ್ಯನಿಗೂ ಒಂದೊಂದು ಹೆಸರಿರುತ್ತದೆ. ಆ ಹೆಸರಿನಿಂದಲೇ ಗುರುತಿಸುವುದು ಮತ್ತು ಕರೆಯುವುದು.

ಸ್ಥಳನಾಮಗಳು ಅನೇಕ ಹಿನ್ನೆಲೆ, ಕಾರಣಗಳನ್ನು ನೀಡುತ್ತವೆ. ಚಾರಿತ್ರ ಅಂಶಗಳನ್ನು, ಭಾಷಿಕ ಅಂಶಗಳನ್ನು, ವ್ಯಕ್ತಿವಾಚಕವನ್ನು, ಸಂಪ್ರದಾಯ, ಆಚರಣೆ ಇನ್ನೂ ಅನೇಕ ವಿಚಾರಗಳನ್ನು ಹೆಸರುಗಳು ವಿವರಿಸುತ್ತವೆ. ಹೆಸರುಗಳು ವೃತ್ತಿ, ಜಾತಿ, ಗುಣ, ರೂಪಗಳನ್ನು ವಿವರಿಸುತ್ತದೆ.

ಅದಷ್ಟೆ ಅಲ್ಲದೆ ಹೆಸರುಗಳು ಸಾಮಾಜಿಕ, ಧಾರ್ಮಿಕ, ಭೌಗೋಳಿಕ, ಚಾರಿತ್ರಿಕ, ಆರ್ಥಿಕ ವಿಚಾರಗಳನ್ನು ವಿವರಿಸುತ್ತವೆ.

ಸ್ಥಳನಾಮಗಳು ಭಾಷಿಕ ರಚನೆ, ಉಚ್ಚಾರಣಾ ವಿಧಾನವನ್ನು ವಿವರಿಸುತ್ತದೆ. ಒಂದು ಪ್ರದೇಶದ ಸ್ಥಳನಾಮವು ಆ ಪ್ರದೇಶದ ಭಾಷಿಕ ಹಿನ್ನೆಲೆಯನ್ನು, ಆ ಪ್ರದೇಶದ ಜನರ ಬಳಕೆಯ ವಿಧಾನವನ್ನು ತಿಳಿಸುವಲ್ಲಿ ಸಹಾಯಕವಾಗುತ್ತದೆ. ಸ್ಥಳನಾಮಗಳು ಒಂದು ಭಾಷೆಯ ಶಬ್ಧಕೋಶ, ಪದಕೋಶಗಳ ಅಭಿವೃದ್ಧಿಗೆ ಸಹಾಯಕವಾಗುತ್ತದೆ. ಶಬ್ಧಕೋಶ ಮತ್ತು ಭಾವಕೋಶಗಳ ವಾಹಕವಾಗಿ ರೂಪುಗೊಳ್ಳುವಲ್ಲಿ ಪ್ರಮುಖ ಪಾತ್ರವಹಿಸುತ್ತದೆ.

ಸ್ಥಳನಾಮಗಳು ರೂಪುಗೊಳ್ಳಲು ಕಾರಣ ಮನುಷ್ಯನು ಮೂಲತಃ ಅಲೆಮಾರಿಯಾಗಿದ್ದ, ಕಾಲಾ ನಂತರದಲ್ಲಿ ಒಂದು ಕಡೆ ನೆಲೆನಿಂತ ಮೇಲೆ ಒಂದು ಪ್ರದೇಶದಲ್ಲಿ ವಾಸಿಸಲು ಪ್ರಾರಂಭಿಸಿದ. ತಾನು ವಾಸಿಸುತ್ತಿದ್ದ ಸ್ಥಳಕ್ಕೆ ಅಥವಾ ಪ್ರದೇಶವನ್ನು ಗುರುತಿಸುವ ಸಲುವಾಗಿ ಅದಕ್ಕೆ ಒಂದು ಹೆಸರನ್ನು ನೀಡಿ ಕರೆಯಲು ಪ್ರಾರಂಭಿಸಿದ. ಅದೇ ಮುಂದೆ ಆ ಸ್ಥಳದ ಹೆಸರಾಗಿ ಬಳಕೆಗೊಳ್ಳುವುದಕ್ಕೆ ಶುರುವಾಯಿತು. ಆ ಹೆಸರು ತಾನು ವಾಸಿಸುತ್ತಿದ್ದ ಗುಡ್ಡ, ಬೆಟ್ಟ, ಕಣಿವೆ, ಕಾಡು, ಹಗ್ಗು, ತಗ್ಗು, ಮರ, ಗಿಡ, ಬಳ್ಳಿ, ಪ್ರಾಣಿ, ಪಕ್ಷಿ, ತಾವು ನಂಬಿ ಬಂದ ನಂಬಿಕೆ, ಆಚರಣೆಗಳು ಇತ್ಯಾದಿಗಳಿಗೆ ಹೊಂದಿಕೊಳ್ಳುವಂತೆ ಹೆಸರಿಸಲಾಗುತ್ತಿತ್ತು. ಮನುಷ್ಯ ಮುಂದುವರೆದಂತೆ ವ್ಯಕ್ತಿಗಳು ಕೆರೆ, ಕಟ್ಟೆ, ನದಿ ಇವುಗಳೊಂದಿಗೂ ಸ್ಥಳನಾಮಗಳು ಹೊಂದಿಕೊಂಡಿರುವುದನ್ನು ಕಾಣಬಹುದು.

ಇದು ಮುಂದುವರಿದು ಸ್ಥಳನಾಮಗಳು ಊರು, ಹಳ್ಳಿ, ಹಟ್ಟಿ, ಗ್ರಾಮ, ಗುಡಿ, ಕೊಪ್ಪ, ಕೊಪ್ಪಲು, ಪುರ, ದೊಡ್ಡಿ, ಇತ್ಯಾದಿಗಳಿಂದ ಕೊನೆಗೊಳ್ಳುವುದನ್ನು ಕಾಣಬಹುದು. ಮಳವಳ್ಳಿ ತಾಲೋಕಿನಲ್ಲಿ ೧೮೬ ಹಳ್ಳಿಗಳಿರುವುದನ್ನು ಕಾಣಬಹುದು. ಈ ಪ್ರದೇಶವು ಒಂದು ಕಡೆ ಕಾಡು ಪ್ರದೇಶವನ್ನು ಸುತ್ತುವರೆದಿದ್ದರೆ, ಉಳಿದ ಭಾಗ ಏರಿಳಿತಗಳಿಂದ ಕೂಡಿದೆ. ಮಳವಳ್ಳಿ ತಾಲೋಕಿನ ಸ್ಥಳನಾಮಗಳ ಭಾಷಿಕ ಬಳಕೆಯ ವಿಧಾನವನ್ನು ಈ ಕೆಳಕಂಡಂತೆ ವಿವರಿಸಬಹುದು.

**ಮಳವಳ್ಳಿ–** "ಮಳವಳ್ಳಿ ಸುತ್ತಲ ಪ್ರದೇಶ ಅರಣ್ಯಮಯವಾಗಿತ್ತಂತೆ. ಈ ಕಾಡಿನಲ್ಲಿ ಸುವಾಸನೆಯುತವಾದ ಮಲ್ಲೆಹೂವಿನ ಬಳ್ಳಿಗಳು ಅಧಿಕವಾಗಿದ್ದವಂತೆ. ಈ ಹೂವುಗಳನ್ನು ಕಾಡುಮಲ್ಲೆ ಹೂ ಎನ್ನುತ್ತಿದ್ದರಂತೆ. ಮಲ್ಲೇಹೂವಿನ ಬಳ್ಳಿಗಳು ಅಧಿಕವಾಗಿದ್ದ ಈ ಊರನ್ನು ಜನ ಮಲ್ಲವಲ್ಲಿ ಎಂದು ಕರೆಯುತ್ತಿದ್ದು ಕ್ರಮೇಣ ಮಲ್ಲವಲ್ಲಿಯು ಉಚ್ಚಾರಣೆಯಲ್ಲಿ

ಮಾರ್ಪಾಟಾಯಿತು. ಮಲ್ಲೆವಲ್ಲಿ ಎಂಬ ಪದ ಗಮನಾರ್ಹವಾದುದು. ಮಲ್ಲೆ ಎಂದರೆ ಮಲ್ಲೆಯ ಹೂ ವಲ್ಲಿ ಎಂದರೆ ಬಳ್ಳಿ ನಡೆದಾಡುವ ಮನುಷ್ಯರ ಕಾಲಿಗೆ ಮಲ್ಲೆವಲ್ಲಿ ತೊಡರಾಗುತ್ತಿದ್ದವು. ಅಂತೆಯೇ ಉಚ್ಚಾರಣೆಯಲ್ಲಿ ನಾಲಿಗೆಗೆ ತೊಡರಾಯಿತು. ಸುಲಭ ಮತ್ತು ಸೌಲಭ್ಯಕಾಂಕ್ಷಿಯಾದ ಮನುಷ್ಯನು ಮಲ್ಲವಲ್ಲಿ ಎಂದು ಕರೆದ. ಮಲ್ಲವಲ್ಲಿಯು ಉಚ್ಚಾರಣೆಯಲ್ಲಿ ಮಳವಳ್ಳಿಯಾಯಿತು. ಮಳವಳ್ಳಿ ಪದದ ನಿಷ್ಪತ್ತಿಯನ್ನು ಹೀಗೆ ಗುರುತಿಸುತ್ತಾರೆ. ಮಲೆವಲ್ಲಿ>ಮಲವಲ್ಲಿ>ಮಳವಳ್ಳಿ ಇದು ಉಚ್ಚಾರಣೆಯಲ್ಲಾದ ಬದಲಾವಣೆ"[೧] ಎಂದು ಇಲ್ಲಿಯ ಜನರು ಮಳವಳ್ಳಿ ಪದ ನಿಷ್ಪತ್ತಿಯ ಬಗ್ಗೆ ಕೇಳಿದರೆ ಈ ರೀತಿಯಾದ ಕತೆಯನ್ನು ಹೇಳುತ್ತಾರೆ.

ಇಲ್ಲಿಯ ಜನರು ಕೇವಲ ಮೇಲಿನ ನಿಷ್ಪತ್ತಿಯನ್ನು ಮಾತ್ರ ಹೇಳದೆ ಮೊತ್ತೊಂದು ಸಂಗತಿಯನ್ನು ಈ ನಿಷ್ಪತ್ತಿಯ ಜೊತೆ ಸಂಬಂಧ ಬೆಸೆಯುತ್ತಾರೆ. "ಮಳವಳ್ಳಿಯ ಸುತ್ತಲೂ ಕಾಡಿತ್ತು. ಈ ಕಾಡು ಪ್ರದೇಶದಲ್ಲಿ ವಿಶೇಷವಾಗಿ ಬಿಳಿಯ ಮೊಲಗಳಿದ್ದವಂತೆ. ಆದ್ದರಿಂದ ಈ ಊರನ್ನು ಮೊಲದಹಳ್ಳಿ ಎಂದು ಕರೆಯುತ್ತಿದ್ದು ಕಾಲಕ್ರಮೇಣ ಮೊಲದಹಳ್ಳಿ>ಮಳವಳ್ಳಿ ಎಂದಾಗಿರುವ ಸಾಧ್ಯತೆ ಇದೆ"[೨] ಹೀಗೆ ಮಳವಳ್ಳಿ ಊರಿನ ಪದನಿಷ್ಪತ್ತಿಯೂ ಆಗಿದೆ ಎಂಬುದು ಇಲ್ಲಿಯ ಜನರ ನಂಬಿಕೆ.

ಭಾಷಾ ವಿಜ್ಞಾನದ ಹಿನ್ನೆಲೆಯಿಂದ ಗಮನಿಸಿದಾಗ ಮಳವಳ್ಳಿ ಎಂಬ ಪದವು ಇಂದಿಗೂ ಇಲ್ಲಿಯ ಜನರ ಮಾತಿನಲ್ಲಿ ಮಳ್‌ವಳ್ಳಿ ಎಂದು ಉಚ್ಚರಿತವಾಗುತ್ತದೆ. ಮಾಳ ಎಂಬ ಪದವು ಮಳ ಆಗಿರಬಹುದೇನೊ? ಎಂದೆನಿಸುತ್ತದೆ. ಮಾಳ ಎಂದರೆ ಬಯಲು ಪ್ರದೇಶ ಎಂದರ್ಥ. ಚೋಳರು ಮಳವಳ್ಳಿಯ ಪಕ್ಕದ ಊರಾದ ಮಾರಳ್ಳಿಯಲ್ಲಿ ಆಳ್ವಿಕೆ ಮಾಡುವ ಕಾಲಘಟ್ಟದಲ್ಲಿ ಮಳವಳ್ಳಿ ಪ್ರದೇಶವೂ ಬಯಲು ಪ್ರದೇಶವಾಗಿತ್ತು ಎಂಬುದನ್ನು ಚರಿತ್ರೆ ನಮಗೆ ತಿಳಿಸುತ್ತದೆ. ಅದನ್ನು ಮಾಳ ಎಂಬ ಹೆಸರಿನಿಂದ ಇಲ್ಲಿ ಜನರು ಕರೆಯುತ್ತಿದ್ದಿರಬಹುದು. ಚೋಳರ ಕಾಲದಲ್ಲಿ ಮಾರಳ್ಳಿ ಬಹಳ ಪ್ರಸಿದ್ಧವಾದ ಊರಾಗಿದ್ದು ಊರಿನ ಹೊರಗೆ ಕೆಳಜಾತಿಗಳನ್ನು ಇಡಲಾಗಿತ್ತು ಆ ಪ್ರದೇಶವು ಚೋಳರ ಪಥನದ ನಂತರ ಮಾರಳ್ಳಿ ಕ್ಷೀಣವಾಗಿ ಮಳವಳ್ಳಿ ಪ್ರಸಿದ್ಧಿಗೆ ಬಂದಿರಬಹುದು.

ಮಾಳ–ಎಂದರೆ ಜನರಿಲ್ಲದ ಬಯಲು ಪ್ರದೇಶ ಎಂದಾಗುತ್ತದೆ. ಮಾಳದಲ್ಲಿ ವಾಸಿಸುತ್ತಿದ್ದವರು ಊರಿಂದ ಹೊರದೊಡಲ್ಪಟ್ಟ ಜನರಾಗಿದ್ದರು ಅವರೇ ಈ ಮಾಳದ ಜನರಾಗಿ ಇವರು ನಂತರದ ದಿನಗಳಲ್ಲಿ ಈ ಮಾಳ ಊರಾಗಿ ಪರಿವರ್ತನೆಯಾದ ಸಂದರ್ಭದಲ್ಲಿ

ಮಾಳ+ವಳ್ಳಿ>ಮಾಳವಳ್ಳಿ, ಮಳ+ವಳ್ಳಿ>ಮಳವಳ್ಳಿ ಆಗಿರಲೂಬಹುದು. ಈ ರೀತಿಯಾಗಿ ಮಳವಳ್ಳಿ ಪದ ನಿಷ್ಪತ್ತಿಯಾಗಿರಬಹುದು ಎನಿಸುತ್ತದೆ.

**ಮಾರೇಹಳ್ಳಿ**–ಮಾರೇಹಳ್ಳಿ ಎಂಬುದು ವ್ಯಕ್ತಿ ಸೂಚಕವಾಗಿ, ಜಾತಿ ಸೂಚಕವಾಗಿ ಬಳಕೆಗೊಳ್ಳುವುದನ್ನು ಕಾಣಬಹುದು. ಮಾರನಾಯಕ ಎಂಬ ವ್ಯಕ್ತಿಯು ವಿಜಯ ನಗರ ಸಾಮ್ರಾಜ್ಯ ಕಾಲದಲ್ಲಿ ದಂಡನಾಯಕನಾಗಿದ್ದು ಈ ಊರನ್ನು ಆಳ್ವಿಕೆ ಮಾಡುತ್ತಿದ್ದನು. ಆ ಕಾರಣಕ್ಕಾಗಿ ಈ ಊರಿಗೆ ವ್ಯಕ್ತಿ ಸೂಚಕ ಹೆಸರು ಬಂದಿದೆ ಎಂಬುದು ಇಲ್ಲಿಯ ಜನರ ಹೇಳಿಕೆ.

ವಿಜಯನಗರ ಕಾಲದ ಶಾಸನವೊಂದರಲ್ಲಿ 'ಮುದಜಾತಿ ಗ್ರಾಮ' ಎಂದು ಉಲ್ಲೇಖಿಸಿದೆ. ಈ ಜಾತಿ ಯಾವುದು ಎಂಬುದು ಸ್ಪಷ್ಟವಾಗಿ ತಿಳಿದು ಬಂದಿಲ್ಲ. ಮುದ ಎಂಬುದು ಮಾದಿಗ ಎಂದಿರಬೇಕು. ಈ ಊರು ಜಾತಿ ಸೂಚಕವಾಗಿಯೂ ಬಳಕೆಗೊಳ್ಳುವುದನ್ನು ಕಾಣಬಹುದು. ಈ ಹಳ್ಳಿಯಲ್ಲಿ ಮಾದಿಗ ಸಮುದಾಯದ ಜನರು ಹೆಚ್ಚು ವಾಸವಾಗಿದ್ದರೆಂದು ಇಲ್ಲಿಯ ಜನರ ಅಭಿಪ್ರಾಯ ಆ ಕಾರಣದಿಂದಾಗಿ ಮಾದಿಗರಹಳ್ಳಿ ಉಚ್ಚಾರಣೆಯಲ್ಲಿ ಮಾರಳ್ಳಿ ಎಂದು ಕರೆಯಲ್ಪಡುತ್ತದೆ.

ಇದೊಂದು ಐತಿಹಾಸಿಕವಾಗಿ ಪ್ರಮುಖವಾದ ಸ್ಥಳವಾಗಿದ್ದು ಈ ಊರಿಗೆ ಐತಿಹಾಸಿಕ ಮನ್ನಣೆ ಇರುವುದನ್ನು ಕಾಣಬಹುದು. ಮಂಟೇಸ್ವಾಮಿ ಕಾವ್ಯದಲ್ಲಿ ಮಂಟೇಸ್ವಾಮಿಗಳ ಶಿಷ್ಯರಾದ ಸಿದ್ಧಪ್ಪಾಜಿಯು ಮಾರಳ್ಳಿಗೆ ಶಾಪ ಕೊಟ್ಟಿರುವುದನ್ನು ಕಾಣಬಹುದು. 'ಮಾರಹಳ್ಳಿ ಹಾಳಾಗಲಿ, ಮಳವಳ್ಳಿ ಏಳಿಗೆಯಾಗಲಿ' ಎಂದು ಶಾಪವಿತ್ತಿದ್ದಾರೆ ಎಂಬುದು ಇಲ್ಲಿ ಜನರ ಅಭಿಮತ. ಮಾರಳ್ಳಿಯ ಜನ ಕಾಲಾನಂತರ ಚದುರಿ ಮಳವಳ್ಳಿಗೆ ಬಂದು ನೆಲೆಸಿದರು ಎಂಬ ಪ್ರತೀತಿ ಇದೆ.

ಈ ಪ್ರದೇಶವು ಚೋಳ ಮತ್ತು ವಿಜಯನಗರ ಸಾಮ್ರಾಜ್ಯದ ಕಾಲಘಟ್ಟದಲ್ಲಿ ಅಭಿವೃದ್ಧಿ ಹೊಂದಿದ್ದು, ಮಾರಳ್ಳಿಯಲ್ಲಿ ಪ್ರಸಿದ್ಧವಾದ ಲಕ್ಷ್ಮಿನರಸಿಂಹಸ್ವಾಮಿ ದೇವಾಲಯ ಇರುವುದನ್ನು ಕಾಣಬಹುದು. ಚೋಳರ ಕಾಲದ ಶಾಸನದಲ್ಲಿ ರಾಜಾಶ್ರಯ 'ವಿಣ್ಣಾಗರ, ಚೋಳೇಂದ್ರ ಚರ್ತುರ್ವೇದಿ ಮಂಗಲ' ಎಂದು ಕರೆದುಕೊಂಡಿದೆ. ವಿಶೇಷವೆಂದರೆ ಈ ದೇವರನ್ನು ಇಲ್ಲಿಯ ಜನ ಮಾರಳ್ಳಿಯ ಮುದುಕಪ್ಪ ಎನ್ನುವರು.

ಮಾರಹಳ್ಳಿ ಎಂಬ ಊರಿನ ಪದನಿಷ್ಪತ್ತಿಯು ಹೀಗಾಗಿರಬಹುದು. ಮಾರನಾಯಕಹಳ್ಳಿ ಎಂಬುವುದು ಪ್ರಾರಂಭದ ದಿನಗಳಲ್ಲಿ ಇದ್ದ ಈ ಊರಿನ ಹೆಸರು ಕಾಲಾಂತರದಲ್ಲಿ ಮಾರನಾಯಕನಹಳ್ಳಿ, ಮಾರನಹಳ್ಳಿ, ಮಾದರಹಳ್ಳಿ, ಮಾರಹಳ್ಳಿ, ಮಾರಳ್ಳಿ ಎಂದಾಗಿರಬಹುದು. ಇಂದಿಗೂ ಜನರ ಮಾತಿನಲ್ಲಿ ಮಾರಳ್ಳಿ ಎಂದೇ ಉಚ್ಚಾರಗೊಳ್ಳುತ್ತಿರುವುದನ್ನು ಕಾಣಬಹುದು.

**ಕಲ್ಲುಕಣಿ**– ಕಲ್ಲಿನಿಂದ ಆವೃತ್ತವಾದ ಬೆಟ್ಟ ಪ್ರದೇಶವಾಗಿರುವುದರಿಂದ ಈ ಊರಿಗೆ ಕಲ್ಲುಕಣಿ ಎಂದು ಹೆಸರಿದೆ. ಈ ಬೆಟ್ಟದಲ್ಲಿನ ಕಲ್ಲುಗಳನ್ನು ಜನರು ಮನೆಕಟ್ಟಲು ಬಳಸುತ್ತಿದ್ದರು. ಇಲ್ಲಿಯ ಕಲ್ಲುಗಳನ್ನು ಕಲ್ಲು ವಡೆಯುವ ಸಮುದಾಯ ಸುತ್ತಿದೆ, ಉಳಿಯಲ್ಲಿ ಕುಟ್ಟಿ ಅದಗೊಳಿಸುತ್ತಿದ್ದರಿಂದ ಈ ಊರಿಗೆ ಕಲ್ಲುಕಣಿ ಎಂದಾಗಿದೆ. ಜೊತೆಗೆ ಕಲ್ಲು ಕುಟಿಗರ ಕಣಿಕಣಿ ಶಬ್ಧ ಕುಣಿ ಆಗಿ ಕಾಲಾನಂತರ ಪರಿವರ್ತಿತವಾಗಿದೆ. ಶಾಸನಗಳಲ್ಲಿ ಕಲುಕುಣಿ, ಕಲ್ಲುಕಣಿ, ಹಿರಿಯ ಕಲ್ಲುಕಣಿ ಎಂದು ಉಲ್ಲೇಖಿಸಿದೆ. ಈ ಊರಿನ ಸಮೀಪದಲ್ಲಿ ಬೆಟ್ಟದ ಮೇಲಿರುವ ರಂಗಸ್ವಾಮಿ ದೇವರಿಗೆ ವಡ್ಡಗಲ್ಲು ರಂಗಸ್ವಾಮಿ ಎಂದೇ ಹೆಸರು. ಈ ಊರಿನಲ್ಲಿ ಕಲ್ಲು ವಡೆಯುವ ವಡ್ಡ ಸಮುದಾಯ ಇರುವುದನ್ನು ಕಾಣಬಹುದು. ಆ ಕಾರಣದಿಂದಾಗಿ ಈ ಬೆಟ್ಟಕ್ಕೆ ವಡ್ಡಗಲ್ಲು ರಂಗಸ್ವಾಮಿ ಎಂದಾಗಿರಬೇಕು.

ಊರಿನ ದೇವತೆ ಕೋರ್ಕಮ್ಮ ಮೂಗೂರು ತಿಬ್ಬಾದೇವಿ ಅಕ್ಕ ಪಾಳೇಗಾರರ ಕಾಲದಲ್ಲಿ ನಂಜರಾಯ ಪಟ್ಟಣದ ನಾಯಕನಪುರ, ಕಲ್ಲೂರು ಪಟ್ಟಣ ಎಂದೆಲ್ಲಾಹೆಸರು ಪಡೆದಿತ್ತು. ಈ ರೀತಿಯಾದ ಐತಿಹಾಸಿಕ ಹಿನ್ನೆಲೆಯನ್ನು ಇಲ್ಲಿಯ ಜನ ಈ ಸ್ಥಳಕ್ಕೆ ಆಧಾರವಾಗಿ ನೀಡುವುದನ್ನು ಕಾಣಬಹುದು.

ಈ ಎಲ್ಲಾ ಕಾರಣಗಳಿಂದ ಈ ಊರಿನ ಪದನಿಷ್ಪತ್ತಿಯನ್ನು ಗಮನಿಸಿದರೆ. ಕಲುಕುಣಿ ಎಂಬುದು ಕಲ್ಲುಕಣಿ ಎಂದಾಗಿದೆ. ಈ ಪದವು ವೃತ್ತಿ ಅನುಕರಣೆಯಿಂದ ಬಂದಿರುವ ಸಾದ್ಯತೆ ಹೆಚ್ಚಿರುತ್ತದೆ ಎಂದೆನಿಸುತ್ತದೆ.

**ಕಿರುಗಾವಲು**–ಈ ಊರಿಗೆ ಕಿರುಗಾವಲು ಎಂಬ ಹೆಸರು ಪ್ರಾದೇಶಿಕ ಹಿನ್ನೆಲೆಯಿಂದ ಬಂದಿದೆ. ಇಲ್ಲಿಯ ಪ್ರದೇಶದಲ್ಲಿ ಹುಲ್ಲುಗಾವಲು ಹೆಚ್ಚು ಬೆಳೆಯುತ್ತಿದ್ದ ಕಾರಣ ಈ ಊರಿಗೆ ಈ ಹೆಸರು ಬಂದಿದೆ ಎನ್ನುತ್ತಾರೆ ಇಲ್ಲಿಯ ಜನ. ಚಿಕ್ಕದಾದ ಹುಲ್ಲುಗಾವಲಿನ ಪ್ರದೇಶವಾಗಿದ್ದರಿಂದ ಈ ಊರಿಗೆ ಆ ಹೆಸರು ಬಂದಿದ್ದು. ಚಿಕ್ಕಕಾವಲು, ಕಿರುಗಾವಲಾಗಿ ಪರಿವರ್ತಿತವಾಗಿದೆ.

ಈ ಊರಿನಲ್ಲಿ ಕುರಿಗಳು ಹೆಚ್ಚು ಇರುವುನ್ನು ಕಾಣಬಹುದು. ಈ ಪ್ರದೇಶವು ಹುಲ್ಲುಗಾವಲಾದ ಕಾರಣ ಕುರಿಗಳಿಗೆ ಸಂಮೃದ್ಧಿಯಾದ ಆಹಾರ ಸಿಗುವುದರಿಂದ ಇಲ್ಲಿಯ ಜನ ಆ ಪ್ರಾಣಿಗಳನ್ನು ಸಾಕುವುದನ್ನು ಕಾಣಬಹುದು. ಇಲ್ಲಿ ಕುರುಬ ಸಮುದಾಯದ ಸಂಖ್ಯೆ ಹೆಚ್ಚು ಇರುವುದನ್ನು ಗಮನಿಸಬಹುದು.

ಟಿಪ್ಪು ಸುಲ್ತಾನನ ಕಾಲದಲ್ಲಿ ಇವನ ಚಿಕ್ಕ ಪಡೆಯೊಂದು ಇಲ್ಲಿ ಇತ್ತು ಎಂದು ಜನ ಹೇಳುತ್ತಾರೆ. ಆ ಕಾರಣದಿಂದಾಗಿ ಈ ಪ್ರದೇಶಕ್ಕೆ ಈ ಹೆಸರು ಬಂದಿರಬಹುದು ಎಂಬುದು ಇನ್ನೊಂದು ಊಹೆ.

**ಕೋರೆಗಾಲ**–ಭೂಪ್ರದೇಶದ ಲಕ್ಷಣ ಮತ್ತ ಐತಿಹಾಸಿಕ ಅಂಶಗಳನ್ನು ಈ ಊರಿನ ಹೆಸರು ಹೊಂದಿರುವುದನ್ನು ಕಾಣಬಹುದು. ಕೋರೆ ಎನ್ನುವುದು ಕಲ್ಲಿನ ಭೂಭಾಗದ ಮತ್ತು ದಿಂಡು ಕಲ್ಲುಗಳ ಆವೃತ್ತಿಯಿಂದ ಕೂಡಿದ ಜಾಗ ಎನ್ನುವುದನ್ನು ತಿಳಿಸುತ್ತದೆ. ಈ ರೀತಿಯ ತಗ್ಗು ಉಬ್ಬುಗಳಿಂದ ಕೂಡಿರುವ ಪ್ರದೇಶಕ್ಕೆ ಇದನ್ನು ಕೋರೆಗಾಲ ಎಂದು ಕರೆಯಬಹುದು. ಕಲ್ಲು ಕೋರೆಗಳ ಸ್ಥಳವಾದ್ದರಿಂದ ಉಚ್ಚಾರಣ ನಂತರ ಗಾಲ ಬಂದಿರಬಹುದು. ಎರಡು ಸಂಯುಕ್ತವಾಗಿ ಕೋರೆಗಾಲವಾಗಿರಬಹುದು.

ಇದಕ್ಕೆ ಮಳವಳ್ಳಿ ಸಮೀಪದ ಮಾರಳ್ಳಿ ದೇವಾಲಯದ ಲಕ್ಷ್ಮಿ ನರಸಿಂಹನ ಕೋರೆಗೂ ಈ ಊರಿನ ಹೆಸರಿಗೂ ಇಲ್ಲಿಯ ಜನರು ಸಂಬಂಧ ಕಲ್ಪಿಸುವುದನ್ನು ಕಾಣಬಹುದು. ವೈಕುಂಠದಿಂದ ಭೂ ಲೋಕಕ್ಕೆ ಲಕ್ಷ್ಮಿ ನರಸಿಂಹ ದೇವರು ಬರುವಾಗ ಕೋರೆಗಾಲ ಊರಿಗೆ ಮುಂಚಿತವಾಗಿ ಸಿಗುವ ತಳಗವಾದಿಗೆ ಬಂದನಂತೆ ಅಲ್ಲಿ ಮಳೆಬಂದು ತಳವೂರಿದನಂತೆ. ಮಾರನೇ ದಿನ ಹಳ್ಳಿ ಕೊಳ್ಳಗಳಿಂದ ಕೂಡಿದ, ಉಬ್ಬು, ತಗ್ಗು ದಿಣ್ಣೆಗಳಿಂದ ಕೂಡಿದ ಜಾಗಕ್ಕೆ ಬಂದಿದ್ದರಿಂದ ಈ ಊರಿಗೆ ಕೋರೆಗಾಲವಾಗಿರಬಹುದು ಎಂಬುದು ಇಲ್ಲಿನ ಜನರ ನಂಬಿಕೆ. ಈ ಊರಿನ ಸ್ಥಳನಾಮಕ್ಕೂ ಲಕ್ಷ್ಮಿನಂರಸಿಂಹನ ಕೋರೆಗೂ ಜನ ಸಂಬಂಧ ಕಟ್ಟಿ ಈ ರೀತಿಯ ಕತೆ ಹೇಳುವುದನ್ನು ಕಾಣಬಹುದು.

**ಕುಂದೂರು**–ಮಳವಳ್ಳಿ ಸಮೀಪದ ಊರೆ ಕುಂದೂರು. ಈ ಊರು ಐತಿಹಾಸಿಕವಾಗಿ ಪ್ರಸಿದ್ಧವಾದ ಊರು. ಇಲ್ಲಿಯ ಬೆಟ್ಟದಿಂದಾಗಿಯೇ ಈ ಊರು ಬಹಳ ಪ್ರಸಿದ್ಧಿಯನ್ನು ಪಡೆದುಕೊಂಡಿದೆ ಎಂದರೆ ತಪ್ಪಾಗಲಾರದು. ಮಂಟೇಸ್ವಾಮಿಗಳ ಶಿಶುಮಗನಾದ ಸಿದ್ದಪ್ಪಾಜಿಯು ತಪಸ್ಸು ಮಾಡಿ ಸಿದ್ಧಿ ಪಡೆದುದು ಈ ಬೆಟ್ಟದಲ್ಲೆ ಎಂಬ ಅಂಶ ತಿಳಿದುಬರುತ್ತದೆ. ಇದನ್ನು ರಸ ಸಿದ್ಧರ ಬೆಟ್ಟ ಎಂದು ಸಹ ಕರಯಲ್ಪಡುತ್ತದೆ.

ಸಿದ್ದಪ್ಪಾಜಿಯು ತಪಸ್ಸಿಗಾಗಿ ಕುಂತ ಊರೇ ಕುಂದೂರು ಆಗಿ ಪರಿವರ್ತಿತವಾಗಿರಬಹುದು. ಕುಂತ+ಊರು=ಕುಂದೂರಾಗಿ ಜನ ಬಳಕೆಯಲ್ಲಿ ಪರಿವರ್ತನೆಯಾಗಿರಬಹುದು. ಇಂದಿಗೂ ಈ ಊರಿನ ಜಾತ್ರೆ ಬಹಳ ಪ್ರಸಿದ್ಧವಾದುದು. ಸುತ್ತಮುತ್ತಲ ಹಳ್ಳಿಯ ಕೆರೆಗಳಲ್ಲಿನ ನೀರು ಬತ್ತಿ ಹೋದರು ಈ ಬೆಟ್ಟದ ಮೇಲಿನ ಕೆರೆಯ ನೀರು ಎಂದಿಗೂ ಬತ್ತುವುದಿಲ್ಲ ಎಂಬುದು ಇಲ್ಲಿಯ ಜನರ ನಂಬಿಕೆ.

**ಕುಂತೂರು**–ಇದು ಹಲಗೂರು ಸಮೀಪದಲ್ಲಿ ಇರುವ ಊರು. ಮುತ್ತತ್ತಿ ಕಾಡಿನ ಮಾರ್ಗವಾಗಿ ಮಲೆಮಹದೇಶ್ವರ ಬೆಟ್ಟಕ್ಕೆ ಹೋಗುತ್ತಾರೆ. ಹೋಗುವ ಮಾರ್ಗ ಮಧ್ಯದಲ್ಲಿ ಈ ಊರಿನಲ್ಲಿ ತಂಗಿ ಹೋಗುತ್ತಾರಂತೆ ಆ ಕಾರಣದಿಂದಾಗಿ ಈ ಊರಿಗೆ ಕುಂತೂರು ಎಂದಾಗಿದೆಯಂತೆ.

ಈ ಊರಿನ ಪದವನ್ನು ಬಿಡಿಸಿ ಬರೆದರೆ ಕೂತ+ಊರು=ಕೂತೂರು, ಕುಂತ+ಊರು=ಕುಂತೂರು ಎಂದಾಗುತ್ತದೆ. ಮಾದೇಶ್ವರ ಬೆಟ್ಟಕ್ಕೆ ಹೋಗುವ ಮಾರ್ಗಮಧ್ಯ ಕುಳಿತು ವಿಶ್ರಾಂತಿ ತೆಗೆದುಕೊಂಡು ಹೋಗುವ ಊರಾಗಿದ್ದರಿಂದ ಕುಂತೂರು ಆಗಿದೆ.

**ಗಾಜನೂರು**– ಈ ಊರಿನಲ್ಲಿ ಕಾಗೆ ಬಂಗಾರ ಇರುವ ಪ್ರದೇಶವಾಗಿದ್ದು, ಕಾಗೆ ಬಂಗಾರವು ಗಾಜಿನ ಹೊಳಪನ್ನು ಹೊಂದಿರುವುದರಿಂದ ಈ ಹೆಸರು ಬಂದಿದೆ. ಗಾಜು ಮೂಲತಃ ಹೊಳಪಿನ ಗುಣವನ್ನು ಹೊಂದಿದ್ದು ಕಾಗೆ ಬಂಗಾರವು ಆ ಗುಣವನ್ನು ಹೊಂದಿದ್ದರಿಂದ ಈ ಹೆಸರು ಬಂದಿರಬಹುದು. ಗಾಜಿನ+ಊರು=ಗಾಜನೂರು ಎಂದು ಆಗುವುದನ್ನು ಕಾಣಬಹುದು.

**ನೆಲಮಾಕನಹಳ್ಳಿ**–ಈ ಊರಿನ ಹೆಸರು ನೆಲೆ ಎಂದರೆ ಭೂಮಿ, ಮಾಕಳಿ ಎಂದರೆ ಬೇರು ಈ ಎರಡು ಸಂಯುಕ್ತ ಪದಗಳಿಂದ ಕೂಡಿದ್ದೆ ನೆಲವಾಕನಹಳ್ಳಿ. ನೆಲೆ+ಮಾಕಳಿ=ನೆಲಮಾಕನಳ್ಳಿ ಆಗಿದೆ.

ಈ ಊರಿನ ಪ್ರದೇಶದ ಭೂಮಿಯಲ್ಲಿ ಮಾಕಳಿ ಎಂಬ ಬೇರು ಸಿಗುತ್ತಿದ್ದರಿಂದ ಈ ಹೆಸರು ಬಂದಿದೆ ಎನ್ನುತ್ತಾರೆ ಇಲ್ಲಿಯ ಜನರು. ಇದೊಂದು ಔಷಧಿ ಗುಣವನ್ನು ಹೊಂದಿರುವ ಬೇರಾಗಿದೆ ಎನ್ನುತ್ತಾರೆ. ನೆಲದಲ್ಲೆ ಈ ಔಷಧಿ ಗಿಡ ಹರಡಿಕೊಳ್ಳುತ್ತದೆ. ನೆಲದಲ್ಲಿ ಸಿಗುವ ಈ ಗಿಡದ ಸೊಪ್ಪನ್ನು ಮತ್ತು ಬೇರನ್ನು ದನ, ಕರು, ಎಮ್ಮೆ, ಕುರಿಗಳಿಗೆ ಸಿದ್ಧೌಷದವಾಗಿ ಇಂದಿಗೂ

ಇಲ್ಲಿಯ ಜನ ಬಳಸುವುದನ್ನು ಕಾಣಬಹುದಾಗಿದೆ. ಆ ಕಾರಣದಿಂದಾಗಿ ಈ ಊರಿಗೆ ಆ ಹೆಸರು ಬಂದಿದೆ ಎಂದು ಹೇಳುತ್ತಾರೆ.

**ನೆಲ್ಲೂರು**–ನೆಲಮಾಕನಹಳ್ಳಿಯ ಸಮೀಪದ ಊರು. ನೆಲ್ಲು ಎಂದರೆ ಭತ್ತ ಎಂದರ್ಥವನ್ನು ಕೊಡುತ್ತದೆ. ಅಂದರೆ ಭತ್ತವನ್ನು ಅತಿ ಹೆಚ್ಚಾಗಿ ಬೆಳಯುತ್ತಿದ್ದ ಊರಾಗಿದ್ದರಿಂದ ಈ ಊರಿಗೆ ಈ ಹೆಸರು ಬಂದಿದೆ ಎನ್ನುತ್ತಾರೆ ಇಲ್ಲಿಯ ಜನ.

ಈ ಊರಿನಲ್ಲಿ ಸುತ್ತಮುತ್ತ ಭಾಗದಲ್ಲಿ ಮಳೆಯಾಶ್ರಯಿತ ಮುಂಡುಗಭತ್ತವನ್ನು ಇಲ್ಲಿಯ ಜನರು ಬೆಳೆಯುತ್ತಿದ್ದರಂತೆ ಆ ಕಾರಣದಿಂದಾಗಿ ಈ ಊರಿಗೆ ಈ ಹೆಸರುಬಂದಿದೆ ಎನ್ನುತ್ತಾರೆ. ಇಂದಿಗೂ ಈ ಊರಿನಲ್ಲಿ ನೆಲ್ಲು ಹುಲ್ಲಿನ ದೊಡ್ಡ ದೊಡ್ಡ ಮೆದೆಗಳನ್ನು ಕಾಣಬಹುದು. ನೆಲ್ಲು ಹುಲ್ಲಿನ ಮೆದೆಗಳ ಊರೇ ನೆಲ್ಲೂರು ಆಗಿರಲೂಬಹುದು.

**ಗುಳಘಟ್ಟ**–ಗುಳಘಟ್ಟ ಎಂಬ ಊರಿನ ಹೆಸರನ್ನು ಬಿಡಿಸಿ ಬರೆದಾಗ ಗುಳ+ಘಟ್ಟ=ಗುಳಘಟ್ಟವಾಗುತ್ತದೆ. ಗುಳ ಎಂದರೆ ನೇಗಿಲಿಗೆ ಹಾಕುವ ಕಬ್ಬಿಣದ ಮತ್ತು ಮರದ ಸಾಧನವನ್ನು ಈ ಪ್ರದೇಶದ ಜನ ಗುಳ ಎಂದು ಕರೆಯುತ್ತಾರೆ. ಘಟ್ಟ ಎಂಬುದು ಎತ್ತರವಾದ ಪ್ರದೇಶ ಎಂಬ ಅರ್ಥವನ್ನು ನೀಡುತ್ತದೆ. ಈ ಊರಿನಲ್ಲಿ ಕಬ್ಬಿಣದ ಗುಳಗಳನ್ನು ಮಾಡುವ ಆಚಾರಿಗಳನ್ನು ಇಂದಿಗೂ ಕಾಣಬಹುದು.

ಈ ಊರಿನ ಹೊಲ ಮಾಳಗಳಲ್ಲಿ ಹೆಚ್ಚಾಗಿ ಕಂಡುಬರುವ ಹಗೇವು ಎಂದರೆ ಭೂಮಿಯೊಳಗೆ ದವಸ ಧಾನ್ಯಗಳನ್ನು ಇಟ್ಟುಕೊಳ್ಳವ ಕಣಜ ಅಥವಾ ಗುಳಿಗಳನ್ನು ಹೊಂದಿದ್ದ ಸ್ಥಳವಾದ್ದರಿಂದ ಈ ಊರಿಗೆ ಗುಳಘಟ್ಟ ಎಂದಾಗಿದೆ ಎನ್ನುತ್ತಾರೆ.

**ಗಾಣಾಳು**–ಈ ಊರು ವೃತ್ತಿ ಮೂಲದಿಂದ ಬಂದಿರುವ ಊರಾಗಿದೆ. ಕಾರಣ ಈ ಊರಿನಲ್ಲಿ ಗಾಣಗಳಿಂದ ಎಣ್ಣೆ ತೆಗೆಯುವ ವೃತ್ತಿಯನ್ನು ಮಾಡುವ ಜನಾಂಗ ಇರುವುದನ್ನು ಕಾಣಬಹುದು. ಆ ಕಾರಣದಿಂದಾಗಿ ಗಾಣಾಳು ಎಂದಾಗಿದೆ.

ಈ ಊರಿನ ಪದ ನಿಷ್ಪತ್ತಿಯನ್ನು ಗಮನಿಸಿದಾಗ ಅದು ಈ ರೀತಿಯ ಅರ್ಥವನ್ನು ಪಡೆಯಬಹುದು. ಈ ಪದವನ್ನು ಬಿಡಿಸಿ ಬರೆದಾಗ ಅದು ಗಾಣ+ಆಳು=ಗಾಣಾಳು ಎಂದಾಗುತ್ತದೆ. ಅಂದರೆ ಗಾಣವನ್ನು ಆಳುವವನು ಗಾಣಿಗ ಎಂದಾಗುತ್ತದೆ. ಇಂದಿಗೂ ಗಾಣಿಗರು ಈ ಊರಿನಲ್ಲಿ ಹೆಚ್ಚು ಇರುವುದನ್ನು ಕಾಣಬಹುದು.

ಇಲ್ಲಿನ ಎಣ್ಣೆ ಸುತ್ತಮುತ್ತಲ ಊರಿನವರಿಗೆ ಇಂದಿಗೂ ಬಹಳ ಶುದ್ಧವಾದ ಎಣ್ಣೆ ದೊರೆಯುವ ಸ್ಥಳವಾಗಿ ಕಂಡುಬರುತ್ತದೆ. ಎತ್ತುಗಳನ್ನು ಬಳಸಿ ಇಲ್ಲಿ ಎಣ್ಣೆಯನ್ನು ತೆಗೆಯುತ್ತದ್ದರಂತೆ. ಇಲ್ಲಿ ಅಡಿಗೆ ಎಣ್ಣೆ ಮತ್ತು ದೀಪಗಳಿಗೆ ಬಳಸುವ ಎಣ್ಣೆಗೆ ಬಹಳ ಪ್ರಸಿದ್ಧವಾದ್ದು.

ಈ ಊರಿನ ಗಾಣಿಗರು ತೆಗೆಯುವ ಎಣ್ಣೆಯನ್ನು ಕಾಡಿನಲ್ಲಿರುವ ಮುತ್ತತ್ತಿಯ ಮುತ್ತತ್ತರಾಯನ ದೇವರ ಪೂಜೆಗೆ ಇಲ್ಲಿಯ ಎಣ್ಣೆಯನ್ನು ಬಳಸುತ್ತಿದ್ದರು ಎಂದು ಜನರು ಹೇಳುತ್ತಾರೆ.

**ಬಾಣಸಮುದ್ರ**– ಈ ಊರಿನ ಹೆಸರಲ್ಲಿ ಎರಡು ಪದಗಳಿರುವುದನ್ನು ಕಾಣಬಹುದು. ಒಂದು ಬಾಣ, ಮತ್ತೊಂದು ಸಮುದ್ರ ಈ ಪದವನ್ನು ಬಿಡಿಸಿ ಬರೆದಾಗ ಬಾಣ+ಸಮುದ್ರ=ಬಾಣಸಮುದ್ರವಾಗುತ್ತದೆ.

ಬಾಣ ಎಂದರೆ ಇಲ್ಲಿಯ ಜನರ ಮಾತಿನಲ್ಲಿ ಆಕಾಶ ಎಂಬ ಅರ್ಥದಲ್ಲಿ ಬಳಸುತ್ತಾರೆ. ಈ ಊರಿನ ಪಕ್ಕದಲ್ಲಿ ಕಾವೇರಿ ನದಿ ಸಮುದ್ರದ ರೀತಿ ಹರಿದು ಹೋಗುವುದರಿಂದ ಈ ಊರಿಗೆ ಬಾಣದಂತಹ ಸಮುದ್ರ ಎಂದು ಕರೆಯುವರು. ನದಿಯ ಪಕ್ಕದಲ್ಲಿರುವ ಊರೇ ಬಾಣಸಮುದ್ರ ಎಂದಾಯಿತು.

**ಹಾಡ್ಲಿ**–ಇದು ಮೂಲತಃ ಹಾಡಿ ಪ್ರದೇಶ. ಕಾಡು ಪ್ರದೇಶದ ಒಂದು ಹಳ್ಳಿ ಇದಕ್ಕೆ ಹಾಡ್ಯ ಎಂದು ಸಹ ಕರೆಯುತ್ತಾರೆ. ಈ ಪದದ ನಿಷ್ಪತ್ತಿ ಹೀಗಿದೆ, ಹಾಡಿ+ಅಲಿ=ಹಾಡ್ಲಿ ಆಗಿದೆ. ಹಾಡಿಯಲ್ಲಿ ವಾಸಿಸುವ ಜನರನ್ನು ಈ ಊರನ್ನು ಉಚ್ಚಾರಣಾ ದೃಷ್ಟಿಯಿಂದ ಹಾಡ್ಲಿ ಮಾಡಿದ್ದಾರೆ.

**ಅಗಸನಪುರ**–ಇದೊಂದು ವೃತ್ತಿ ಆಧಾರಿತ ಊರಾಗಿದೆ. ಈ ಊರಿನಲ್ಲಿ ಅಗಸರು ಹೆಚ್ಚಾಗಿರುವುದರಿಂದ ಈ ಹೆಸರು ಬಂದಿದೆ. ಅಗಸರು ಎಂದರೆ ಬಟ್ಟೆಗಳನ್ನು ಮಡಿ ಮಾಡಿ ಕೊಡುವ ಜನರು. ಮಡಿಮಾಡುವ ಜನರು ಇದ್ದ ಪ್ರದೇಶವೇ ಅಗಸನಪುರವಾಗಿರಬಹುದು. ಈ ಊರಿನಲ್ಲಿ ಉಪ್ಪರಿಗೆಯ ಬಸವಣ್ಣ ಬಹಳ ಮನಮೋಹಕವಾಗಿದೆ. ಈ ಊರಿನ ಒಂದು ಕಟ್ಟೆಗೆ ಅಗಸನಕಟ್ಟೆ ಎಂದೇ ಹೆಸರು ಇರುವುದನ್ನು ಕಾಣಬಹುದು.

**ತಾಳೆಹಳ್ಳ**–ಈ ಊರಿನ ಪದನಿಷ್ಪತ್ತಿಯನ್ನು ಗಮನಿಸಿದಾಗ ತಾಳೆ+ಹಳ್ಳ=ತಾಳೆಹಳ್ಳವಾಗಿದೆ. ತಾಳೆಯನ್ನು ಹೆಚ್ಚಾಗಿ ಬೆಳೆಯುತ್ತಿದ್ದ ಕಾರಣ ಈ ಊರಿಗೆ

ಈ ಊರಿನ ಪಕ್ಕದಲ್ಲಿ ಹಳ್ಳ ಹರಿಯುತ್ತಿರುವುದರಿಂದ ತಾಳ ಪದಕ್ಕೆ ಸಂಯುಕ್ತವಾಗಿ ಹಳ್ಳ ಸೇರಿಸಿ ತಾಳೆಹಳ್ಳವಾಗಿರುವುದನ್ನು ಕಾಣಬಹುದು.

**ಚೊಟ್ಟನಹಳ್ಳಿ**–ಈ ಊರಿನ ಹೆಸರು ವ್ಯಕ್ತಿಗಳ ಸ್ವಭಾವದಿಂದ ಹುಟ್ಟಿಕೊಂಡ ಊರಾಗಿದೆ. ಚೊಟ್ಟೆ ಎಂದರೆ ಮಳವಳ್ಳಿ ಪರಿಸರದ ಜನರು ಅಲೆದಾಡುವ ಎಂಬ ಅರ್ಥದಲ್ಲಿ ಈ ಪದವನ್ನು ಬಳಸುತ್ತಾರೆ. ಚೊಟ್ಟೆ ಎತ್ತಿ ಬಂದು ಒಂದು ಕಡೆ ನೆಲೆಸಿದ ಜನರೆ ಚೊಟ್ಟನಹಳ್ಳಿಯ ಜನ ಎನ್ನುತ್ತಾರೆ.

ಇಂದಿಗೂ ಅಲ್ಲಿ ಇಲ್ಲಿ ಅಲೆಯುವ ವ್ಯಕ್ತಿಗೆ 'ಎಲ್ಲಿ ಚೊಟ್ಟೆ ಎತ್ತುಕೋಗಿದೆ ಮುದೇವಿ' ಎಂದು ಬಯ್ಯುವುದ್ನು ಕಾಣಬಹದು. ತಗ್ಗು, ದಿಣ್ಣೆ ಪ್ರದೇಶಗಳನ್ನು ಅಲೆದು ಬಂದು ಈ ಪ್ರದೇಶದಲ್ಲಿ ನೆಲೆನಿಂತ ವ್ಯಕ್ತಿಗಳಿಗೆ, ಸ್ಥಳಕ್ಕೆ ಈ ಹೆಸರು ಬಂದಿದೆ ಎಂದು ಭಾವಿಸುತ್ತಾರೆ.

**ಕಂದೇಗಾಲ**–ಔಷಧಿ ಸಸ್ಯಗಳು ಬೆಳೆಯುತ್ತಿದ್ದ ಜಾಗವನ್ನು ಕಂದೇಗಾಲ ಎಂದು ಇಲ್ಲಿಯ ಜನ ಕರೆಯುತ್ತಾರೆ. ಈ ಊರಿನ ಮಣ್ಣಿನ ದೂಳು ಬಹಳ ಪ್ರಸಿದ್ಧವಾದುದು. ಮಕ್ಕಳಿಗೆ ಅನಾರೋಗ್ಯವಾದಾಗ ಈ ಭೂಮಿಯ ಮಣ್ಣನ್ನು ಬಳಿಯುವುದರಿಂದ ಅನಾರೋಗ್ಯದಿಂದ ಹೊರಬರತ್ತಾರೆ ಎನ್ನುತ್ತಾರೆ. ಈ ಊರಿನ ಸಮೀಪದ ಮತ್ತಿ ಮರದ ಚಕ್ಕೆಗಳನ್ನು ಬಳಸುವುದರಿಂದ ಚರ್ಮ ರೋಗದ ಕಾಯಿಲೆಗಳನ್ನು ನಿವಾರಿಸಬಹುದು.

ಈ ಊರಿನ ಒಂದು ಮಗುವಿಗೆ ಸಾವು ಬಂದಾಗ ಈ ನೆಲೆದ ದೂಳನ್ನು ಸವರಿಂದ್ದರಿಂದ ಆ ಮಗು ಬದುಕಿ ಬಂದ ಪವಾಡವನ್ನು ಇಲ್ಲಿಯ ಜನ ನೆನೆಸಿಕೊಳ್ಳುತ್ತಾರೆ. ಆ ಗುಣದಿಂದಾಗಿಯೆ ಈ ಊರಿಗೆ ಕಂದೇಗಾಲವಾಯಿತು ಎನ್ನುತ್ತಾರೆ. ಕಂದನನ್ನು ಉಳಿಸಿದ ಗಾಲದ ಧೂಳಿನ ಊರೇ ಕಂದೇಗಾಲವಾಗಿದೆ.

**ಯತ್ತಂಬಾಡಿ**–ತಾಳು ಕನ್ನಂಬಾಡಿ ತುದಿ ಯತ್ತಂಬಾಡಿ ಎನ್ನುವ ನಾಣ್ನುಡಿ ಇಲ್ಲಿಯ ಜನರ ಬಾಯಲ್ಲಿ ಈ ಊರಿನ ಬಗ್ಗೆ ಹೇಳುವುದನ್ನು ಕಾಣಬಹುದು. ಇದು ವ್ಯಕ್ತಿ ನಾಮದಿಂದ ಕೂಡಿರುವ ಊರಾಗಿದೆ. ಯತ್ತಯ್ಯ ಎಂಬ ವ್ಯಕ್ತಿಯಿಂದ ಕಟ್ಟಲ್ಪಟ್ಟ ಊರೇ ಯತ್ತಂಬಾಡಿ ಎಂದು ಹೇಳತ್ತಾರೆ. ಇದು ಕಾವೇರಿ ನದಿ ತಟದಲ್ಲಿರುವ ಊರಾಗಿದೆ.

ಯತ್ತಪಡಿ ಎಂದು ಜನರ ಮಾತಿನಲ್ಲಿ ಬಳಕೆಯಾಗುವುದನ್ನು ಕಾಣಬಹುದು. ಎತ್ತಿದ+ಪಡಿಯೇ=ಯತ್ತಂಬಾಡಿ ಆಗಿದೆ. ಈ ಊರಿನಲ್ಲಿ ಕಾಳೆ ದೇವಾಯ ಬಹಳ ಪ್ರಸಿದ್ಧವಾದುದು. ಇಲ್ಲಿ ಹಂದಿಯನ್ನು ಬಲಿ ಕೊಡುವುದನ್ನು ಕಾಣಹುದು. ಗಾಳಿ, ದೆವ್ವ ಬಿಡಿಸುವ ಪದ್ಧಿತಿಯೂ ಈ ಊರಿನಲ್ಲಿ ಪರಂಪರೆಯಿಂದ ನಡೆದುಕೊಂಡು ಬಂದಿದೆ.

**ರಾವಣಿ**–ಇದೊಂದು ಪುರಾಣ ಪ್ರಸಿದ್ಧವಾದ ಸ್ಥಳನಾಮವಾಗಿದೆ. ರಾಮಾಯಾಣದ ರಾವಣನ ಹೆಸರಿನ ಊರಾಗಿ ಬಳಕೆಗೊಳ್ಳುವುದನ್ನು ಕಾಣಬಹುದು. ಈ ಊರಿನಲ್ಲಿ ಕೆಂಗಣ್ಣೇಶ್ವರ ಎಂಬ ದೇವಾಯವಿದ್ದು ಈ ದೇವರನ್ನು ರಾವಣನೇ ಸ್ವತಃ ಪೂಜಿಸುತ್ತಿದ್ದನೆಂದು ಇಲ್ಲಿಯ ಜನರು ಹೇಳುತ್ತಾರೆ.

**ಬೊಪ್ಪೇಗೌಡನಪುರ**–ಇದೊಂದು ವ್ಯಕ್ತಿ ನಾಮ ಸೂಚಕ ಊರಾಗಿದೆ. ಈ ಊರಿನ ಹೆಸರಿನ ಹುಟ್ಟಿಗೆ ಕಾರಣನಾದ ವ್ಯಕ್ತಿಯೇ ಬೊಪ್ಪೇಗೌಡ. ಈತ ಕುರುಬರ ಮುಖಂಡನಾಗಿದ್ದು, ಕುರಿಗಳನ್ನು ಕಾಯುವ ವ್ಯಕ್ತಿಯಾಗಿದ್ದ. ಮಂಟೇಸ್ವಾಮಿ ಕತೆಯಲ್ಲಿ ಈತನ ಉಲ್ಲೇಖ ಇರುವುದನ್ನು ಕಾಣಬಹುದು. ಮಂಟೇಸ್ವಾಮಿಗಳು ಈ ಊರಿನಲ್ಲಿ ಮಠ ಕಟ್ಟುವ ಸಂದರ್ಭದಲ್ಲಿ ಈತ ಸಹಾಯಕನಾಗಿದ್ದ ಎನ್ನುವುದು ಇಲ್ಲಿಯ ಜನರ ಮಾತು. ಇದಕ್ಕೂ ಮೊದಲು ಈ ಊರಿಗೆ ಕಾಡಂಕನಹಳ್ಳಿ ಎಂದು ಕರೆಯಲಾಗುತ್ತಿತ್ತು. ನಂತರದ ದಿನಗಳಲ್ಲಿ ಇದು ಈ ವ್ಯಕ್ತಿಯಿಂದಾಗಿ ಈ ಹೆಸರು ಬಂದಿದೆ ಎನ್ನಲಾಗಿದೆ. ಈ ಊರಿನಲ್ಲಿ ಮಂಟೇಸ್ವಾಮಿಗಳ ಗದ್ದುಗೆ ಇರುವುದನ್ನು ಕಾಣಬಹುದು.

**ಮುಟ್ಟನಹಳ್ಳಿ**–ಇದೊಂದು ಐತಿಹಾಸಿಕವಾದ ಅಂಶದಿಂದ ಹುಟ್ಟಿಕೊಂಡ ಸ್ಥಳನಾಮವಾಗಿದೆ. ಇದರೊಂದಿಗೆ ವ್ಯಕ್ತಿ ಸೂಚಕ ಮತ್ತು ಘಟನೆಯಾಧಾರಿತವಾದ ಅಂಶಗಳೂ ಇದರೊಂದಿಗೆ ತಳುಕು ಹಾಕಿಕೊಂಡಿದೆ.

ಈ ಪ್ರದೇಶದಲ್ಲಿ ಪ್ರಚಲಿತದಲ್ಲಿ ಇರುವ ಜನಪದ ಕತೆಯಂತೆ ಮಂಟೇಸ್ವಾಮಿಗಳ ಶಿಷ್ಯರಾದ ರಾಚ್ಚಪ್ಪಾಜಿ, ಚನ್ನಾಜಮ್ಮ, ದೊಡ್ಡಮ್ಮತಾಯಿ ಜೊತೆಗೂಡಿ ಕಪ್ಪಡಿ ಕ್ಷೇತ್ರಕ್ಕೆ ಹೋಗುವಾಗ ಬೋಪ್ಪೇಗೌಡನಪುರದ ಪಶ್ಚಿಮಕ್ಕೆ ಒಂದು ಹರಿದಾರಿ ದೂರದಲ್ಲಿ ದೊಡ್ಡಮ್ಮತಾಯಿ ಮುಟ್ಟಾಗಿ ಅಲ್ಲೇ ಉಳಿದುಕೊಂಡಿದ್ದರಿಂದ ಆ ಊರಿಗೆ ಮುಟ್ಟನಹಳ್ಳಿ ಎಂದಾಗಿದೆ ಎಂದು ಇಲ್ಲಿಯ ಜನರು ಹೇಳುತ್ತಾರೆ. ಈ ದೊಡ್ಡಮ್ಮ ತಾಯಿ ಮೈಸೂರು ಅರಸರ ಸಂತತಿಯವಳು. ಈಕೆಯ ಸಮಾಧಿ ತೋಪಿನಲ್ಲಿ ಕಂಡುಬರುತ್ತದೆ. ವರ್ಷಕ್ಕೊಮ್ಮೆ ಈ ಸ್ಥಳದಲ್ಲಿ ಜಾತ್ರೆ ನಡೆಯುವುದನ್ನು ಕಾಣಬಹುದು.

**ಮೋಳೆ**–ಇದು ನೀರುಗಂಟಿ ವ್ಯವಸ್ಥೆಯ ಮೋಳೆ. ಇದೊಂದು ವೃತ್ತಿಯಾಧಾರಿತ ಸ್ಥಳನಾಮವಾಗಿದೆ. ಈ ಊರಿನಲ್ಲಿ ಬೆಸ್ತರು ಮತ್ತು ಅರಸು ಜಾತಿಯ ಜನರು ಹೆಚ್ಚು ವಾಸಮಾಡುವುದನ್ನು ಕಾಣಬಹುದು. ಸಾಮಾನ್ಯವಾಗಿ ಮೋಳೆ ಎನ್ನುವುದು ಒಂದು ವೃತ್ತಿ ಆ ವೃತ್ತಿಯನ್ನು ಮಾಡುವವರು ಬೆಸ್ತರು. ಹಿಂದೆ ಕೆರೆ ಆಶ್ರಯಿತ ಕೃಷಿ ವ್ಯವಸ್ಥೆಯಲ್ಲಿ ಜನರು

ತಮ್ಮ ಬೆಳೆಗಳಿಗೆ ನೀರು ಆಯಿಸುವ ಕೆಲಸವನ್ನು ಈ ಸಮುದಾಯದ ಜನ ಮಾಡುತ್ತಿದ್ದರು ಎನ್ನುವ ಪ್ರತೀತಿ ಇತ್ತು. ಕಾರಣ ನೀರು ಬೆಳೆ ಬೆಳೆದ ಎಲ್ಲರಿಗೂ ಸಮಪ್ರಮಾಣದಲ್ಲಿ ಸಿಗಬೇಕು ಎನ್ನುವ ಕಾರಣದಿಂದ, ನೀರು ಮಿತವಾಗಿ ಬಳಕೆಗೊಳ್ಳಬೇಕು ಎನ್ನುವ ಉದ್ದೇಶದಿಂದಾಗಿ ನೀರಿನ ಬಳಕೆಯನ್ನು ಈ ಸಮುದಾಯದ ಜನ ನೋಡಿಕೋಳ್ಳುತ್ತಿದ್ದರು.

ಮೋಳೆ ಹೆಸರಿನ ಮೂಲ ಗದ್ದೆಯ ಪಾತಿ ಅಥವಾ ತೆವರಿಗಳಲ್ಲಿ ಏಡಿಗಳು ಉಂಟುಮಾಡುವ ಬಿಲ ಎನ್ನುವ ಅರ್ಥವನ್ನು ಸಹ ಕೊಡುತ್ತದೆ. ಗದ್ದೆಗಳಲ್ಲಿ ಬೀಳುವ ಬಿಲಗಳನ್ನು ಮುಚ್ಚಿ ನಳ್ಳಿ (ಏಡಿ) ಗಳನ್ನು ಇಡಿದು ಗದ್ದೆಗಳಲ್ಲಿ ನೀರು ನಿಂತು ಬೆಳೆ ಬೆಳಯುವಂತೆ ಸಹಾಯ ಮಾಡುತ್ತಿದ್ದ ಕೆಲಸ ಈ ಜನಾಂಗದ್ದಾಗಿತ್ತು. ಆ ಕಾರಣದಿಂದಾಗಿ ಈ ಊರಿಗೆ ಮೋಳೆ ಎಂದು ಕರೆಯಲಾಗುತ್ತದೆ ಎನ್ನುವುದು ಇಲ್ಲಿಯ ಜನರ ನಂಬಿಕೆ

**ಚಿಕ್ಕಮುಲಗೂಡು–ದೊಡ್ಡಮುಲಗೂಡು**–ಇದೊಂದು ವ್ಯಕ್ತಿ ಸೂಚಕ ಸ್ಥಳನಾಮವಾಗಿದೆ. ಬೆಸ್ತರ ಜಾತಿಗೆ ಸೇರಿದ ದೊಡ್ಡಮುಲ ಮತ್ತು ಚಿಕ್ಕಮುಲ ಎಂಬ ಅಣ್ಣ ತಮ್ಮಂದಿರು ಸೇರಿ ತರಗು ಗುಡಿಸಿ ಕರಿಕಲ್ಲು ನೆಟ್ಟಿದ್ದರಿಂದ ಅವರುಗಳ ಹೆಸರೇ ಈ ಊರಿಗೆ ಬಂದಿದೆ ಎಂಬುದು ಇಲ್ಲಿಯ ಜನರು ಮಾತು.

**ನೆಟ್ಕಲ್**–ನೆಟ್ಕಲ್ ಎಂಬ ಊರು ಕ್ರಿಯಾ ಸೂಚಿಕ ಸ್ಥಳನಾಮವಾಗಿದೆ. ನೆಟ್ಟ ಕಲ್ಲಿನ ಊರೇ ನೆಟ್ಕಲ್ ಆಗಿರಬಹುದು. ಕಲ್ಲನ್ನು ನೆಟ್ಟು ಸ್ಥಳಗಳನ್ನು ಗುರುತಿಸುವುದು ರೂಢಿಯಲ್ಲಿರುವ ಸಂಗತಿ. ಈ ಊರಿನ ಗಡಿಭಾಗವು ಕಾವೇರಿ ನದಿಯ ದಂಡೆಯಲ್ಲಿದ್ದು ಅದರ ಗಡಿಭಾಗದಲ್ಲಿ ಕಲ್ಲನ್ನು ನೆಡುವ ಮೂಲಕ ಗುರ್ತಿಸಿರುವುದರಿಂದ ಈ ಹೆಸರು ಬಂದಿದೆ ಎನ್ನುತ್ತಾರೆ.

**ಮುತ್ತತ್ತಿ**–ಇದೊಂದು ಕಾಡು ಪ್ರದೇಶದಿಂದ ಕೂಡಿರುವ ಸ್ಥಳ. ಪುರಾಣ ಪ್ರಸಿದ್ಧಿಯೊಂದಿಗೆ ಈ ಸ್ಥಳನಾಮ ಬೆಸೆದುಕೊಂಡಿರುವುದನ್ನು ಕಾಣಬಹುದು. ಮುತ್ತುಗದ ಮರಗಳು ಅತಿ ಹೆಚ್ಚು ಇದ್ದ ಜಾಗವಾದ್ದರಿಂದ ಈ ಊರಿಗೆ ಮುತ್ತತ್ತಿ ಎಂಬ ಹೆಸರು ಬಂದಿದೆ ಎನ್ನುತ್ತಾರೆ.

ಇದಲ್ಲದೆ ಪುರಾಣ ಪ್ರಸಿದ್ಧವಾದ ರಾಮಾಯಣದ ಪ್ರಮುಖ ವ್ಯಕ್ತಿಯಾದ ಶ್ರೀರಾಮನು ಲಕ್ಷ್ಮಣ, ಸೀತೆಯರೊಡಗೂಡಿ ಈ ಸ್ಥಳದಲ್ಲಿ ತಂಗಿದ್ದನೆಂದು ಹೇಳುತ್ತಾರೆ. ಒಂದು ದಿನ ಸೀತೆಯು ಈ ಊರಿನಲ್ಲಿರುವ ಕಾವೇರಿ ನದಿಯಲ್ಲಿ ಸ್ನಾನ ಮಾಡಲು ಹೋಗಿದ್ದಾಗ ಅವಳ ಮೂಗಿನಲ್ಲಿದ್ದ ಮುತ್ತಿನ ನತ್ತು ಆ ನದಿಯಲ್ಲಿ ಬಿದ್ದು ಹೋಯಿತಂತೆ ಆಗ ಹನುಮಂತನು

ಕಳೆದುಹೋದ ಮೂಗಿನ ಮುತ್ತಿನ ನತ್ತನ್ನು ಹುಡುಕಿಕೊಟ್ಟಿದ್ದರಿಂದ ಈ ಸ್ಥಳಕ್ಕೆ ಮುತ್ತತ್ತಿ ಎಂದು ಕರೆಯಲಾಯಿತು. ಇಲ್ಲಿಯ ಪ್ರಸಿದ್ಧವಾದ ದೇವರೇ ಮುತ್ತೆತ್ತರಾಯ. ಬಹಳ ಪ್ರಸಿದ್ಧವಾದ ದೇವರಾಗಿದೆ.

**ಹಲಗೂರು**–ಹಲ ಎಂದರೆ ಉಳುವ ಸಾಧನ. ನೇಗಿಲು. ಹಿಂದೆ ಈ ಊರು ಕುಲುಮೆಗೆ ಹೆಸರುವಾಸಿಯಾದ ಊರು. ಹಲವನ್ನು ತಯಾರಿಸುವ ಊರೆ ಹಲಗೂರು ಆಗಿದೆ. ಕಬ್ಬಿಣದ ವಸ್ತುಗಳು ತಯಾರಾಗುತ್ತಿದ್ದ ಐತಿಹಾಸಿಕವಾದ ಸ್ಥಳ ಈ ಊರು.

ಮಂಟೇಸ್ವಾಮಿ ಕತೆಯಲ್ಲಿ ಬರುವಂತೆ ಪಾಂಚಾಳ ರಾಜರು ಆಳುತ್ತಿದ್ದ ಊರಾಗಿದೆ. ಮಂಟೇಸ್ವಾಮಿಗಳ ಶಿಷ್ಯರಾದ ಸಿದ್ದಾಪ್ಪಾಜಿಯನ್ನು ಹಲಗೂರಿಗೆ ಕಬ್ಬಿಣದ ಬಿಕ್ಷೆಗಾಗಿ ಕಳುಹಿಸಿದ್ದರಂತೆ. ಆಗ ಪಾಂಚಾಳರು ಸಿದ್ಧಾಪ್ಪಾಜಿಗೆ ಕಬ್ಬಿಣದ ಬಿಕ್ಷೆ ಕೊಡದೆ ಅನೇಕ ಪರೀಕ್ಷೆಗಳಿಗೆ ಒಳಪಡಿಸಿದರಂತೆ. ಆಗ ಸಿದ್ಧಪ್ಪಾಜಿ ಪವಾಡ ಮಾಡಿ ಕಬ್ಬಿಣದ ಬಿಕ್ಷೆ ತಂದನು ಎಂದು ಪ್ರತೀತಿ ಇದೆ. ಹಲಗೂರಿನ ಕಬ್ಬಿಣವು ವಿಶ್ವಪ್ರಸಿದ್ಧವಾದ ಕಬ್ಬಿಣವಾಗಿದೆ.

**ದಳವಾಯಿ ಕೋಡಿಹಳ್ಳಿ**–ಕೆರೆಯ ಕೋಡಿಯು ಬಿದ್ದು ಇಲ್ಲಿನ ಜನರ ವ್ಯವಸಾಯಕ್ಕೆ ನೀರು ಸಹಾಯಕವಾಗುತ್ತಿತ್ತಂತೆ ಆ ಕಾರಣದಿಂದಾಗಿ ಇದು ದಳವಾಯಿ ಕೋಡಿಹಳ್ಳಿ ಆಯಿತು. ಚನ್ನಪಟ್ಟಣದ ಪ್ರಸಿದ್ಧ ಪಾಳೇಗಾರ ಜವರಾಯ ಎನ್ನುವ ಪ್ರಸಿದ್ಧ ದಳವಾಯಿಯು ಬಂದು ಈ ಊರಿಗೆ ಸೇರಿದ ವ್ಯಕ್ತಿಯಿಂದ ಈ ಊರಿಗೆ ಈ ಹೆಸರು ಬಂದಿದೆ ಎನ್ನುತ್ತಾರೆ. ಇದೊಂದು ವ್ಯಕ್ತಿ ಸೂಚಕವಾಗಿಯೂ ಸಹ ಬಳಕೆಗೊಳ್ಳುವುದನ್ನು ಕಾಣಬಹುದು. ಈತನು ತನ್ನ ಕಾರ್ಯಕ್ಷೇತ್ರವನ್ನು ಈ ಊರಿನಲ್ಲಿ ನಡೆಸುತ್ತಿದ್ದ ಎನ್ನಲಾಗುತ್ತದೆ. ಆ ಕಾರಣದಿಂದ ಈ ಊರಿಗೆ ಹೆಸರು ಬಂದಿದೆ.

**ದಬ್ಬಹಳ್ಳಿ**–ದಬ್ಬಹಳ್ಳಿಯು ಇದೊಂದು ಪ್ರದೇಶ ಸೂಚಕ ಸ್ಥಳನಾಮವಾಗಿದೆ. ಈ ಊರಿನ ಸುತ್ತಾ ಮುತ್ತ ಕಾಡು ಆವೃತ್ತವಾಗಿದ್ದು. ಇಲ್ಲಿ ದರ್ಬೆ ಹುಲ್ಲು ಹೆಚ್ಚು ಬೆಳೆದಿದ್ದು. ಈ ದರ್ಬೆ ಹುಲ್ಲನ್ನು ಮನೆಗಳ ಚಾವಣಿಯನ್ನು ಮುಚ್ಚಲು ಅಲ್ಲಿಯ ಜನರು ಬಳಸುತ್ತಿದ್ದ ಕಾರಣ ಈ ಊರಿಗೆ ದರ್ಬೆಯ ಹುಲ್ಲಿನ ಹಳ್ಳಿಗೆ ದಬ್ಬಹಳ್ಳಿ ಎಂದಾಗಿದೆ. ಸ್ಥಳೀಯವಾಗಿ ದರ್ಬೆ ಹುಲ್ಲನ್ನು ಬೋದೆ ಹುಲ್ಲು ಎಂದು ಕರೆಯುತ್ತಾರೆ.

**ಹಿಟ್ಟನಹಳ್ಳಿ ಕೊಪ್ಪಲು**–ಈ ಊರಿನ ಸ್ಥಳನಾಮದಲ್ಲಿ ಮೂರು ಪದಗಳಿರುವುದನ್ನು ಕಾಣಬಹುದು. ಹಿಟ್ಟನ+ಹಳ್ಳಿ+ಕೊಪ್ಪಲು ಎಂಬ ಮೂರು ಪದಗಳ ಸಂಯುಕ್ತ ರೂಪದಿಂದ

ಬಳಕೆಗೊಳ್ಳುತ್ತಿರುವುದನ್ನು ಕಾಣಬಹುದು. ಈ ಪ್ರದೇಶದಲ್ಲಿ ಹೆಚ್ಚು ರಾಗಿ ಬೆಳೆಯನ್ನು ಬೆಳೆಯುತ್ತಿದ್ದರು. ರಾಗಿಹಿಟ್ಟು ಈ ಊರಿನ ಹೆಸರಿಗೆ ಕಾರಣವಾಗಿರಬಹುದು. ಕೊಪ್ಪಲು ಎನ್ನುವುದು ಸಣ್ಣ ಪ್ರದೇಶಕ್ಕೆ ಸೂಚಿಸುತ್ತಿದ್ದು. ಇದು ಸಣ್ಣ ಊರಾಗಿರುವುದರಿಂದ ಈ ಕೊಪ್ಪಲು ಎಂಬ ಹೆಸರು ಬಂದಿರಬಹುದು.

**ಮಾರ್ಕಾಲ್**–ಮೂಲತಃ ಇದು ಮರದ+ಕಾಲು=ಮರದಗಾಲು ಆಗಿದ್ದು. ಮುಂದೆ ಜನ ಬಳಕೆಯಲ್ಲಿ ಮಾರ್ಕಲ್ ಆಗಿರಬಹುದು. ಇದೊಂದು ಮರದಿಂದ ಬಂದ ಹೆಸರಾಗಿರಬಹುದು. ಈ ಮಾರಿ ದೇವತೆಯ ಹಬ್ಬಕ್ಕೆ ಮರದ ಕಾಲಿನ ದೊಣ್ಣೆಗಳನ್ನು ಬಳಸಿ ದೇವಿಯನ್ನು ಕುಣಿಸುವುದನ್ನು ಕಾಣಬಹುದು. ಮಾರಿ ಕಾಲು ಮಾರ್ಕಾಲ್ ಆಗಿದೆ ಎನ್ನುತ್ತಾರೆ ಇಲ್ಲಿಯ ಜನ.

ಐತಿಹಾಸಿಕವಾಗಿಯು ಸಹ ಜನರು ಕತೆಯೊಂದನ್ನು ಹೇಳುತ್ತಾರೆ. ಟಿಪ್ಪು ಸುಲ್ತಾನನ ಕಾಲದಲ್ಲಿ ಮಾರ್ಕಲ್ ಎಂಬ ಸೇನಾಧಿಕಾರಿ ಮರಣಹೊಂದಿದ್ದರಿಂದ ಈ ಊರಿಗೆ ಆ ಹೆಸರು ಬಂದಿದೆ ಎನ್ನುತ್ತಾರೆ. ಅದಲ್ಲದೆ ಟಿಪ್ಪು ಸುಲ್ತಾನನು ತನ್ನ ಸೈನ್ಯವನ್ನು ಮಾರಿಗೊಂದರಂತೆ ನಿಲ್ಲಿಸಿದ ಕಾರಣದಿಂದಾಗಿಯೂ ಈ ಹೆಸರು ಬಂದಿದೆ ಎನ್ನುವುದು ಇಲ್ಲಿಯ ಜನರ ಮಾತು.

**ತಳಗವಾದಿ**–ಮಳವಳ್ಳಿ ಸಮೀಪದ ಮಾರಳ್ಳಿ ದೇವಾಲಯದ ಲಕ್ಷ್ಮಿ ನರಸಿಂಹನಸ್ವಾಮಿ ದೇವರು ಮಾರಳ್ಳಿಗೆ ಹೋಗುವಾ ಮಾರ್ಗ ಮಧ್ಯದಲ್ಲಿ ಸಿಗುವ ಊರೆ ತಳಗವಾದಿ. ವೈಕುಂಠದಿಂದ ಭೂ ಲೋಕಕ್ಕೆ ಲಕ್ಷ್ಮಿ ನರಸಿಂಹ ದೇವರು ಬರುವಾಗ ಕೋರೆಗಾಲ ಊರಿಗೆ ಮುಂಚಿತವಾಗಿ ಸಿಗುವ ತಳಗವಾದಿಗೆ ಬಂದನಂತೆ ಅಲ್ಲಿ ಮಳೆಬಂದು ತಳವೂರಿದನಂತೆ. ಆ ಹಳ್ಳಿಯಲ್ಲಿ ತಳವೂರಿದ್ದರಿಂದ ಈ ಊರಿಗೆ ತಳಗವಾದಿ ಎಂದು ಹೆಸರು ಬಂದಿದೆ ಎಂಬುದು ಇಲ್ಲಿ ಜನರ ನಂಬಿಕೆ. ತಳ ಎಂದರೆ ಸ್ಥಳ ಎಂದಾಗುತ್ತದೆ. ವಾದ ಎಂಬುದು ತರ್ಕ ಎಂದಾರ್ಥವನ್ನು ನೀಡುತ್ತದೆ ಈ ಎರಡು ಪದಗಳು ಸೇರಿ ತಳಗವಾದಿ ಆಗಿರಬಹುದು.

**ತಿಗಳರದೊಡ್ಡಿ**–ಇದೊಂದು ಜನಾಂಗ ಸೂಚಕವಾದ ಸ್ಥಳನಾಮವಾಗಿರುವುದನ್ನು ಕಾಣಬಹುದು. ಈ ಊರಿನಲ್ಲಿ ತಿಗಳ ಜನಾಂಗ ಅತಿ ಹೆಚ್ಚು ವಾಸಮಾಡುತ್ತಿರುವುದರಿಂದ ಈ ಹೆಸರು ಬಂದಿದೆ ಎನ್ನಲಾಗುತ್ತದೆ.

ಈ ಸ್ಥಳನಾಮದಲ್ಲಿ ಎರಡು ಪದಗಳ ಸಂಯುಕ್ತದಿಂದ ಆಗಿರುವುದನ್ನು ಕಾಣಬಹುದು. ಒಂದು ತಿಗಳರು ಇನ್ನೊಂದು ದೊಡ್ಡಿ. ದೊಡ್ಡಿ ಎನ್ನುವುದು ಕಡಿಮೆ ಜನರು ವಾಸಿಸುವ ಸ್ಥಳಕ್ಕೆ ಬಳಕೆಯಾಗುವ ಪದ. ಇದೊಂದು ಚಿಕ್ಕ ಊರು.

ಈ ರೀತಿಯಾಗಿ ಮಳವಳ್ಳಿ ತಾಲೋಕಿನ ಸ್ಥಳನಾಮಗಳ ಹುಟ್ಟು, ಬಳಕೆಯ ಕ್ರಮವನ್ನು ಕಾಣಬಹುದಾಗಿದೆ. ಇಲ್ಲಿ ವ್ಯಕ್ತಿ ಸೂಚಕ, ಸ್ಥಳ ಸೂಚಕ, ವೃತ್ತಿ ಸೂಚಕ, ಜನಾಂಗಿ, ಐತಿಹಾಸಿ ಇತ್ಯಾದಿ ಅಂಶಗಳಿಂದ ಸ್ಥಳನಾಮಗಳನ್ನು ಗುರತಿಸಿ ಹೆಸರಿಸುವುದನ್ನು ಕಾಣಬಹುದು.

**ಕೊನೆ ಟಿಪ್ಪಣಿ**

೧. ಮಂಡ್ಯ ಜಿಲ್ಲೆಯ ಜಾತ್ರೆಗಳು-ಡಾ.ಜಿ.ಎ.ದಾಸೇಗೌಡ, ಪುಟ-೮೭

೨. ಮಂಡ್ಯ ಜಿಲ್ಲೆಯ ಜಾತ್ರೆಗಳು-ಡಾ.ಜಿ.ಎ.ದಾಸೇಗೌಡ, ಪುಟ-೮೭

## ಮಳವಳ್ಳಿ ಪರಿಸರದ ಪದಕೋಶ

ಸಾಮಾನ್ಯವಾಗಿ ಒಂದು ಪ್ರದೇಶದ ಆಡುನುಡಿಯ ವೈಶಿಷ್ಟ್ಯತೆಯನ್ನು ಆ ಪ್ರದೇಶ ಭಾಷಾ ಸನ್ನಿವೇಶ, ಅರ್ಥ, ರಚನೆ, ಸಾಮಾಜಿಕ ಮತ್ತು ಸಾಂಸ್ಕೃತಿಕ ಅನನ್ಯತೆಯಿಂದ ನಿರ್ಧರಿಸಬಹುದು.

ಮಳವಳ್ಳಿ ಪರಿಸರದ ಪದಕೋಶವು ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಪದಗಳಾಗಿವೆ. ಸಂಗ್ರಹಿಸಿದ ಪದಕೋಶಗಳನ್ನು ಮಳವಳ್ಳಿ ಪರಿಸರದ ಹೊಲೆಯರು, ಮಾದಿಗರು, ಬೆಸ್ತರು ಈ ಮೂರು ಸಮುದಾಯಗಳಲ್ಲಿ ಹೇಗೆ ಬಳಕೆಗೊಳ್ಳುತ್ತದೆ ಎನ್ನುವುದನ್ನು ಕಾಣಬಹುದು. ಈ ಮೂರು ಸಮುದಾಯಗಳಲ್ಲಿನ ಪದಕೋಶಗಳ ನಡುವಿನ ವ್ಯತ್ಯಾಸವನ್ನು ಕೆಳಕಂಡಂತೆ ಗಮನಿಸಬಹುದು.

| **ಬರಹ ಕನ್ನಡ** | **ಹೊಲೆಯರು** | **ಮಾದಿಗರು** | **ಬೆಸ್ತರು** |
|---|---|---|---|
| ನಿಧಾನ | ತಳಾರ್ಕೆ | ತಳಾರ್ಕೆ | ತಳಾರ್ಕೆ |
| ಅಗುರ | ಅರ್ಸ | ಅರ್ಸ | ಅರ್ಸ |
| ದಿನ | ಜಿನ | ಜಿನ | ಜಿನ |
| ಕೆಲಸ | ಚೇಮೆ | ಚೇಮೆ | ಕೇಮೆ |
| ವಾಂತಿ | ವಾಕ್ರಿಕೆ | ವಾಕ್ರಿಕೆ | ವಾಂತಿ |
| ಬೇಸರ | ಸಿಬ್ರಿಕೆ | ಸಿಬ್ರಿಕೆ | ಸಿಬ್ರಿ |
| ಸ್ವಲ್ಪ | ಚಿಂಕ್ರ | ಸಿಂಕ್ರ | ನಿಂಕ್ರ |
| ಸ್ಮಶಾಣ | ಮಸಾಣ | ರೂಗಾಡಮಾಳ | ಮಸಾಣ |
| ಜವಾಬ್ದಾರಿ | ಉಸಾಬರಿ | ಉಸಾಬರಿ | ಉಸಾಬರಿ |
| ದೀಪ | ಸೊಡ್ಲು | ಸೊಡ್ಲು | ಸೊಳ್ಳು |
| ಹಾವು | ಆಮು | ಆಮು | ಆಮು |
| ಕಿವಿ | ಚಿಮಿ | ಚಿಮಿ | ಕಿಮಿ |

| | | | |
|---|---|---|---|
| ಮೇಕೆ | ಆಡು | ಆಡ್ಮರಿ | ಆಡ್ಮರಿ |
| ಬಚ್ಚಲು | ಕೆರಂಡಿ | ಬಚ್ಲು | ಚರಂಡಿ |
| ಪಕ್ಕ | ಮಗ್ಲು | ಮೊಗ್ಲು | ಅರ್ಗು |
| ಹಿಸುಕು | ಚಿಮ್ಕು | ಚಿಮ್ಕು | ವಸ್ಕು |
| ಸಮಸ್ಯೆ | ತೂತು | ತೂತು | ತೂತು |
| ಗುಟ್ಟು | ತೊಕ್ಕು | ತೊಕ್ಕು | ತೊಕ್ಕು |
| ಕೆಲಸ | ಗ್ಯಂಬ್ರ | ಜಂಬ್ರ | ಜಂಬ್ರ |
| ಕೋಪ | ಕ್ಯಾಣ | ಕ್ಯಾಣ | ಕ್ಯಾಣ |
| ಸಕ್ಕರೆ | ಚಕ್ರೆ | ಚಕ್ರೆ | ಸಕ್ರೆ |
| ಇರುವೆ | ಎರ | ಎರ | ಇರ |
| ಉಪ್ಪು | ನವಣೆ | ನವಣ | ರುಚಿ |
| ಅಹಂಕಾರ | ಚರ್ಬಿ | ಚರ್ವಿ | ಚರ್ಬಿ |
| ಗಿಳಿ | ಗಿಣಿ | ಗಿಣಿ | ಗಿಣಿ |
| ಬಾವಿ | ಬಾಮಿ | ಬಾಮಿ | ಬಾಮಿ |
| ಬೇಲಿ | ಒಬ್ಬೆ | ಒಬ್ಬೆ | ಒಬ್ಬೆ |
| ಪೊರಕೆ | ಬರ್ಲು | ಬರ್ಲು | ಬರ್ಲು |
| ಅವಸರ | ಅವ್ಸ್ರ | ಅವ್ಸ್ರ | ಅಮ್ಸರ |
| ಕೆಳಗೆ | ಚಳ್ಗೆ | ಚಳಕೆ | ಕೈಳಕೆ |
| ತೊಂದರೆ | ಯಡವಟ್ಟು | ಯಡವಟ್ಟು | ಯಡವಟ್ಟು |
| ಮುಚ್ಚಿಟ್ಟು | ಅಮ್ಸು | ಅವ್ಸು | ಅಮ್ಸು |
| ಹೆಚ್ಚಾಗಿ | ಯಳ್ಳಾಗಿ | ಯಳ್ಳಾಗಿ | ದಡ್ಡಾಗಿ |
| ಶವ ಕೂರಿಸು ಸಾಧನ | ಕುರ್ಜು | ಕುರ್ಜು | ಕುರ್ಜು |
| ಬೇಡ | ವಲ್ಲಿ | ವಲ್ಲಿ | ವಲ್ಲಿ |
| ಬೇಗ | ಬಿರ್ನೆ | ಬಿರ್ನೆ | ಬಿರ್ನೆ |

| | | | |
|---|---|---|---|
| ನೇರವಾಗಿ | ಏಕ್ಸನ | ಏಕ್ಸನ | ಏಕ್ಸನ |
| ಮುಕ್ತಾಯ | ಜಟನಾಯ್ತು | ಜಟನಾಯ್ತು | ಜಟನಾಯ್ತು |
| ಹಿಂದೆ ಹೋಗು | ಬೊಂಬ್ಳಾ | ಬೊಂಬ್ಳಾ | ಬೊಂಬ್ಳಾ |
| ಊದಿಕೊಂಡಿದೆ | ಬೂದುಸ್ಕೊಂಡದೆ | ಬೂದುಸ್ಕೊಂಡದೆ | ಬೂದುಸ್ಬುಟ್ವದೆ |
| ಮುಖ | ಮುಸುಡಿ | ಮುಸುಡಿ | ಮೂತಿ |
| ಗುಣವಾಯಿತು | ಚೆಂದೊಯ್ತು | ಚೆಂದೊಯ್ತು | ವಾಸಿ |
| ಸರಿಯಾಗಿ ಇಲ್ಲ | ಊಟ್ಗೆಟ್ಬುದ್ದು | ಊಟ್ಗೆಟ್ಬುದ್ದು | ಊಟ್ಗೆಟ್ಬುದ್ದು |
| ಬುದ್ಧಿಕಲಿಯದ | ಸೀಗ್ಲಿಮೋಗ್ಲಿ | ಸೀಗ್ಲಿಮೋಗ್ಲಿ | ಸೀಗ್ಲಿಮೋಗ್ಲಿ |
| ಜೀವ | ಜೀಮ | ಜೀಮ | ಜೀಮ |
| ಬೇಡು | ಗ್ವಾಗೆರಿ | ಗ್ವಾಗೆರಿ | ಗ್ವಾಗರಿ |
| ತೃಪ್ತಿ | ಮನಾರ | ಮನಾರ | ಮನಾರ |
| ಕ್ಷೌರಿಕ | ಚೆಲ್ಲಿ | ಚೆಲ್ಲಿ | ಕೆಲ್ಲಿ |
| ಧೈರ್ಯವಂತ | ಜೂರತ್ಗಾರ | ಜೂರತ್ಗಾರ | ಜೂರತ್ಗಾರ |
| ಮತ್ತೆ | ತಿರ್ಬುನ | ತಿರ್ಬುನ | ತಿರ್ಬುನ |
| ಆಕಾಶ | ಬಾಣ | ಬಾಣ | ಬಾಣ |
| ಉಚ್ಚೆ | ವಂದ | ವಂದ | ಮೈನೀರು |
| ನೆನಪು | ಗೇಪ್ನ | ನೆಪ್ಪು | ಗ್ಯಾಪ್ನ |
| ರಾಗಿ ತೆನೆ | ಅಕ್ಲು | ಅಕ್ಲು | ಅಕ್ಲು |
| ಮುಂದೆ | ಮೊಗ್ಬಾಯಿ | ಮೊಗ್ಬಾಯಿ | ಮೊಗ್ಬಾಯಿ |
| ಪೂರ್ಣ | ತಾಮಾಮು | ತಾಮಾಮು | ತಮಾಯ |
| ಎಲ್ಲಾ | ವಾಕಗಿ | ವಾಕಗಿ | ವಾಕಗಿ |
| ಇಡೀ ರಾತ್ರಿ | ಬೆಳ್ಗಾನ | ಬೆಳ್ಗಾನ | ಬೆಳ್ಗಾನ |
| ಆತಂಕ | ದಿಗ್ಲು | ದಿಗ್ಲು | ದಿಗ್ಲು |
| ಅತ್ತಿರ | ದಂಡೆ | ದಂಡೆ | ದಂಡೆ |

| | | | |
|---|---|---|---|
| ಬೇಗ | ಬಿರ್‌ನೆ | ಬಿರ್‌ನೆ | ಸರಂಜಾಗಿ |
| ಮಧ್ಯಾಹ್ನದ ನಂತರ | ಯಡೊತ್ತು | ಯಡೊತ್ತು | ಯಡೊತ್ತು |
| ಚರ್ಮ | ಚಕ್ಳ | ಚಕ್ಳ | ಚಕ್ಳ |
| ಕೊಡುವುದು | ಕ್ವ | ತಕೊ | ಕ್ವಾ |
| ಗರ್ಭಿಣಿ | ಬಸ್ರಿ | ಬಸ್ರಿ | ಬಿಮ್ಮನ್ಸೆ |
| ಮೋಸಗಾರ | ಅನ್ನೇಕಾರ | ಅನ್ನೇಕಾರ | ಅನ್ನೇಕಾರ |
| ಕಡಲೆ | ಕಳ್ಳೆ | ಕಳ್ಳೆ | ಕಡ್ಲೆ |
| ಬೇಧ ಮಾಡು | ವಲಂಚ್ನೆ | ವಲಂಚ್ನೆ | ವಲಂಚ್ನೆ |
| ಅಲೆಯುವವ | ಪಸ್ಗೆ | ಪಸ್ಗೆ | ಪಸ್ಗೆ |
| ಕಿರಚು | ಕಿರ್ಚು | ಕಿರ್ಚು | ಗಳ್ಳು |
| ಪಕ್ಕ | ಮೊಗ್ಲು | ಮೊಗ್ಲು | ಅರ್ಗು |
| ಆಸೆ | ಆಸೆ | ಆಸೆ | ಬವುಣ್ಕೆ |
| ಪಲ್ಯ | ಗೊಜ್ಜು | ಗೊಜ್ಜು | ತಾಳ್ದ |
| ಆಶ್ಚರ್ಯ | ಪೆಚ್ಚಾಗಿ | ಪೆಚ್ಚಾಗಿ | ಪೆಚ್ಚಾಗಿ |
| ನಿದ್ದೆ ಬರುವುದು | ಕಣ್ಣು ಕವುತ್ತೆ | ಕಣ್ಣು ಕವುತ್ತೆ | ಕಣ್ಣು ಕವುತ್ತೆ |
| ಜವಾಬ್ದಾರಿ | ವಪ್ಪಾಚಾರ | ವಗ್ಗತನ | ವಗ್ಗತನ |
| ಅಂಗವಿಕಲ | ಅಯ್ಬು | ಅಯ್ಬು | ಅಯ್ಬು |
| ನಗು | ನಗ | ಕಾಕ | ನಗ |
| ಸಂಬಂಧ | ಸಲ್ಮೊರೆ | ಸಲ್ಮೊರೆ | ವರ್ಸೆ |
| ಕೆಟ್ಟವನು | ಚೇಕ್‌ಮಾರಿ | ಚೇಕ್‌ಮಾರಿ | ಕೇಕ್‌ಮಾರಿ |
| ಮೃದು | ಸೂಬ್ಳ | ಸೂಬ್ಳ | ಸೂಬ್ಳೆ |
| ತಟಿಗೆ | ನೆರ್ಕೆ | ನೆರ್ಕೆ | ನೆರ್ಕೆ |
| ತಂತ್ರ | ಆಯ | ಆಯ | ಆಯ |
| ಓಡಿಸು | ಅದ್ರುಸು | ಅದ್ರುಸು | ಅದ್ರುಸು |

| | | | |
|---|---|---|---|
| ನಿಂಬೆಹಣ್ಣು | ಇಂಬಿಹಣ್ಣು | ಇಂಬಿಹಣ್ಣು | ಇಂಬಿಹಣ್ಣು |
| ಮರಳು | ಮಳ್ಳು | ಮಳ್ಳು | ಮಳ್ಳು |
| ಅಪರೂಪ | ಅಪೂಪುರ | ಅಪೂಪುರ | ಅಪೂಪುರ |
| ಕಿಬ್ಬೊಟ್ಟೆ | ಅಳ್ಳೆಪರಿ | ಅಳ್ಳೆಪರಿ | ಅಳ್ಳೆಪರಿ |
| ಸಮಯ | ಸೌಳು | ಸೌಳು | ಸೌಳು |
| ಮಗು | ಮೊಗ | ಮೊಗ | ಗಬ್ಬೆ |
| ನೆಲ | ನ್ಯಲ | ನ್ಯಲ | ನ್ಯಲ |
| ಬಾಗಿಲು | ನಿಲ | ನಿಲ | ದಾರಂದ |
| ಸ್ವಲ್ಪ ಬಿಸಿ | ತೌಬೆಚ್ಚಗೆ | ತೌಬೆಚ್ಚಗೆ | ಉಗ್ರುಬೆಚ್ಗೆ |
| ನಾಟಕ | ಬೇತೂರಾಟ | ಬೇತೂರಾಟ | ಬೇತೂರಾಟ |
| ಬೆಕ್ಕು | ಕೊತ್ತಿ | ಕೊತ್ತಿ | ಕೊತ್ತಿ |
| ಕೊಡು | ತತ್ತಾ | ತತ್ತಾ | ತತ್ತಾ |
| ತೆವಳು | ಜರ್ಕು | ಅಚಿಚೆ | ತಮಿ |
| ದುಂಬಿ | ಕಡ್ಜ | ಕಡ್ಜ | ಕಡ್ಜ |
| ಅಹಂಕಾರ | ಗಡಮೆ | ಗಡಮೆ | ಗಡಮೆ |
| ಶಾಸ್ತ್ರಬದ್ಧ | ಕುನೇಕ | ಕುನೇಕ | ಕುನೇಕ |
| ನಿಧಾನ | ಮಲಾಮೆ | ಮಲಾಮೆ | ಮಲಾಮೆ |
| ತೊಂದರೆ | ಯಕ್ವಾಸ | ಯಕ್ವಾಸ | ಯಕ್ವಾಸ |
| ಉಬ್ಬಸ | ಉಬ್ರಣೆ | ಉಬ್ರಣೆ | ಉಬ್ಸ |
| ಜೋಪಾನ | ಉಸಾರಾಗಿ | ಉಸಾರಾಗಿ | ಮೌರಾಗಿ |
| ಅಹಂಕಾರ | ತ್ವಾರ | ತ್ವಾರ | ತ್ವಾರ |
| ಉಡ | ಉಡ | ಉಡ | ಜೀಮಾಜಿ |
| ಒಂದು | ವಂದು | ವಂದು | ವಂದು |

| | | | |
|---|---|---|---|
| ಓಡು | ವೊದ್ಗು | ವೊದ್ಗು | ವೊದ್ಗು |
| ಸರಿಯಾಗಿ | ಮಸ್ವಾಗಿ | ಮಸ್ವಾಗಿ | ಮಟ್ವಾಗಿ |
| ಎಚ್ಚರ | ನಿಗ | ನಿಗ | ಲಿಗ |
| ಮುಸ್ಸಂಜೆ | ಮೊಕ್ಕೊತ್ಲು | ಮೊಕ್ಕೊತ್ಲು | ಮೊಕ್ಕೊತ್ಲು |
| ಬೇರೆ | ಬ್ಯಾರೆ | ಬ್ಯಾರೆ | ಅಲಾಕಾಗಿ |
| ಸೋಮಾರಿ | ಮುಸಂಡಿ | ಸೋಂಬೇರಿ | ಮುಸಂಡಿ |
| ಹುಲಿ | ಉಲಿ | ಉಲಿ | ಬರ್ಗ |
| ಅಳಿಲು | ಅಳ್ಳುಮ | ಅಳ್ಳುಮ | ಅಳುಮ |
| ಹಾವುರಾಣಿ | ಆಪ್ರಾಣಿ | ಆಪ್ರಾಣಿ | ಆಪ್ರಾಣಿ |
| ಹುಲಿ | ಉಲಿ | ಉಲಿ | ದೊಡ್‌ನಾಯಿ |
| ಓತಿಕ್ಯಾತ | ಅಂಟೆಗೊದ್ದ | ಅಂಟೆಗೊದ್ದ | ಅಂಟೆಗೊದ್ದ |
| ಏಡಿ | ಎಕ್ಕೇನಳ್ಳಿ | ಎಕ್ಕೇನಳ್ಳಿ | ನಳ್ಳಿ |
| ಬೇಡ | ವಲ್ಲಿ | ವಲ್ಲಿ | ವಲ್ಲಿ |
| ಗುಟ್ಟು | ಮೋಕುಪ್ಪು | ಮೋಕುಪ್ಪು | ಮೋಕುಪ್ಪು |
| ಹೆಚ್ಚು | ಜಾಸ್ತಿ | ಜಾಸ್ತಿ | ಮಸ್ತು |

**ಬಂಧು ಸೂಚಕ ಪದಗಳು**

| **ಬರಹ ಕನ್ನಡ** | **ಹೊಲೆಯರು** | **ಮಾದಿಗರು** | **ಬೆಸ್ತರು** |
|---|---|---|---|
| ಅಪ್ಪ | ಅಪ್ಪ | ಅಪ್ಪ | ಅಪ್ಪ |
| ತಾಯಿ | ಅವ್ವ | ಅವ್ವ | ಅವ್ವ |
| ಅಜ್ಜ | ಅಯ್ಯ | ಅಯ್ಯ | ತಾತ |
| ಅತ್ತಿಗೆ | ಅತ್ಗೆ | ಅತ್ಗೆ | ಅತ್ಗೆ |

| | | | |
|---|---|---|---|
| ಚಿಕ್ಕಮ್ಮ | ಚಿಕ್ಕೋ | ಚಿಕ್ಕಿ | ಚಿಕ್ಕವ್ವ |
| ನಾದಿನಿ | ನಾದ್ನಿ | ನಾದ್ನಿ | ನಾದ್ನಿ |
| ಮೈದುನ | ಮಯ್ದ | ಮಯ್ದ | ಮಯ್ದ |
| ಬೀಗರು | ಬೀಗ್ರು | ಬೀಗ್ರು | ಬೀಗ್ರು |
| ಅಳಿಯ | ಅಳ್ಯ | ಅಳ್ಯ | ಅಳ್ಯ |
| ದೊಡ್ಡಮ್ಮ | ದೊಡ್ಡವ್ವ | ದೊಡ್ಡವ್ವ | ದೊಡ್ಡವ್ವ |
| ಬೀಗತಿ | ಬೀಗ್ತಿ | ಬೀಗ್ತಿ | ಬೀಗ್ತಿ |

**ಜಾತಿ ಮತ್ತು ವೃತ್ತಿ ಸೂಚಕ ಪದಗಳು**

| **ಬರಹ ಕನ್ನಡ** | **ಹೊಲೆಯರು** | **ಮಾದಿಗರು** | **ಬೆಸ್ತರು** |
|---|---|---|---|
| ಅಕ್ಕಸಾಲಿಗರು | ವಾಜ್ರು | ವಾಜ್ರು | ವಾಜ್ರು |
| ಒಡ್ಡರು | ವಡ್ರು | ವಡ್ರು | ವಡ್ರು |
| ಕುಂಬಾರರು | ಕುಂಬಾರ್ರು | ಕುಂಬಾರ್ರು | ಕುಂಬಾರ್ರು |
| ಬೇಡರು | ಬೇಡ್ರು | ಬೇಡ್ರು | ಬ್ಯಾಡ್ರು |
| ಅಗಸರು | ಅಗುಸ್ರು | ಅಗುಸ್ರು | ಅಗುಸ್ರು |
| ಮೇದರು | ಮ್ಯಾದ್ರು | ಮ್ಯಾದ್ರು | ಮ್ಯಾದ್ರು |
| ಶೆಟ್ಟರು | ಸೆಟ್ರು | ಸೆಟ್ರು | ಸೆಟ್ರು |

**ಮಾನವ ದೇಹ ಸಂಬಂಧ ಪದಗಳು**

| ಬರಕ ಕನ್ನಡ | ಹೊಲೆಯರು | ಮಾದಿಗರು | ಬೆಸ್ತರು |
|---|---|---|---|
| ಕರಳು | ಕಳ್ಳು | ಕಳ್ಳು | ಕಳ್ಳು |
| ಜೀವ | ಜೀಮ | ಜೀಮ | ಜೀಮ |
| | ಗ್ವಾರಂದ | ಗ್ವಾರಂದ | ಗ್ವಾರಂದ |
| ಹೃದಯ | ಗುಂಡ್ಗೆ | ಗುಂಡ್ಗೆ | ಗುಂಡ್ಗೆ |
| ಲಿವರ್ | ಈಲಿ | ಈಲಿ | ಈಲಿ |
| ಕಪಾಳ | ಕಪಾಲ | ಕಪಾಲ | ಕಪಾಲ |
| ಕುತ್ತಿಗೆ | ಮ್ಯಾಳೆ | ಗ್ವಾಮಳೆ | ಗ್ವಾಮಳೆ |
| ಕೂದಲು | ರ್‍ವಾಮ | ರ್‍ವಾಮ | ರ್‍ವಾಮ |
| ಬುರುಡೆ | ಬುಂಡೆ | ಬುಂಡೆ | ಬುಲ್ಡೆ |
| ರಕ್ತ | ರತ್ತ | ರತ್ತ | ರಗ್ತ |
| ನಡು | ನಡ | ನಡ | ನಡ |
| ಚರ್ಮ | ಚಕ್ಳ | ಚಕ್ಳ | ಚಕ್ಳ |
| ಕಿಬ್ಬೊಟ್ಟೆ | ಅಳ್ಳೆಪರಿ | ಅಳ್ಳೆಪರಿ | ಅಳ್ಳೆಪರಿ |

**ಪ್ರಾಣಿ, ಪಕ್ಷಿ, ಕೀಟ ಸೂಚಕ ಪದಗಳು**

| ಬರಹ ಕನ್ನಡ | ಹೊಲೆಯರು | ಮಾದಿಗರು | ಬೆಸ್ತರು |
|---|---|---|---|
| ಹಾವು | ಆಮು | ಆಮು | ಆಮು |
| ಮಿಡತೆ | ಮಿಡ್ತೆ | ಮಿಡ್ತೆ | ಮಿಡ್ಜೆ |

| | | | |
|---|---|---|---|
| ಉಡ | ಉಡ | ಉಡ | ಜೀಮಾಜಿ |
| ಹಾವುರಾಣಿ | ಆಪ್‌ರಾಣಿ | ಆಪ್‌ರಾಣಿ | ಆಪ್‌ರಾಣಿ |
| ಮೇಕೆ | ಆಡು | ಆಡು | ಆಡ್ಮರಿ |
| ಇರುವೆ | ಎರ | ಎರ | ಇರ |
| ಗಿಳಿ | ಗಿಣಿ | ಗಿಣಿ | ಗಿಣಿ |
| ಬೆಕ್ಕು | ಕೊತ್ತಿ | ಕೊತ್ತಿ | ಕೊತ್ತಿ |
| ದುಂಬಿ | ಕಡ್ಜ | ಕಡ್ಜ | ಕಡ್ಜ |
| ಜಿರಳೆ | ಆತೆ | ಆತೆ | ಆತೆ |
| ಒನಕೆಹುಳ | ಕಪುರ್‌ಚೆಟ್ಟಿ | ಕಪುರ್‌ಚೆಟ್ಟಿ | ಕಪುರ್‌ಚೆಟ್ಟಿ |
| ಓತಿಕ್ಯಾತ | ಅಂಟೆಗೊದ್ದ | ಅಂಟೆಗೊದ್ದ | ಅಂಟೆಗೊದ್ದ |
| ಟಗರು | ತಗ್ರು | ತಗ್ರು | ತಗ್ರು |
| ಯಗ್ಣ | ಯಗ್ಣ | ಯಗ್ಣ | ಯಗ್ಣ |
| ಪಾರಿವಾಳ | ಪಾರ್ವಾಳ | ಪಾರ್ವಾಳ | ಗೊರುನಕ್ಕಿ |
| ಗುಬ್ಬಚ್ಚಿ | ಗುಂಚಕ್ಕಿ | ಗುಂಚಕ್ಕಿ | ಗುಂಚಕ್ಕಿ |
| ಏಡಿಕಾಯಿ | ಎಕ್ಕನಳ್ಳಿ | ಎಕ್ಕನಳ್ಳಿ | ನಳ್ಳಿ |
| ಹೆಣ್ಣುಮೇಕೆ | ಮಣ್ಕಮರಿ | ಮಣ್ಕಮರಿ | ಮಣ್ಕಮರಿ |
| ಓತ | ವಾತ | ವಾತ | ವಾತ |
| ಪ್ರಾಯದಹಸು | ಕಡ್ಸು | ಕಡ್ಸು | ಕಡ್ಸು |

ಸಂಖ್ಯಾಸೂಚಕ ಪದಗಳು

| ಬರಹ ಕನ್ನಡ | ಹೊಲೆಯರು | ಮಾದಿಗರು | ಬೆಸ್ತರು |
|---|---|---|---|
| ಒಂದು | ವಂದು | ವಂದು | ವೊಂದು |
| ಎರಡು | ಎರ್ಡು | ಎರ್ಡು | ಯಲ್ಡು |
| ನಾಲ್ಕು | ನಾಕು | ನಾಕು | ನಾಕು |
| ಐದು | ಅಯ್ದು | ಅಯ್ದು | ಅಯ್ದು |
| ಏಳು | ಯೇಳು | ಯೇಳು | ಯೇಳು |
| ಹನ್ನೆರಡು | ಅನ್ನೆರ್ಡು | ಅನ್ನೆರ್ಡು | ಅನ್ನೆರ್ಡು |
| ನಾಲ್ಕುನೂರು | ನಾನೂರು | ನಾನೂರು | ನಾನೂರು |
| ಸಾವಿರ | ಸಾವ್ರ | ಸಾವ್ರ | ಸಾವ್ರ |
| ಲಕ್ಷ | ಲಕ್ಸ | ಲಕ್ಸ | ಲಕ್ಸ |

ಆಹಾರ ಸೂಚಕ ಪದಗಳು

| ಬರಹ ಕನ್ನಡ | ಹೊಲೆಯರು | ಮಾದಿಗರು | ಬೆಸ್ತರು |
|---|---|---|---|
| ಸಬ್ಬಕ್ಕಿಸೊಪ್ಪು | ಸಬ್ಸಿಗೆ ಸೊಪ್ಪು | ಸಬ್ಸಿಗೆ ಸೊಪ್ಪು | ಸಬ್ಸಿಗೆ ಸೊಪ್ಪು |
| ಕಡಲೆ | ಕಳ್ಳೆ | ಕಳ್ಳೆ | ಕಳ್ಳೆ |
| ಉರುಳಿಕಾಳು | ಉಳ್ಳಿಕಾಳು | ಉಳ್ಳಿಕಾಳು | ಉಳ್ಳಿಕಾಳು |
| ಅಲಸಂದೆಕಾಳು | ತಣ್ಣಿಕಾಳು | ತಣ್ಣಿಕಾಳು | ತಡ್ಗುಣಿ ಕಾಳು |
| ಏಲಕ್ಕಿ | ಯಾಲಕ್ಕಿ | ಯಾಲಕ್ಕಿ | ಯಾಲಕ್ಕಿ |
| ಉಪ್ಪು | ರುಚಿ | ನವ್ಣೆ | ನವ್ಣೆ |

| | | | |
|---|---|---|---|
| ನಿಂಬೆಹಣ್ಣು | ಲಿಂಬೆಅಣ್ಣು | ಲಿಂಬೆಅಣ್ಣು | ಲಿಂಬೆಅಣ್ಣು |
| ಹಲಸಿನಹಣ್ಣು | ಅಲ್ಸನಣ್ಣು | ಅಲ್ಸನಣ್ಣು | ಅಲ್ಸನಣ್ಣು |
| ಎಳ್ಳು | ಯಳ್ಳು | ಯಳ್ಳು | ಯಳ್ಳು |
| ಮೆಂತ್ಯ | ಮ್ಯಂತೆ | ಮ್ಯಂತೆ | ಮ್ಯಂತ್ಯ |
| ಗೆಣಸು | ಗೆಣ್ಸು | ಗೆಣ್ಸು | ಗ್ಯೆಣ್ಸು |

ನಾಮಪದ

| ಬರಹ ಕನ್ನಡ | ಹೊಲೆಯರು | ಮಾದಿಗರು | ಬೆಸ್ತರು |
|---|---|---|---|
| ಜಗಲಿ | ಜೆಗ್ಲಿ | ಜೆಗ್ಲಿ | ಪಡ್ಸಾಲೆ |
| ಇಟಗೆ | ಇಟ್ಗೆ | ಇಟ್ಗೆ | ಇಟ್ಗೆ |
| ಅಂಗಡಿ | ಅಂಗ್ಡಿ | ಅಂಗ್ಡಿ | ಅಂಗ್ಡಿ |
| ಚಾಪೆ | ಚ್ಯಾಪೆ | ಚ್ಯಾಪೆ | ಮಂದ್ಲುಗೆ |
| ಕಿಟಕಿ | ಚಿಟ್ಕಿ | ಚಿಟ್ಕಿ | ಕಿಟ್ಕಿ |
| ಬಾಗಿಲು | ಬಾಗ್ಲು | ಬಾಗ್ಲು | ಬಾಗ್ಲು |
| ತೊಟ್ಟಿಲು | ತೊಟ್ಲು | ತೊಟ್ಲು | ತೊಟ್ಲು |
| ನೆಲ | ನ್ಯಲ | ನ್ಯಲ | ನ್ಯಲ |
| ಹಾಸಿಗೆ | ಆಸ್ಗೆ | ಆಸ್ಗೆ | ಆಸ್ಗೆ |
| ಒನಕೆ | ವನ್ಕೆ | ವನ್ಕೆ | ವನ್ಕೆ |
| ಬೆಣ್ಣೆ | ಬ್ಯೆಣ್ಣೆ | ಬ್ಯೆಣ್ಣೆ | ಬೆಣ್ಣೆ |

ಕ್ರಿಯಾಪದ

| ಬರಹ ಕನ್ನಡ | ಹೊಲೆಯರು | ಮಾದಿಗರು | ಬೆಸ್ತರು |
|---|---|---|---|
| ಒತ್ತು | ಅಮ್ಕು | ಅಮ್ಕು | ಅದ್ಮು |
| ಒದಿ | ವದಿ | ವದಿ | ವದಿ |
| ಉರುಳು | ಉಳ್ಳು | ಉಳ್ಳು | ಉಳ್ಳು |
| ಕಲಸು | ಕಲ್ಸು | ಕಲ್ಸು | ಬೆರ್ಸು |
| ಎಳೆ | ಯಳಿ | ಯಳಿ | ಯಳಿ |
| ಕರೆದುಕೊಳ್ಳು | ಕೈರಿ | ಕೈರಿ | ಕೆರಿ |
| ಗುಡಿಸು | ಗುಡ್ಸು | ಗುಡ್ಸು | ಗುಡ್ಸು |
| ಅರಡು | ಚೆಲ್ಲು | ಚೆಲ್ಲು | ಎರ್ಚು |
| ಎಣಿ | ಯಣಿ | ಯಣಿ | ಯಣಿ |
| ಒದೆ | ವಡಿ | ವಡಿ | ವಡಿ |
| ಓಡು | ವೊದ್ಗು | ವೊದ್ಗು | ವೊದ್ಗು |
| ಅಲೆ | ಪಸ್ಗೆ | ಪಸ್ಗೆ | ಪಸ್ಗೆ |
| ಬೆದರಿಸು | ಅದ್ರುಸು | ಅದ್ರುಸು | ಅದ್ರುಸು |

ಗುಣಪದ

| ಬರಹ ಕನ್ನಡ | ಹೊಲೆಯರು | ಮಾದಿಗರು | ಬೆಸ್ತರು |
|---|---|---|---|
| ಕೆಂಪು | ಚೆಂಪು | ಚೆಂಪು | ಕೆಂಪು |
| ಬಿಳಿ | ಬೈಳಿ | ಬೈಳಿ | ಬಿಳಿ |

| | | | |
|---|---|---|---|
| ಕರಿ | ಕರಿ | ಕರಿ | ಕರಿ |
| ಹಸಿರು | ಅಸ್ರು | ಅಸ್ರು | ಅಸ್ರು |
| ಉರುಳುವ ಕಲ್ಲು | ರೋಣ್ಗಲ್ | ರೋಣ್ಗಲ್ | ರೋಣ್ಗಲ್ |
| ಜೇಡಿಮಣ್ಣಿನ ಗದ್ದೆ | ಎರೆಗದ್ದೆ | ಎರೆಗದ್ದೆ | ಎರೆಗದ್ದೆ |
| ಕೆಂಪೆತ್ತು | ಚೆಂದೆತ್ತು | ಚೆಂದೆತ್ತು | ಕೆಂದೆತ್ತು |
| ಕುಳ್ಳನೆ ಹಸು | ಗಿಡ್ಅಸ | ಗಿಡ್ಅಸ | ಗಿಡ್ಅಸ |
| ಚಿಕ್ಕ ಮನೆ | ಕಿರ್ಮನೆ | ಕಿರ್ಮನೆ | ಕಿರ್ಮನೆ |
| ಕಪ್ಪು ಭೂಮಿ | ಕರ್ಲ್ಲ ಬೂಮಿ | ಕರ್ಲ್ಲ ಬೂಮಿ | ಕರ್ಲ್ಲ ಬೂಮಿ |
| ಕಪ್ಪು | ಕರ್ಗ | ಕರ್ಗ | ಕರ್ಗ |

**ವಿಧ್ಯರ್ಥಕ ಪದಗಳು**

| **ಬರಹ ಕನ್ನಡ** | **ಹೊಲೆಯರು** | **ಮಾದಿಗರು** | **ಬೆಸ್ತರು** |
|---|---|---|---|
| ಹೋಗೋಣ | ವಾಗಾಮೆ | ವೋಗ್ಮ | ವೋಗ್ಮೆ |
| ಬರೋಣ | ಬರಾಮೆ | ಬರಾಮೆ | ಬರ್ಮೆ |
| ತಿನ್ನೋಣ | ತಿನ್ನೂಮೆ | ತಿನ್ನೂಮೆ | ತಿನ್ಮೆ |
| ಕರಿಯೋಣ | ಕರಿಮೆ | ಕರಿಮೆ | ಕರಿಮೆ |

ಮಳವಳ್ಳಿ ಕನ್ನಡದ ಪದಕೋಶವನ್ನು ಗಮನಿಸಿದಾಗ ಈ ಮೇಲಿನ ಮೂರು ಜಾತಿಗಳಲ್ಲಿ ಕೆಲವು ಕಡೆ ಉಚ್ಚಾರಣೆ ಮತ್ತು ಬಳಕೆಯ ಹಂತದಲ್ಲಿ ವ್ಯತ್ಯಾಸ ಇರುವುದನ್ನು ಗಮನಿಸಬಹುದು.

ಪ್ರಸ್ತುತ ಭಾಷಾವೈಜ್ಞಾನಿಕ ಅಧ್ಯಯನಕ್ಕೆ ಬಳಸಿಕೊಂಡಿರುವ ಮಳವಳ್ಳಿ ಕನ್ನಡದ ಆಯ್ದ ವರ್ಗೀಕೃತ ಪದಪಟ್ಟಿ ಕ್ಷೇತ್ರಕಾರ್ಯದಲ್ಲಿ ದೊರೆತ ಭಾಷಿಕ ದತ್ತವನ್ನು ಸಂಗ್ರಹಿಸಿದ

ಹಾಗೆಯೇ ಇಲ್ಲಿ ನಮೂದಿಸಲಾಗಿದೆ. ಇಲ್ಲಿ ಮಳವಳ್ಳಿ ಕನ್ನಡ ಮತ್ತು ಬರಹ ಕನ್ನಡದ ನಡುವಿನ ವ್ಯತ್ಯಾಸದೊಂದಿಗೆ ಮಳವಳ್ಳಿ ಕನ್ನಡದ ಪದಕೋಶವನ್ನು ನೀಡಲಾಗಿದೆ. ಮಳವಳ್ಳಿ ಕನ್ನಡದ ಪದಗಳು ಬರಹ ಕನ್ನಡದಲ್ಲಿ ಯಾವ ಅರ್ಥದ ನೆಲೆಯಲ್ಲಿ ಬಳಕೆಗೊಳ್ಳುತ್ತದೆ ಎಂಬುದನ್ನು ಕಾಣಬಹುದು.

| ಮಳವಳ್ಳಿ ಕನ್ನಡ | ಬರಹ ಕನ್ನಡ |
|---|---|
| ತಳಾರ್ಕೆ | ತಡವಾಗಿ, ನಿಧಾನವಾಗಿ |
| ಅರ್ಸ | ಹಗುರ, ಸಮಾಧಾನ |
| ಜಿನ | ದಿನ |
| ಕೇಮಿ | ಕೆಲಸ |
| ವಾಕ್ರಿಕೆ | ವಾಂತಿ |
| ಸಿಬ್ರಿಕೆ | ಬೇಜಾರು, ಅಸಯ್ಯ |
| ಚಿಂಕ್ರ | ಸ್ವಲ್ಪ |
| ಮಸಣ | ಸ್ಮಶಾಣ |
| ಉಸಾಬರಿ | ಜವಬ್ದಾರಿ |
| ಸೊಡ್ಲು | ದೀಪ |
| ಆಮು | ಹಾವು |
| ಕಿಮಿ/ ಚಿಮಿ | ಕಿವಿ |
| ಆಡ್ಮರಿ | ಮೇಕೆ |
| ಬಚ್ಲು | ಚರಂಡಿ |
| ಮೊಗ್ಲು | ಪಕ್ಕ |

| | |
|---|---|
| ಚಪ್ಪಟಿ | ಸಣ್ಣಗಿರುವವನು |
| ಚಿಮ್ಕು | ಹಿಸುಕು |
| ತೂತು | ಸಮಸ್ಯೆ |
| ತೊಕ್ಕು | ಗುಟ್ಟು |
| ಜಂಬ್ರ | ಕೆಲಸ |
| ಕ್ಯಾಣ | ಕೋಪ |
| ಚಕ್ಕರೆ | ಸಕ್ಕರೆ |
| ಎರಾ/ ಇರ | ಇರುವೆ |
| ನವಣ | ಉಪ್ಪು |
| ಚರ್ವಿ | ಅಹಂಕಾರ/ ಕೊಬ್ಬು |
| ಗಿಣಿ | ಗಿಳಿ |
| ಬಾಮಿ | ಬಾವಿ |
| ಒಬ್ಬೆ | ಬೇಲಿ |
| ಬರ್ಲು | ಪೊರಕೆ |
| ಅಂಸ್ರ | ಬೇಗ/ ಆತುರ |
| ಚಳಕೆ | ಕೆಳಗೆ |
| ಯಡವಟ್ಟು | ತೊಂದರೆ |
| ಅಮುಸ್ಬುಟ್ಟು | ಮುಚ್ಚಿಟ್ಟು |
| ಯಳ್ಳಾಗಿ/ ದಡ್ಡಾಸ್ಸಾಗಿ | ಹೆಚ್ಚಾಗಿ |
| ಕುರ್ಜು | ಶವವನ್ನು ಕೂರಿಸು ಸಾಧನ |

| | |
|---|---|
| ವಲ್ಲಿ | ಬೇಡ |
| ಬಿರ್ನೆ | ಬೇಗ |
| ಏಕ್ಸುನ | ಒಂದೇ ಸಮನೆ/ ನೇರವಾಗಿ |
| ಜಟನಾಯ್ತು | ಮುಗಿಯಿತು/ ಮುಕ್ತಾಯ |
| ಬೊಂಬ್ಲಾ | ಹಿಂದೇ ಹೋಗುವುದು |
| ಬೂದುಸ್ಬುಟ್ಟದೆ | ಊದಿಕೊಂಡಿದೆ |
| ಮುಸುಡಿ | ಮೂತಿ/ ಮುಖ |
| ಕೆಂದ್ಯೋಯ್ತತು | ಗುಣವಾಯಿತು/ ವಾಸಿಯಾಯಿತು |
| ರೂಗಾಡಮಾಳ | ಶವ ಹೂಳು ಜಾಗ |
| ಬುದ್ವಂತ | ಸೀಮೆ ಎಣ್ಣೆ ಬಿಡುವ ಸಾಧನ |
| ಬೂರಣಿಗೆ | ಬೆಂಕಿಯನ್ನು ಊದುವ ಸಾಧನ |
| ಊಟ್ಗೆಟ್ಟುದ್ದು | ಸರಿಯಾಗಿ ಬೆಳಯದವರು |
| ಸೀಗ್ಸಿ ಮೋಗ್ಸಿ | ಸರಿಯಾಗಿ ಬುದ್ಧಿ ಕಲಿಯದವರು |
| ಜೀಮ | ಜೀವ |
| ಗ್ವಾಗರಿ | ಬೇಡಿಕೊಳ್ಳುವುದು |
| ಮನಾರ | ನೆಮ್ಮದಿ/ ತೃಪ್ತಿ |
| ಕೆಲ್ಸಿ/ ಚೆಲ್ಸಿ | ಕ್ಷೌರಿಕ |
| ಜೂರತ್ಗಾರ | ಧೈರ್ಯವಂತ |
| ತೆಪ್ತಿ | ಬಿಡುಗಡೆ |
| ತಿರ್ಪುನ | ಮತ್ತೆ/ ಪುನಃ |

| | |
|---|---|
| ಗಬ್ಬು | ವಾಸನೆ/ ಮಾಂಸಹಾರ |
| ಬಾಣ | ಆಕಾಶ |
| ವಂದ/ ಮೈನೀರು | ಉಚ್ಚೆ |
| ಗೇಪ್ನ/ ನೆಪ್ಪು | ನೆನಪು/ ಗುರುತು |
| ಈಗ್ರ | ವಿಗ್ರಹ |
| ಅಕ್ಲು | ರಾಗಿ ತೆನೆ |
| ಮೊಗ್ಬಾಯಿ | ಮುಂದಿನ/ ಮೊದಲ ಸಾಲು/ ಮುಂದೆ |
| ತಾಮಾಮು/ ತಮಾಯ | ಪೂರ್ತಿಯಾಗಿ/ ಪೂರ್ಣ |
| ವಾಕಗಿ | ಎಲ್ಲಾ |
| ಬೆಳ್ಗಾನ | ರಾತ್ರಿ ಇಡೀ |
| ದಿಗ್ಲು | ಆತಂಕ, ಚಿಂತೆ |
| ದಂಡೆ | ಅತ್ತಿರ |
| ಸರಂಜಾಗಿ | ಬೇಗ |
| ಯಡೊತ್ತು | ಮಧ್ಯಾಹ್ನ |
| ಚಕ್ಳ | ಚರ್ಮ |
| ತಾವು | ಜಾಗ |
| ಕೊನ್ನಿ | ತೆಗೆದುಕೊಳ್ಳಿ |
| ಬಿಮ್ಮನ್ಸೆ | ಬಸುರಿ/ ಗರ್ಭಿಣಿ |
| ಅನ್ನೇಕಾರ | ಮೋಸಮಾಡುವವ |
| ಕಳ್ಳೆ | ಕಡಲೆ |

| | |
|---|---|
| ವಲಂಚ್ನೆ | ಬೇಧಭಾವ ಮಾಡುವುದು |
| ಪಸ್ಗೆ/ ಇಟ್ಟಾಡು | ಅಲೆಯುವವ |
| ಗಳ್ಳು | ಕೂಗು, ಶಬ್ಧಮಾಡು |
| ಅರ್ಗು | ಪಕ್ಕ |
| ಬಾವುಣ್ಕೆ | ಬಯಕೆ/ ಆಸೆ |
| ತಾಳ್ದ | ಪಲ್ಯ |
| ಪೆಚ್ಚಾಗಿ | ಆಶ್ಚರ್ಯ |
| ಕಣ್ಣು ಕವ್ರುತ್ತೆ | ನಿದ್ದೆ |
| ವಗ್ಗತನ | ಮನೆ ಜವಬ್ದಾರಿ/ಭಾಷೆ |
| ಐಬು | ಸಮಸ್ಯೆ/ ತೊಂದರೆ |
| ಕಾಕ | ನಗು |
| ಸಲ್ಮೊರೆ/ ವರ್ಸೆ | ಸಂಬಂಧ |
| ಕೇಕ್ ಮಾರಿ | ಕೆಟ್ಟವನು |
| ದಡ್ಕಾಸ್ಗಿ | ಹೆಚ್ಚಾಗಿ |
| ಸೂಬೈ | ಮೃದು |
| ನೆರ್ಕೆ | ತಟಿಕೆ |
| ಸಿಕ್ಲು | ಜಗಳ ಗಂಟ |
| ಆಯ | ತಂತ್ರ, ಉಪಾಯ |
| ಅದ್ರುಸು | ಓಡಿಸು, ಭಯಪಡಿಸು |
| ಇಂಬಿಹಣ್ಣು | ನಿಂಬೆಹಣ್ಣು |

| | |
|---|---|
| ಮಳ್ಳು | ಮರಳು |
| ಅಪೂಮರ | ಅಪರೂಪ |
| ಅಳ್ಳೆಪರಿ | ಕಿಬ್ಬೊಟ್ಟೆ |
| ಸೌಳು | ಗಳಿಗೆ, ಕಾಲ |
| ಮೇಳಿ | ನೇಗಿಲನ್ನು ಇಡಿಯುವ ಸಾಧನ |
| ಗಬ್ಬೆ | ಚಿಕ್ಕವರು/ ಮಗು |
| ಪಿಕ್ಕೆ | ಇಕ್ಕೆ |
| ನಿಲ/ನೆಲ | ಕಂಬ |
| ನ್ಯಲ | ಭೂಮಿ |
| ದಾರಂದ | ಬಾಗಿಲು |
| ತೌಬೆಚ್ಚಗೆ | ಸ್ವಲ್ಪ ಬಿಸಿ ಇರುವ |
| ಬೇತೂರಾಟ | ನಾಟಕ |
| ಚೂಚಿ | ಸೂಜಿ |
| ಕೊತ್ತಿ | ಬೆಕ್ಕು |
| ಮಿಟಿಜೋಗಿ | ಒಂದೇ ಸಮ ನೋಡುವುದು |
| ತತ್ತಾ | ತೆಗೆದುಕೊಂಡು ಬಾ |
| ತಮಿ | ತೆವಳು |
| ಕಡ್ಜ | ದುಂಬಿ |
| ಮಾರ್ನೆ ದಿನ | ನಾಳೆ |
| ಗಡಮೆ | ಅಹಂಕಾರ |

| | |
|---|---|
| ಕುನೇಕ | ಶಾಸ್ತ್ರ ಬದ್ಧವಾಗಿ |
| ಮಲಮೆ | ನಿಧಾನ |
| ಯಕ್ವಾಸ | ತೊಂದರೆ |
| ಉಬ್ಸ | ಉಬ್ಬಸ |
| ಅದ್ರಿಸು | ಬೆದರಿಸು |
| ಮೌರಾಗಿ | ಗುಟ್ಟಾಗಿ/ ಜೋಪಾನವಾಗಿ |
| ತ್ವಾರ | ಅಹಂಕಾರ |
| ಜೀಮಾಜಿ | ಉಡ |
| ಕುಂಡ್ರಿಸು | ಕುಳ್ಳರಿಸು |
| ಆಲು | ಹಾಲು |
| ಸಂಕ್ರ | ಶಂಕರ |
| ವಂದು | ಒಂದು |
| ವೋಡು | ಓಡು |
| ಚೆಂಡು | ಚಂಡು |
| ಚೆಪ್ರ | ಚಪ್ಪರ |
| ಚೆಲ್ಲು | ಚಲ್ಲು |
| ಜೆಗ್ಲಿ | ಜಗಲಿ |
| ಬೆಳಿ, ಬೆಳ್ಗೆ | ಬಿಳಿ, ಬೆಳಗೆ |
| ಕರಿ, ಕರ್ಗೆ | ಕರಿ, ಕರ್ರಗೆ |
| ಬಿಸಿ, ಬೆಚ್ಗೆ | ಬಿಸಿ, ಬೆಚ್ಚಗೆ |

| | |
|---|---|
| ಮೆದು, ಮೆತ್ಗೆ | ಮಿದು, ಮೆತ್ತಗೆ |
| ತೆಳು, ತೆಳ್ಗೆ | ತೆಳು, ತೆಳ್ಳಗೆ |
| ಬರಿಮೆ | ಬರೆಯಲು |
| ಬರ್ಮೆ | ಬರಲು |
| ತಿನ್ಮೆ | ತಿನ್ನಲ್ಲು |
| ಒಪ್ಮೆ | ಒಪ್ಪಲು |
| ಮಟ್ಟಾಗಿ | ಸರಿಯಾಗಿ |
| ನಿಗ, ಲಿಗ | ಪ್ರಜ್ಞೆಯಿಂದ |
| ಯಡೊತ್ತು | ಮಧ್ಯಾಹ್ನ |
| ಮೊಕ್ಕೊತ್ಲು | ಮುಸ್ಸಂಜೆ |
| ಅಯ್ತುವಾರ | ಭಾನುವಾರ |
| ಬೇಯ್ಸ್ತ್ವಾರ | ಗುರುವಾರ |
| ಜ್ವೋನ | ಅನ್ನ |
| ಉದ್ಕ | ಸಾಂಬರು |
| ಉಪ್ನೀರು, ಉಪ್ಪೆಸರು | ನೀರು ಉಪ್ಪು ಇರುವ ಪದಾರ್ಥ |
| ಅಲಾಕಾಗಿ | ಬೇರೆ, ವಿಭಾಗ |
| ಮುಸಂಡಿ | ಸೋಮಾರಿ |
| ಬರ್ಗ | ಹುಲಿ |
| ಆಮು | ಹಾವು |
| ಅಳುಮ | ಅಳಿಲು |

| | |
|---|---|
| ಜೀಮಾಜಿ | ಹುಡ |
| ಆಪ್ರಾಣಿ | ಹಾವ್‌ರಾಣಿ |
| ದೊಡ್ ನಾಯಿ | ಚಿರತೆ |
| ಆಡು | ಮೇಕೆ |
| ಅಂಟೆಗೊದ್ದ | ಒತಿಕ್ಯಾತ |
| ನಳ್ಳಿ | ಏಡಿ |
| ಮುಸಂಡಿ | ಸೋಮಾರಿ |
| ವಲ್ಲಿ | ಬೇಡ |
| ಮಲಮೆ | ಮಂದ, ಸ್ಥಾನ |
| ಮೋಕುಪ್ಪು | ಗುಟ್ಟು ಮಾಡು |
| ಮಸ್ಪಾಗಿ | ಸರಿಯಾಗಿ |
| ಮಸ್ತು | ಹೆಚ್ಚು |
| ಸೂಬ್ಬೆ | ಮೃದು |
| ಆಯ | ತಂತ್ರ |
| ಅದ್ರುಸು | ಓಡಿಸು/ಅಟ್ಟು |
| ಅಪ್ಪೆ | ರೆಪ್ಪೆ |
| ಅಪೂಪುರ | ಅಪರೂಪ |
| ಅಳ್ಳೆಪರಿ | ಕಿಬ್ಬೊಟ್ಟೆ |
| ಸೌಳು | ಗಳಿಗೆ/ಕಾಲ |
| ಪಸ್ಲು | ಬೆಳೆ |

| | |
|---|---|
| ಮಣ್ಕ | ಮೇಕೆಮರಿ |
| ಕುಳ್ಳ | ಕುಡಿಲು |
| ಕಡ್ಸು | ಅಸು |
| ಸಲ್ಮೊರೆ | ಸಂಬಂಧ |
| ತಾವು | ಜಾಗ |
| ವಲಂಚ್ನೆ | ಬೇದ |
| ಅಯ್ಬು | ತೊಂದರೆ |
| ನಗ್ಲು ಮುಳ್ಳ | ಒಂದು ಜಾತಿಯ ಮುಳ್ಳು |
| ನೆರ್ಕೆ | ತಟ್ಟಿಗೆ |
| ಮೇಳಿ | ನೇಗಿಲನ್ನು ಹಿಡಿದುಕೊಳ್ಳುವ ಜಾಗ |
| ಮೆರೆ | ಹುಲ್ಲನ್ನು ತಳ್ಳಲು ಬಳಸುವ ಕೋಲು |
| ಕೊಂಗ | ಧಾನ್ಯಗಳನ್ನುತೂರಲು ಬಳಸುವ ಬಿದಿರಿನ ಸಾಧನ |
| ಜಾಗ್ರೆ | ಕಂಟದಲ್ಲಿ ಗೊಬ್ಬರದೊಂದಿಗೆ ಬೆಳೆಯುವ ಪೈರು |
| ಕೇಕ್‌ಮಾರಿ | ಕೆಟ್ಟವನು |
| ಅಕ್ಲು | ರಾಗಿಯ ತೆನೆ(ಹೊಲದಲ್ಲಿ ಬಿದ್ದರುವುದು) |
| ದಾರಂದ | ದ್ವಾರದ ಮೇಲ್ಭಾಗ |
| ಪುನ್ಗು | ಸುಗಂಧ ದ್ರವ್ಯ |
| ವಾಕ್ಷ/ವಾಗ್ದಾನ | ಪ್ರಮಾಣ/ಭಾಷೆ |
| ಯಾಪಾರಸ್ತ | ವ್ಯಾಪಾರಗಾರ |
| ವಾರ್ಗಿತ್ತಿ | ತಮ್ಮನ ಹೆಂಡತಿ |

| | |
|---|---|
| ಸಟ್ಗೆ | ಸ್ವಲ್ಪ |
| ಸಟ್ಗ | ಸೌಟು |
| ಚೋಜ್ಗ | ಆಶ್ಚರ್ಯ/ಸೋಜಿಗ |
| ಬೆಳ್ಕರೀತ್ಲೆ | ಬೆಳಗಾದ ನಂತರ |
| ನಿಚ್ಚಾ | ನಿತ್ಯ |
| ನೆಚ್ಗಂಡು | ನಂಬಿಕೊಂಡು |
| ಯತೆ | ಯೋಚನೆ |
| ತಾಟ್ವೋಟಿ | ಸೋಮಗಾರ |
| ಚುಂಗು | ವಾಸನೆ |
| ದುಡ | ಧೃಡ |
| ನಿಚ್ಚೈಸ್ಕಂಡು | ನಿರ್ಧರಿಸಿಕೊಂಡು |
| ಸ್ಯಾಲ | ಬಟ್ಟೆ/ ಸೀರೆ |
| ಪುನ | ಮತ್ತೆ |
| ಮೊಗ್ರು | ಮೊಗ್ಗು |
| ಗೋರಂಜ | ಧೈರ್ಯ |
| ರಾಂಗ್‌ಕೋರಿ | ಬಜಾರಿ/ ಬಾಯಿ ಮಾಡುವವಳು |
| ಬೆಡ್ಗ/ಬೇತೂರಿ | ಬೇಡಗು ಬಿನ್ನಾಣ ಮಾಡುವವಳು |
| ಚಂಗೂಲಿ | ತೀಟೆ/ದಿನಗೂಲಿ |
| ರತನೀರು | ಹರಿಸಿಣ ಮತ್ತು ಕುಂಕುಮವನ್ನು ನೀರಿಗೆ ಬೆರಸುವುದು |

| | |
|---|---|
| ರಗ್ತ | ರಕ್ತ |
| ದಂಗಾಯ್ತು | ಆಶ್ಚರ್ಯ |
| ಕೆಕ್ಕೆ | ಕಂಕಳು |
| ಗೊರ್ಕೆ | ಗೊರಕೆ |
| ಬಿಕ್ಕಂಡು | ಮುನಿಸಿಕೊಂಡು |
| ಢಿಕಾವ್ | ಶೃಂಗಾರ |
| ಪೆಚ್ಚ್ | ದಡ್ಡು |

ಮಳವಳ್ಳಿ ಪದಕೋಶವು ಅರ್ಥದ ನೆಲೆಯಲ್ಲಿ, ಬಳಕೆಯ ನೆಲೆಯಲ್ಲಿ ಬರಹ ಕನ್ನಡ ಮತ್ತು ಇತರೆ ಪ್ರದೇಶಗಳಿಗೆ ಹೋಲಿಸಿದರೆ ಭಿನ್ನವಾದ ನೆಲೆಯಲ್ಲಿ ಬಳಕೆಗೊಳ್ಳುತ್ತಿರುವುದನ್ನು ಮೇಲಿನ ಉದಾಹರಣೆಗಳ ಮೂಲಕ ನೋಡಬಹುದು.

## ಸಮಾರೋಪ

ಮಳವಳ್ಳಿ ಕನ್ನಡವು ಕನ್ನಡದ ಪ್ರಮುಖ ಪ್ರಾದೇಶಿಕ ಭಾಷೆಗಳಲ್ಲಿ ಇದು ಒಂದು. ಪ್ರಾದೇಶಿಕ ಮತ್ತು ಸಾಮಾಜಿವಾಗಿ ವೈಶಿಷ್ಟ್ಯತೆಯನ್ನು ಉಳಿಸಿಕೊಂಡಿರುವ ಭಾಷೆಯಾಗಿದೆ. ಪ್ರಸ್ತುತ ಅಧ್ಯಾಯನದಲ್ಲಿ ಇಲ್ಲಿಯ ಭಾಷೆಯನ್ನು ಆಧುನಿಕ ಭಾಷಾ ದೃಷ್ಟಿಕೋನದಿಂದ ಅದರ ಧ್ವನ್ಯಾಂಗಗಳನ್ನು, ಬಳಕೆಯ ಕ್ರಮವನ್ನು, ಅದು ಉಳಿಸಿಕೊಂಡು ಬಂದಿರುವ ಭಾಷೆಯ ಅಸ್ಥಿತ್ವ ಮತ್ತು ಪ್ರಾಚೀನತೆಯನ್ನು ವಿವರಣಾತ್ಮಕ ಭಾಷಾ ಅಧ್ಯಾಯನದ ವಿಧಾನದ ಮೂಲಕ ವಿವರಿಸಲಾಗಿದೆ.

ಇಲ್ಲಿ ಪ್ರಾದೇಶಿಕ ಭಾಷಾ ಬಳಕೆಯ ಕ್ರಮವನ್ನು ದತ್ತಾಂಶಗಳನ್ನು ಇಲ್ಲಿಯ ಜನರ ಬಳಕೆ ನುಡಿಯನ್ನು ಆಧರಿಸಿ ವಿಶ್ಲೇಷಿಸಲಾಗಿದೆ. ಈ ವಿಶ್ಲೇಷಣೆಯನ್ನು ಪ್ರಧಾನವಾಗಿ ಬರಹ ಕನ್ನಡದ ಮುಖೇನ ಹೋಲಿಸಿ ಮಳವಳ್ಳಿ ಕನ್ನಡ ಭಾಷಿಕ ಭಿನ್ನತೆ ಮತ್ತು ಚಾರಿತ್ರಿಕತೆ, ಸಾಮಾಜಿಕ ಭಿನ್ನತೆ, ಭಾಷಿಕ ವೈಶಿಷ್ಟ್ಯತೆಯನ್ನು ವಿವರಿಸಿ ತೋರಿಸಲಾಗಿದೆ.

ಇಲ್ಲಿ ಮಳವಳ್ಳಿ ತಾಲೋಕಿನ ಆಯ್ದ ಹಳ್ಳಿಗಳನ್ನು ನನ್ನ ಸಂಶೋಧನ ಸಂದರ್ಶನ ಕೇಂದ್ರಗಳಾಗಿ ನಿರ್ಧರಿಸಿ, ಸ್ಥಳೀಯ ಜನರಿಂದ ಭಾಷಿಕ ದತ್ತಾಂಶಗಳನ್ನು ಸಂಗ್ರಹಿಸಿ ವಿಶ್ಲೇಷಣೆ ಮಾಡಲಾಗಿದೆ. ಮಳವಳ್ಳಿ ಪ್ರದೇಶ ಕನ್ನಡ ನುಡಿಯನ್ನು ಬರಹ ಕನ್ನಡ, ಹಳೆಗನ್ನಡಗಳೊಂದಿಗೆ ಹೋಲಿಸಿ ವಿವರಣೆ ನೀಡಲಾಗಿದೆ. ಬರಹ ಕನ್ನಡ ಮತ್ತು ಹಳೆಗನ್ನಡ ಇವುಗಳಲ್ಲಿ ಬಳಕೆಗೊಳ್ಳುವ ಭಾಷಿಕ ಕ್ರಮ, ಮಳವಳ್ಳಿ ಕನ್ನಡದಲ್ಲಿ ಬಳಕೆಗೊಳ್ಳುವ ಭಾಷಿಕ ಕ್ರಮಗಳ ನಡುವಿನ ವ್ಯತ್ಯಾಸವನ್ನು ಉದಾಹರಣೆಯೊಂದಿಗೆ ವಿವರಿಸಲಾಗಿದೆ. ಈ ಎರಡು ಕನ್ನಡಗಳಿಗಿಂತಲೂ ಮಳವಳ್ಳಿ ಕನ್ನಡ ಬದಲಾಗಿರುವ ಮತ್ತು ತನ್ನ ತನವನ್ನು ಉಳಿಸಿಕೊಂಡಿರುವ ಭಾಷಿಕ ವಿಶಿಷ್ಟ ಅಂಶಗಳನ್ನು ಇಲ್ಲಿ ತಿಳಿಸಲಾಗಿದೆ.

ಮಳವಳ್ಳಿ ಕನ್ನಡದಲ್ಲಿ ಒಟ್ಟು ೧೦ ಸ್ವರ ಧ್ವನಿಮಾಗಳು ೫ ಉಪಧ್ವನಿಮಾಗಳಿದ್ದು ಅವುಗಳಲ್ಲಿ ಹ್ರಸ್ವ ೫, ಧೀರ್ಘ ೫ ಸ್ವರ ಧ್ವನಿಮಾಗಳಿವೆ ಎಂದು ಮೂರನೆಯ ಅಧ್ಯಾಯದಲ್ಲಿ ವಿವರಿಸಲಾಗಿದೆ. ಇಲ್ಲಿ ದೀರ್ಘತ್ವವು ಪ್ರತ್ಯೇಕ ಧ್ವನಿಮಾ ಸ್ಥಾನವನ್ನು ಪಡೆದುಕೊಂಡಿರುವುದನ್ನು ಕಾಣಬಹುದು.

ಒಟ್ಟು ಹತ್ತೊಂಬತ್ತು ವ್ಯಂಜನ ಧ್ವನಿಮಾಗಳನ್ನು ಮಳವಳ್ಳಿ ಕನ್ನಡ ಹೊಂದಿದೆ. ಇಲ್ಲಿನ ಸ್ಪರ್ಶಧ್ವನಿಮಾಗಳೆಲ್ಲವೂ ಅಲ್ಪಪ್ರಾಣ ಧ್ವನಿಮಾಗಳೆ ಆಗಿವೆ. ಇಲ್ಲಿ ಮಹಾಪ್ರಾಣ

ಧ್ವನಿಮಾಗಳಿಲ್ಲದಿರುವುದನ್ನು ಗಮನಿಸಬಹುದು. ಅಂತೆಯೇ ತಾಲವ್ಯ ಘೋಷ ಅನುನಾಸಿಕ, ಕಂಠ್ಯ ಘೋಷ ಅನುನಾಸಿಕ, ಮೂರ್ಧನ್ಯ ಅಘೋಷ ಸಂಘರ್ಷ ಮತ್ತು ತಾಲವ್ಯ ಅಘೋಷ ಸಂಘರ್ಷ ಧ್ವನಿಮಾಗಳಿಲ್ಲ.

ಮಳವಳ್ಳಿ ಕನ್ನಡದ ಪದಗಳ ರಚನಾ ವಿನ್ಯಾಸವನ್ನು ಕುರಿತು ಸುದೀರ್ಘವಾಗಿ ಉದಾಹರಣೆಗಳ ಸಹಿತ ವಿಶ್ಲೇಷಿಸಿದೆ. ಪದ ರಚನೆಗಳು ಬರಹ ಕನ್ನಡ ಮತ್ತು ಮಳವಳ್ಳಿ ಪ್ರಾದೇಶಿಕ ಬಳಕೆಯ ಕನ್ನಡ ಹೇಗೆ ಭಿನ್ನವಾಗಿದೆ ಎನ್ನುವುದನ್ನು ವಿವರಿಸಲಾಗಿದೆ. ನಾಮಪದ, ಕ್ರಿಯಾಪದ, ವಿಶೇಷಣ ಪದಗಳ ಬಳಕೆಯ ಕ್ರಮಗಳ ಬಗೆಗೆ ವಿವರಿಸಲಾಗಿದೆ.

ಲಿಂಗಳ ಬಗೆಗೆ, ಪುರುಷಾರ್ಥಗಳ ಬಗೆಗೆ, ಸರ್ವನಾಮಗಳ ಬಗೆಗೆ, ವಚನಗಳ ಬಗೆಗೆ, ಕಾಲಸೂಚಕಗಳ ಬಗೆಗೆ, ವಿಭಕ್ತಿ ಪ್ರತ್ಯಯಗಳ ಬಗೆಗೆ, ಸಂಬೋಧನ ಪ್ರತ್ಯಯಗಳ ಬಗೆಗೆ, ಗೌರವ ಸೂಚಕ ಪದಗಳ ಬಗೆಗೆ ಮಳವಳ್ಳಿ ಪ್ರಾದೇಶಿಕ ವೈಶಿಷ್ಟ್ಯತೆ ಮತ್ತು ಭಿನ್ನತೆಯನ್ನು ವಿವರಿಸಲಾಗಿದೆ. ಈ ಎಲ್ಲಾ ಅಂಶಗಳಲ್ಲಿಯೂ ಮಳವಳ್ಳಿ ಕನ್ನಡ ತನ್ನದೇ ಆದ ಭಾಷಾ ವೈಶಿಷ್ಟ್ಯತೆಯನ್ನು ಇಂದಿಗೂ ಉಳಿಸಿಕೊಂಡಿರುವ ಅಂಶಗಳನ್ನು ಉದಾಹರಣೆಗಳೊಂದಿಗೆ ಎಲ್ಲಾ ಅಧ್ಯಾಯಗಳಲ್ಲೂ ವಿವರಿಸಿಲಾಗಿದೆ. ಅಲ್ಲದೆ ಮಳವಳ್ಳಿ ಕನ್ನಡವೂ ಆಧುನಿಕ ಕಾಲಘಟ್ಟದ ಪ್ರಭಾವಕ್ಕೆ ಒಳಗಾಗಿ ಅನೇಕ ರೀತಿಯಲ್ಲಿ ಉಚ್ಚಾರಣ ನೆಲೆಯಲ್ಲಿ, ಅರ್ಥದ ನೆಲೆಯಲ್ಲಿ, ಬಳಕೆಯ ನೆಲೆಯಲ್ಲಿ ಅದು ಕೆಲವು ಸಾರಿ ಬರಹ ಕನ್ನಡದಾಗೆ ಉಳಿಸಿಕೊಂಡಿದ್ದರೆ, ಇನ್ನೂ ಕೆಲವು ಕಡೆ ಹಳೆಗನ್ನಡ ತನವನ್ನು ಉಳಿಸಿಕೊಂಡಿದೆ, ಅದರೊಟ್ಟಿಗೆ ಮಳವಳ್ಳಿ ಪ್ರದೇಶದ ಭಾಷಾ ವೈಶಿಷ್ಟ್ಯತೆಯನ್ನು ಸಹ ಅದು ಉಳಿಸಿಕೊಂಡಿರುವುದನ್ನು ಕಾಣಬಹುದು.

ಮಳವಳ್ಳಿ ಕನ್ನಡ ಕೇವಲ ಬರಹ ಕನ್ನಡ ಬಳಕೆಯ ಕ್ರಮಕ್ಕೆ ಮಾತ್ರ ಹೋಲಿಸದೆ ಜನಪದ ಸಾಹಿತ್ಯ ರೂಪಗಳಾದ ಗಾದೆ, ಕುಲ ಕಸುಬು, ಸ್ಥಳನಾಮಗಳಲ್ಲಿ, ಬಯ್ಗಳದಲ್ಲಿ ಯಾವ ರೀತಿಯ ಭಾಷಿಕ ರಚನೆಯನ್ನು ಉಳಿಸಿಕೊಂಡಿದೆ ಎನ್ನುವುದನ್ನು ವಿವರಿಸಲಾಗಿದೆ.

ಸಾಮಾಜಿಕ ಭಾಷಾ ಅಧ್ಯಯನದ ವಿಧಾನವನ್ನು ಇಲ್ಲಿ ಬಳಸಿ ವಿವಿಧ ಜಾತಿ, ಕುಲ ಕಸುಬುಗಳಲ್ಲಿ ಬಳಕೆಗೊಳ್ಳುವ ಭಾಷಿಕ ಭಿನ್ನತೆ ಮತ್ತು ವೈಶಿಷ್ಟ್ಯತೆಯನ್ನು ಇಲ್ಲಿ ವಿವರಿಸಲಾಗಿದೆ. ಮಳವಳ್ಳಿ ಕನ್ನಡ ಕಾಯ್ದುಕೊಂಡಿರುವ ಭಿನ್ನತೆಯನ್ನು ಗಮನಿಸಬಹುದು.

## ಅಧ್ಯಯನದ ಫಲಿತಗಳು

"ಮಳವಳ್ಳಿ ಕನ್ನಡ ನುಡಿ ರಚನೆಯ ಸ್ವರೂಪ ಪ್ರಾದೇಶಿಕ ಮತ್ತು ಸಾಮಾಜಿಕ ಒಳನುಡಿಗಳ ಅಧ್ಯಯನ" ಎಂಬ ವಿಷಯದಲ್ಲಿ ಅಧ್ಯಯನವನ್ನು ಕೈಗೊಂಡು ಅದರಲ್ಲಿ ಕಂಡುಕೊಂಡ ಫಲಿತಗಳನ್ನು ಈ ಕೆಳಕಂಡಂತೆ ವಿವರಿಸಲಾಗಿದೆ. ಒಂದು ಅಧ್ಯಯನ ಎಂದ ಮೇಲೆ ಅದರಿಂದ ಕಂಡುಕೊಂಡ ವಿಚಾರಗಳನ್ನು ವಿವರಿಸುವುದು ಬಹಳ ಮುಖ್ಯವಾದುದು. ಆ ಕಾರಣದಿಂದಾಗಿ ಮಳವಳ್ಳಿ ಕನ್ನಡದ ಭಾಷಿಕ ಅಧ್ಯಯನದ ವಿವಿಧ ಅಂಶಗಳನ್ನು ಅಧ್ಯಯನದಲ್ಲಿ ಹೇಗೆ ಕಂಡುಕೊಂಡಿದ್ದೇನೆ ಎಂಬುವುದನ್ನು ಪ್ರಸ್ತುತ ಅಧ್ಯಯನದಲ್ಲಿ ಮಂಡಿಸಿದೆ.

ಅಧ್ಯಾಯನದ ಅನುಕೂಲದ ದೃಷ್ಟಿಯಿಂದ ಏಳು ಅಧ್ಯಾಯುಗಳಾಗಿ ವಿಂಗಡಿಸಿಕೊಳ್ಳಲಾಗಿದೆ.

ಮಳವಳ್ಳಿ ಕನ್ನಡವು ಕನ್ನಡದ ಪ್ರಮುಖ ಪ್ರಾದೇಶಿಕ ಭಾಷೆಗಳಲ್ಲಿ ಒಂದು. ಪ್ರಾದೇಶಿಕ ಮತ್ತು ಸಾಮಾಜಿವಾಗಿ ವೈಶಿಷ್ಟ್ಯತೆಯನ್ನು ಉಳಿಸಿಕೊಂಡಿರುವ ಉಪಭಾಷೆಯಾಗಿದೆ. ಪ್ರಸ್ತುತ ಅಧ್ಯಾಯನದಲ್ಲಿ ಇಲ್ಲಿಯ ಭಾಷೆಯನ್ನು ಆಧುನಿಕ ಭಾಷಾ ದೃಷ್ಟಿಕೋನದಿಂದ ಅದರ ಧ್ವನ್ಯಾಂಗಗಳನ್ನು, ಬಳಕೆಯ ಕ್ರಮವನ್ನು, ಅದು ಉಳಿಸಿಕೊಂಡು ಬಂದಿರುವ ಭಾಷೆಯ ಅಸ್ಥಿತ್ವವನ್ನು ವಿವರಣಾತ್ಮಕ ಭಾಷಾ ಅಧ್ಯಯನದ ವಿಧಾನದ ಮೂಲಕ ವಿವರಿಸಲಾಗಿದೆ.

ಮಳವಳ್ಳಿ ಪರಿಸರದ ಪ್ರಾದೇಶಿಕ ಭಾಷಾ ಬಳಕೆಯ ಕ್ರಮವನ್ನು ದತ್ತಾಂಶಗಳನ್ನು ಇಲ್ಲಿಯ ಜನರ ಬಳಕೆ ನುಡಿಯನ್ನು ಆಧರಿಸಿ ವಿಶ್ಲೇಷಿಸಲಾಗಿದೆ. ಈ ವಿಶ್ಲೇಷಣೆಯನ್ನು ಪ್ರಧಾನವಾಗಿ ಬರಹ ಕನ್ನಡದ ಮುಖೇನ ಹೋಲಿಸಿ ಮಳವಳ್ಳಿ ಕನ್ನಡ ಭಾಷಿಕ ಭಿನ್ನತೆ ಮತ್ತು ಚಾರಿತ್ರಿಕತೆ, ಸಾಮಾಜಿಕ ಭಿನ್ನತೆ, ಭಾಷಿಕ ವೈಶಿಷ್ಟ್ಯತೆಯನ್ನು ವಿವರಿಸಿ ತೋರಿಸಲಾಗಿದೆ.

ಮಳವಳ್ಳಿ ತಾಲೊಕಿನ ಆಯ್ದ ಹಳ್ಳಿಗಳನ್ನು ಪ್ರಸ್ತುತ ಅಧ್ಯಯನದ ಸಂಶೋಧನ ಸಂದರ್ಶನ ಕೇಂದ್ರಗಳಾಗಿ ನಿರ್ಧರಿಸಿ, ಸ್ಥಳೀಯ ಜನರಿಂದ ಭಾಷಿಕ ದತ್ತಾಂಶಗಳನ್ನು ಸಂಗ್ರಹಿಸಿ ವಿಶ್ಲೇಷಣೆ ಮಾಡಲಾಗಿದೆ. ಮಳವಳ್ಳಿ ಪ್ರದೇಶದ ಕನ್ನಡ ನುಡಿಯನ್ನು ಬರಹ ಕನ್ನಡ, ಹಳೆಗನ್ನಡಗಳೊಂದಿಗೆ ಹೋಲಿಸಿ ವಿವರಣೆ ನೀಡಲಾಗಿದೆ. ಬರಹ ಕನ್ನಡ ಮತ್ತು ಹಳೆಗನ್ನಡ ಇವುಗಳಲ್ಲಿ ಬಳಕೆಗೊಳ್ಳುವ ಭಾಷಿಕ ಕ್ರಮ, ಮಳವಳ್ಳಿ ಕನ್ನಡದಲ್ಲಿ ಬಳಕೆಗೊಳ್ಳುವ ಭಾಷಿಕ ಕ್ರಮಗಳ ನಡುವಿನ ವ್ಯತ್ಯಾಸವನ್ನು ಉದಾಹರಣೆಯೊಂದಿಗೆ ವಿವರಿಸಲಾಗಿದೆ. ಈ

ಕಾಲಘಟ್ಟದ ಎರಡು ಕನ್ನಡಗಳಿಗಿಂತಲೂ ಮಳವಳ್ಳಿ ಕನ್ನಡ ಬದಲಾಗಿರುವ ಮತ್ತು ತನ್ನ ತನವನ್ನು ಉಳಿಸಿಕೊಂಡಿರುವ ಭಾಷಿಕ ವಿಶಿಷ್ಟ ಅಂಶಗಳನ್ನು ಇಲ್ಲಿ ತಿಳಿಸಲಾಗಿದೆ.

ಮಳವಳ್ಳಿ ಕನ್ನಡದಲ್ಲಿ ಒಟ್ಟು ಹತ್ತು ಸ್ವರಗಳು ಬಳಕೆಯಲ್ಲಿವೆ. ಅದರಲ್ಲಿ ೫ ಹ್ರಸ್ವ, ೫ ದೀರ್ಘಸ್ವರಗಳೆಂದು ಮೂರನೆಯ ಅಧ್ಯಾಯದಲ್ಲಿ ವಿವರಿಸಲಾಗಿದೆ. ಇವುಗಳ ಜೊತೆಗೆ ಐದು ಉಪ ಧ್ವನಿಮಾಗಳು ಇರುವುದನ್ನು ಕಾಣಬಹುದು. ಇಲ್ಲಿ ದೀರ್ಘತ್ವವು ಪ್ರತ್ಯೇಕ ಧ್ವನಿಮಾ ಸ್ಥಾನವನ್ನು ಪಡೆದುಕೊಂಡಿರುವುದನ್ನು ಕಾಣಬಹುದು. ಒಟ್ಟು ಮಳವಳ್ಳಿ ಕನ್ನಡದಲ್ಲಿ ೧೫ ಧ್ವನಿಮಾಗಳು ಬಳಕೆಯಲ್ಲಿವೆ.

ಒಟ್ಟು ೧೯ ವ್ಯಂಜನ ಧ್ವನಿಮಾಗಳನ್ನು ಮಳವಳ್ಳಿ ಕನ್ನಡ ಹೊಂದಿದೆ. ಇಲ್ಲಿನ ಸ್ಪರ್ಶಧ್ವನಿಮಾಗಳೆಲ್ಲವೂ ಅಲ್ಪಪ್ರಾಣ ಧ್ವನಿಮಾಗಳೆ ಆಗಿವೆ. ಇಲ್ಲಿ ಮಹಾಪ್ರಾಣ ಧ್ವನಿಮಾಗಳಿಲ್ಲದಿರುವುದನ್ನು ಗಮನಿಸಬಹುದು.

**ಇ ಮತ್ತು ಎ**

ಕಿತ್ಲು–ಜಗಳಗಂಟ"– ಇಮ ಬಾರಿ ಕಿತ್ಲು ಬೊಡ್ತದು

ಕೆಚ್ಲು–ಎದೆ"–ಅಸಿನ್ ಕೆಚ್ಲು ಬೂದ್ಸ್ಕಂಡ್ದೆ

ಸಮ್ತಿ–ಸವತಿ"–ವೋಗೊ ನನ್ ಸಮ್ತಿ

ಸಮ್ತೆ–ಸವತೆಕಾಯಿ"– ಸಂತೆಲಿ ಸಮ್ತೆ ಕಾಯ್ ತಕಂಡ್ ಬಾ

**ಇ ಮತ್ತು ವ್ಯ**

ಬಿರಿ–ಮುನಿಸು–ಕೆಂಪಿ ಯಾಕೊ ಬಿರ್ಕಂಡ್ವಳೆ

ಬ್ಯೆರಿ–ಸೇರು–ಏನ್ ಬ್ಯಡ್ ಬ್ಯೆಸ್ಕೆಯೋ ಎಲ್ರುತವೂ ಬ್ಯೆರಿ

ತಿಮಿ–ಚುಚ್ಚು–ತಿಮುದ್ರೆ ಉಂಡಿರುದೆಲ್ಲ ಇಚ್ಗಬಂದ್ಬುಡ್ಬೇಕು

ತ್ಯೆಮಿ–ತೆವಳು–ಇದ್ಕೆ ತ್ಯೆಮಿ ರೋಗ ಬಂದದೆ

**ಇ ಮತ್ತು ಹ್ಯ**

ಇಟ್ಟಿ–ಇಡು–ತಪ್ಲೆಯ ಅಲ್ಲೆ ಇಟ್ಬುಟ್ ವೋಗು

ಹ್ಯಟ್ಟಿ–ಮನೆ–ಹ್ಯಟ್ಲಲ್ದೆ ಎಲ್ಗವೋಗಿದಮಿ

ಕಿಟ್ಟಿ–ಹೆಸರು

ಕ್ಯಟ್ಟಿ–ಕಟ್ಟಿ–ಸವ್ದೆ ವರೆಯ ಮಸ್ಟುಕ್ ಕ್ಯಟ್ಟು

**ಇ ಮತ್ತು ಬ್ಯ**

ಕಿರಿ–ಚಿಕ್ಕ–ಆ ಕಿರಿ ಗಂಡು ಯತ್ಗೋಯ್ತು

ಕ್ಯೊರಿ–ತೂತು ಮಾಡು–ಮರ್ವ ಮಸ್ಟಕ್ ಕ್ಯೊರಿ

ಕಿಮಿ–ಕಿವಿ–ಕಿಮಿ ಸರ್‍ಯಾಗಿ ಕೇಳ್ಸತಿಲ್ಲ

ಕ್ಯೊಮಿ–ಮಾಡು–ಅದೇನ್ ಕ್ಯೊಮ್ಯಪ್ಪ ಕ್ಯೊಮಿತಿನಿ ಅಂದಲ

**ಇ ಮತ್ತು ಒ**

ಸಿಳ್ಳು–ಸಿಡಿಲು–ಏನ್ ಸಿಳ್ಳು ಇಂಗ್ ಬಡಿತದೆ

ಸೊಳ್ಳು–ದೀಪ–ಕತ್ಲೆ ವಸಿ ಸೊಳ್ ಕಸ್ಸು

ಅಂಸ್ತಿ–ಔಷಧಿ–ಜರ ಬಂದದಲ ಅಂಸ್ತಿ ಕುಡಿ ವಾಸಿಯಾಯ್ತದೆ

ಅಮ್ಸೊಕ–ಮುಚ್ಚಿಡು– ನಿನ್ ಗಂಡ ವಡಿಕ್ ಬತ್ವನೆ ವೋಗ್ ಅಮ್ಕೊಸ

**ಎ ಮತ್ತು ವ್ಯ**

ಎಲಿ–ಇಲಿ–ಎಲಿ ಸುಂಡ ಅಟ್ಲಿ ಯಳ್ ಆಗ್ಬುಟ್ಟವೆ

ವ್ಯಲೆ–ಎಲೆ–ಅಳ್ ವ್ಯಲ್‌ಯ ಕಿತ್ಕಬಾ

ಎರ–ಇರುವೆ–ಕೆಂಪ್ ಎರ ಕಚ್‌ಬುಡ್ತು

ವ್ಯರೆ–ಎರೆ ಭೂಮಿ–ಇಮ ಅತ್ ಎಕ್ಕರೆ ವ್ಯರ ಗದ್ದೆ ಮಡ್ಗವೆ ನೋಡು

**ಎ ಮತ್ತು ಅ**

ಮರೆ–ಅಡ್ಡ–ಅಮ ಮರೆ ಮಾಡ್ಕಂದ್ವನೆ

ಮರ–ಮರ

ನೆಳ್ಳು–ನೆರಳು–ಮರೆ ಮಾಡ್ಕದೆ ನೆಳ್ ಬುಡು

ನಳ್ಳು–ನರಳು–ನಿಂಗೆ ಬರ್ಬಾರ್ದ ರೋಗ ಬಂದ್ ನಳ್ಳು

**ಎ ಮತ್ತು ಬ್ಯ**

| | | | |
|---|---|---|---|
| ಕೆರಿ | "ತುರುಕೆ" | ಕ್ಯಾರಿ | "ತೂತುಮಾಡು" |
| ತೆಗಿ | "ತೆಗೆಯಯುವುದು" | ತ್ಯಾರಿ | "ದೂರಮಾಡು" |

**ಎ ಮತ್ತು ಉ**

| | | | |
|---|---|---|---|
| ಎಣ್ಣು | "ಹೆಂಗಸು" | ಉಣ್ಣು | "ಗಾಯ" |
| ಕೆಚ್ಚು | "ದೈರ್ಯ" | ಕುಚ್ಚು | "ಗುಂಪು" |

**ಎ್ಯ ಮತ್ತು ಉ**

ಎ್ಯಳೆ–"ದಾರ"–ಎ್ಯಳೆ ಕಟ್ಸಕೊ ಜರ ವಯ್ತವೆ

ಉಳ–"ಕೀಟ"–ಉಳ ಆಯಿಕೆ ಬಂದಿಯ

ಕ್ಯೆಂಡ–"ಬೆಂಕಿ ಕೆಂಡ"–ವಸಿ ಬೆಂಕಿ ಕ್ಯೆಂಡ ಕೊಡು

ಕುಂಡ "ಕುರುಡ"–ಕಣ್ ಕಾಣ್ಸುದಿಲ್ಲ, ಕಣ್ ಕುಂಡು

**ಅ ಮತ್ತು ಬ್ಯ**

ಅಪ್ಪ–"ಹಪ್ಪಳ"– ಅಪ್ಪ ವಣ್ಯಕೊನಿ ನೋಡಕೊ ಮೊಗ

ಬ್ಯಪ್ಪ–"ಬೊಬ್ಬೆ"–ಬೆಂಕಿ ಸುಟ್ಬುಟ್ಟು ಬ್ಯಪ್ಪ ನೋಡು ಯಂಗ್ ಎದ್ದದೆ

ಕವೆ–"ಉರಿ"–ಬೆಂಕಿ ಕವೆ ಜಾಸ್ತಿಆಯ್ತು

ಕ್ಯೊಂಬೆ "ಮರದ ಕೊಂಬೆ"-ಮರ್ದ ಕ್ಯೊಂಬೆ ಮುರ್ದೊಗದೆ

**ಅ ಮತ್ತು ಒ**

ಅಂಟು-"ಅಂಟಿಸು"-ಗ್ವಾಡ್ಗೆ ಬಣ್ಣ ಸರ್‍ಯಾಗ್ ಅಂಟಿಲಿಲ್ಲ

ಒಂಟು-"ಒಗಟು" -ಒಂಟ್ ಬಬುಡ್ಸು

ಕಳ್ಳಿ-"ಸಸ್ಯ"-ಕಳ್ಳಿ ತರ್ಕನ್ ಬಾ ನ್ಯರ್ಕೆ ಕಟ್ಟಕ್ಕೆ

ಕೊಳ್ಳಿ-"ಕೊಡಲಿ"-ಕೊಳ್ಳಿ ಬೇಕಿತು ನಿಂಗಿ ಸೌದೆ ಕತ್ರುಸುಕೆ

## ದೀರ್ಘಸ್ವರ ವೈದೃಶ್ಯಗಳು

**ಈ ಮತ್ತು ಆ**

ಚೀಲ "ಚೀಲ"

ಚಾಲ-"ಗುಣ"-ನಿನ್ ಚಾಲ್ ಕಂಡ್ರೆ ನನ್ ಆಗಲ್ಲು

**ಈ ಮತ್ತು ಓ್ಯ**

ಕೀರ-"ಪ್ರಾಣಿ"-ಉಳ್ಳಿ ವಲ್ದಲಿ ಕೀರ್ಗಳ್ ಕಾಟ

ಕ್ಯೋರ-"ಕೊರೆ"-ಆ ಮರ್ವ ಕ್ಯೋರಿ

ಸೀರೆ "ಬಟ್ಟೆ"

ಸ್ಯೋರೆ "ಸೋರೆ"- ಸ್ಯೋರೆ ಬುಂಡೆ

**ಏ ಮತ್ತು ಆ**

ಬೇಲ "ಮರ" ಬಾಲ "ಬಾಲ"

ಏಡು "ಎರಡು" ಆಡು "ಆಡು"

**ಏ ಮತ್ತು ಓ್ಯ**

ದೇಶ "ದೇಶ"

ದ್ಯೊಸ "ದೋಸೆ"–ನಿನ್ ಯಾಸ್ಗ ದ್ಯೊಸೆ ಉಯ್ಯ

ಬೇರ "ಬೇರೆ"

ಬ್ಯೊರೆ "ಗುಡ್ಡ"–ಬ್ಯೊರೆ ಅತ್ತುಕಾಗ್ಲದು

**ಏ್ಯ ಮತ್ತು ಆ**

ಏ್ಯರು"ಯಾರು" ಆರು "ಆರು"

ಬ್ಯೇಗ "ಬೇಗ" ಬಾಗ "ಭಾಗ"

**ಏ್ಯ ಮತ್ತು ಓ್ಯ**

ಕ್ಯೇಣ–"ಕೋಪ"– ಇನ್ನೆ ಬಾರಿ ಕ್ಯೇಣ ಕನ

ಕ್ಯೋಣ–"ಕೋಣ"–ಕ್ಯೋಣಂಗ್ ಬೆಳ್ದಿದೆ ಬುದ್ದಿ ಇಲ್ಲ

ಬ್ಯೇರೆ–ಬೇರೆ– ಅವ್ವ್ ನಾವ್ ಬ್ಯೇರೆ ವಯ್ತಿಮಿ ಬಾಗಕೊಡು

ಬ್ಯೋರೆ "ಬೋರೆ"–ಅಣೆಲ್ ನೋಡು ಬ್ಯೋರೆ ಯಂಗ್ ಬಂದಿದದು

**ಏ್ಯ ಮತ್ತು ಊ**

ಏ್ಯರು "ಯಾರು"

ಊರು "ಊರು"

ತ್ಯೇಮ "ತೇವ"–ಬಟ್ಯಲ್ಲ ತ್ಯೇಮ ಆಗದೆ

ತೂಮ "ಸೂತಕ"–ನಿಮ್ಗೆ ತೂಮ ಅಟ್ಟಿ ಒಳ್ಕ್ ಬರ್ಬೇಡ

**ಆ ಮತ್ತು ಓ**

ಆಮೆ "ಆಮೆ"

ಓಮೆ "ಹೋಗೋಣ"–ಅಟ್ಗ್ ಓಮೆ

ಜಾಡು "ರಹಸ್ಯ"–ಇಡ್ದೆ ನೋಡು ಜಾಡ

ಜೋಡು "ಚಪ್ಪಲಿ"–ಕಾಲ್ಗೆ ಜೋಡ್ ಇಲ್ಲ, ಬರಿ ಕಾಲು

ಓ್ಯ ಮತ್ತು ಓ

ಕ್ಯೋಣ "ಕೋಣ" ಕೋಣೆ "ಅಡುಗೆ ಮನೆ"

ಬ್ಯೇರೆ "ಬೇರೆ" ಬೋರ "ಹೆಸರು"

ಓ್ಯ ಮತ್ತು ಊ

ಮ್ಯೋಡ–ಮೋಡ"–ಮ್ಯೋಡ ಮುಚ್ಕೊಂಡದೆ

ಮೂಡ–"ದಡ್ಡ"–ಒಗ್ ಮೂಡ್ ಮುಂಡೆದೆ

ಕ್ಯೋಳ–"ಕೋಳ"

ಕೂಳ–"ಗಲಾಟೆಮಾಡುವವ"

ಎ ಮತ್ತು ಏ

ಎರು "ಹೆರು" ಏರು "ಎತ್ತು"

ಕೆಡು "ನಾಶ" ಕೇಡು "ತೊಂದರೆ"

ಉ ಮತ್ತು ಊ

ಉರಿ "ದಾರ" ಊರಿ "ಬಿಚ್ಚು"

ಕುಳಿ "ಹಳ್ಳ" ಕೂಳಿ "ಮೀನು ಹಿಡಿಯುವ ಸಾಧನ"

ವ್ಯಂಜನಗಳು

ಪ ಮತ್ತು ಬ

ಪುಟ್ಟಿ "ಕುಕ್ಕೆ" ಬುಟ್ಟಿ "ಬುಟ್ಟಿ"

ಪಳ್ಳಿ "ಶಾಲೆ" ಬಳ್ಳಿ "ಬಳ್ಳಿ"

ತ ಮತ್ತು ದ

ತರ "ವಿವಿಧ" ದರ "ಭೂವಿ"

ಕತೆ "ಕಥೆ" ಕದ "ಬಾಗಿಲು"

ಟ ಮತ್ತು ಡ

ಟೊಳ್ಳು "ತೂತು" ಡೊಳ್ಳು "ಡೊಂಕ"

ಕುಂಟಿ "ಕುಂಟಿ" ಕುಂಡಿ "ಕುರುಡು"

ಚ ಮತ್ತ ಜ

ಚವ್ರ "ಕ್ಷೌರ" ಜವ್ರ "ಹೆಸರು"

ಕ ಮತ್ತು ಗ

ಕೆರ "ಚಪ್ಪಲಿ" ಗೆರೆ "ಗೆರೆ"

ಮೊಕ "ಮುಖ" ಮಗ "ಮಗ"

ಮ ಮತ್ತು ಣ

ಆಮೆ "ಆಮೆ" ಆಣೆ "ಭಾಷೆ"

ಬಾಮ "ಹೆಸರು" ಬಾಣ "ಬಾಣ"

ನ ಮತ್ತು ಣ

ಮನ "ಮನ" ಮಣ "ತೂಕ"

ಬನ "ಕಾಡು"ಬಣ "ಗುಂಪು"

ಸ ಮತ್ತು ರ

ಸಾನೆ "ಹೆಚ್ಚು"–ಊಟ ಸಾನೆ ಆಯ್ತು

ರಾಣಿ "ರಾಣಿ"

**ವ ಮತ್ತು ಯ**

ವಾಟ"ಸರಿಯಾಗಿ"-ನೀರ್ ವೋಗ್ವಂಗೆ ವಾಟ ಮಾಡು

ಯಾಟೆ "ಕೋಳಿ"-ಯಾಟೆ ಕೋಳಿ ಸಾರ್ ಚನ್ನಗಿತ್ತು

ವಲ "ಒಲ"- ವಲ ಉತ್ತಾಯ್ತು

ಯಲೆ "ಎಲೆ"-ಕೆಂಪಿ ಯಲೆ ಇದ್ರೆ ಕೊಡು

ಮಳವಳ್ಳಿ ಕನ್ನಡದ ಪದಗಳ ರಚನಾ ವಿನ್ಯಾಸವನ್ನು ಕುರಿತು ಸುದೀರ್ಘವಾಗಿ ಉದಾಹರಣೆಗಳ ಸಹಿತ ವಿಶ್ಲೇಷಿಸಿದೆ. ಪದ ರಚನೆಗಳು ಬರಹ ಕನ್ನಡ ಮತ್ತು ಮಳವಳ್ಳಿ ಪ್ರಾದೇಶಿಕ ಬಳಕೆಯ ಕನ್ನಡ ಹೇಗೆ ಭಿನ್ನವಾಗಿದೆ ಎನ್ನುವುದನ್ನು ವಿವರಿಸಲಾಗಿದೆ. ನಾಮಪದ, ಕ್ರಿಯಾಪದ, ವಿಶೇಷಣ ಪದಗಳ ಬಳಕೆಯ ಕ್ರಮಗಳ ಬಗೆಗೆ ವಿವರಿಸಲಾಗಿದೆ.

ಮಳವಳ್ಳಿ ಕನ್ನಡದಲ್ಲಿ ನಾಮಪದ, ಕ್ರಿಯಾಪದ, ಗುಣಪದಗಳು ಹೇಗೆ ಬಳಕೆಯಾಗುತ್ತವೆ ಎಂಬುವುದನ್ನು ಕಾಣಬಹುದು. ಈ ಮೂರು ರೀತಿಯ ಪದರಚನೆಯಲ್ಲಿ ಧಾತುಗಳು ಬಳಕೆಯಾಗುವುದನ್ನು ಕಾಣಬಹುದು. ಈ ಧಾತುಗಳಿಗೆ ಯಾವ ಪ್ರತ್ಯಯಗಳನ್ನು ಸೇರಿಸದೆ ಅವನ್ನು ನೇರವಾಗಿ ನಾಮಪದ, ಕ್ರಿಯಾಪದ, ಗುಣಪದಗಳಾಗಿ ವಾಕ್ಯಗಳಲ್ಲಿ ಬಳಸಲು ಸಾದ್ಯ ಎಂಬುವುದನ್ನು ಮಳವಳ್ಳಿ ಕನ್ನಡ ನುಡಿಯಲ್ಲಿ ಕಾಣಬಹುದು.

ಮೂಲದ್ರಾವಿಡ ಭಾಷೆಯಲ್ಲಿ ಈ ಮೂರು ರೀತಿಯ ಒಳರಚನೆಗಳು ಬಳಕೆಗೊಳ್ಳುತ್ತಿದ್ದವು ಎನ್ನುವ ಮಾತನ್ನು ಗಮನಿಸಬಹುದು. ಈ ಮೂರು ರೀತಿಯ ಪದಗಳ ಒಳರಚನೆಯಲ್ಲೂ ನಾಮಧಾತು, ಕ್ರಿಯಾಧಾತು ಮತ್ತು ಗುಣಧಾತು ಎಂಬ ಮೂರು ಬೇರೆ ಬೇರೆ ರೀತಿಯ ಧಾತುಗಳು ಬಳಕೆಯಾಗುತ್ತಿರುವುದು ಇಂದಿಗೂ ಮಳವಳ್ಳಿ ಕನ್ನಡದಲ್ಲಿ ಕಾಣಬಹುದು.

**ನಾಮಧಾತು**

| ಬರಹ ಕನ್ನಡ | ಮಳವಳ್ಳಿ ಕನ್ನಡ | ಮೂಲದ್ರಾವಿಡ ಕನ್ನಡ |
|---|---|---|
| ದೀಪ | ಸೊಳ್/ಸೊಳ್ಳು | ಸೊಳ್ |

| | | |
|---|---|---|
| ಧೈರ್ಯ | ಜೂರತ್ | ಜೂರತ್ |
| ತೂತು | ದೊಳ್ | ದೊಳ್ |
| ಗುಟ್ಟು | ತೊಕ್ | ತೊಕ್ |

ಈರಿ ಕತ್ಲಾಯ್ತು ಸೊಳ್ ಕಸ್ದೆ ಎಲ್ ವೋದೆ

ಇವನ್ ಜೂರತ್ ನೋಡು ಎಸ್ಪ್ ಆಗೋಯ್ತು

ಬಸ್ರಿ ಮರ ದೊಳ್ ಬಿದೊಗದೆ

ಇಮ ವನ್ನೂರ್ ತೊಕ್ ಕೊಟ್ಟನೆ ನೋಡು

**ಕ್ರಿಯಾಧಾತು**

| ಬರಹ ಕನ್ನಡ | ಮಳವಳ್ಳಿ ಕನ್ನಡ | ಮೂಲದ್ರಾವಿಡ ಕನ್ನಡ |
|---|---|---|
| ಒರೆಸು | ಸೀಟ್ | ಸೀಟ್ |
| ವಾಸಿ/ ಗುಣ | ಕೆಂದ್ | ಕೆಂದ್ |
| ಸೇರಿಸು | ಕೂಡ್ | ಕೂಡ್ |
| ಕಾಣು | ಕಾಣ್ | ಕಾಣ್ |

ಕೆಂಪಿ ನೆಲ್ವ ಸರ್ರ್ಯಾಗ್ ಸೀಟ್

ನನ್ ಗಾಯ ಕೆಂದೋಯ್ತು

ನೇಗಲ್ ಬೆಣೆನ ಮಸ್ಟುಕ್ ಕೂಡ್ಸು

ನಿಂಗೆ ಕಣ್ ಕಾಣ್ಲದೆ

ಗುಣಧಾತು

| ಬರಹ ಕನ್ನಡ | ಮಳವಳ್ಳಿ ಕನ್ನಡ | ಮೂಲದ್ರಾವಿಡ ಕನ್ನಡ |
|---|---|---|
| ಕಪ್ಪು | ಕರ್ | ಕರ್ |
| ಚಿಕ್ಕ | ಕಿರ್ | ಕಿರ್ |
| ಕುಳ್ಳ | ಗಿಡ್ | ಗಿಡ್ |
| ಕೆಂಪು | ಚೆಂಪ್ | ಚೆಂಪ್ |

ಈ ಗಂಡ್ ಯೇನು ಇಪಟಿ ಕರ್‌ಗದೆ

ಕ್ವಾಣ ಕಿರ್‌ದಾಯ್ತು

ಅಸ ಬಾರಿ ಗಿಡ್‌ದಾಯ್ತು

ಈ ಬಟ್ಟೆ ಚೆಂಪ್‌ಕದೆ

ಈ ರೀತಿಯಾಗಿ ಮೂಲದ್ರಾವಿಡದಲ್ಲಿ ಬಳಕೆಗೊಳ್ಳತ್ತಿದ್ದವು ಎನ್ನಲಾದ ಭಾಷಾ ವಿದ್ವಾಂಸರ ಊಹೆಗಳು ಮಳವಳ್ಳಿ ಕನ್ನಡ ನುಡಿಯೊಳಗೆ ಬಳಕೆಯಲ್ಲಿರುವುದು ನಿಜ. ಭಾಷಾ ವಿದ್ವಾಂಸರು ಗುರ್ತಿಸಿರುವ ಈ ರೀತಿಯ ಲಕ್ಷಣಗಳನ್ನು ಮಳವಳ್ಳಿ ಕನ್ನಡ ತನ್ನ ಪದ ರಚನೆಯ ಹಂತಗಳಲ್ಲಿ ಮೂಲದ್ರಾವಿಡದ ಭಾಷಾ ಲಕ್ಷಣಗಳನ್ನು ಉಳಿಸಿಕೊಂಡಿರುವುದನ್ನು ಕಾಣಬಹುದು.

ಕನ್ನಡ ವ್ಯಾಕರಣ ಶಾಸ್ತ್ರದಲ್ಲಿ ಲಿಂಗ, ವಚನ ವ್ಯವಸ್ಥೆಗೆ ವಿಶೇಷವಾದ ಸ್ಥಾನವಿದೆ. ದ್ರಾವಿಡ ಕನ್ನಡದಲ್ಲಿ ಮೂರು ಬಗೆಯ ಲಿಂಗಗಳು, ಎರಡು ಬಗೆಯ ವಚನಗಳು ಇರುವುದು ಕಂಡುಬರುತ್ತದೆ. ಮಳವಳ್ಳಿ ಕನ್ನಡದಲ್ಲಿ ಮೂರು ಲಿಂಗಗಳು, ಎರಡು ವಚನಗಳು, ಬಳಕೆಗೊಳ್ಳುತ್ತವೆ.

ದ್ರಾವಿಡ ಭಾಷೆಯಲ್ಲಿ ಬಳಕೆಗೊಳ್ಳುವ ಲಿಂಗ, ವಚನ ವ್ಯವಸ್ಥೆಗಳ ಬಗ್ಗೆ ವಿದ್ವಾಂಸರ ಅಭಿಪ್ರಾಯಗಳನ್ನು ಆದರಿಸಿ ಇಲ್ಲಿ ಚರ್ಚಿಸಲಾಗಿದೆ. ಯಾವ ಶಬ್ದ ಒಂದು ವಸ್ತು ಮತ್ತು

ವ್ಯಕ್ತಿಯನ್ನು ಸೂಚಿಸುತ್ತವೊ ಅವನ್ನು ಏಕವಚನ ಎಂತಲೂ, ಎರಡು ವಸ್ತು, ವ್ಯಕ್ತಿಯನ್ನು ಸೂಚಿಸುವುದನ್ನು ಬಹುವಚನ ಎಂತಲೂ ಕರೆಯಲಾಗುತ್ತದೆ.

ಲಿಂಗವ್ಯವಸ್ಥೆಯಲ್ಲಿ ಜೀವ ಇರುವ ಮತ್ತು ಜೀವ ಇಲ್ಲದ ಎಂದು ಎರಡು ರೀತಿಯಲ್ಲಿ ದ್ರಾವಿಡ ಭಾಷೆಯಲ್ಲಿ ವಿಂಗಡಿಸಲಾಗಿದೆ ಎನ್ನುವುದನ್ನು ಭಾಷಾ ವಿದ್ವಾಂಸರು ಗುರುತಿಸಿದ್ದಾರೆ. ಅದಲ್ಲದೆ ಸ್ತ್ರೀ ಲಿಂಗ, ಪುಲ್ಲಿಂಗ, ನಪುಂಸಕ ಲಿಂಗಗಳ ಬಗ್ಗೆಯು ಸಹ ಮಾತನಾಡುತ್ತಾರೆ. ದ್ರಾವಿಡ ಭಾಷೆಯಲ್ಲಿ ಬಳಕೆಗೊಳ್ಳುವ ಲಿಂಗ ಮತ್ತು ವಚನ ವ್ಯವಸ್ಥೆಯನ್ನು ಉದಾಹರಣೆಯ ಮೂಲಕ ನೋಡಬಹುದು.

| | **ಏಕ ವಚನ** | **ಬಹುವಚನ** |
|---|---|---|
| **ಸ್ತ್ರೀ ಲಿಂಗ** | **ಅವಳ್** | **ಅವರ್** |
| **ಪುಲ್ಲಿಂಗ** | **ಅವನ್** | **ಅವರ್** |
| **ನಪುಂಸಕಲಿಂಗ** | **ಅದ್, ಅವ್** | **ಅವು, ಅವ** |

ಮಳವಳ್ಳಿ ಕನ್ನಡದಲ್ಲಿ ಬಳಕೆಗೊಳ್ಳುವ ವಚನಗಳು ಮತ್ತು ಲಿಂಗ ವ್ಯವಸ್ಥೆಗಳ ಬಗ್ಗೆ ಈ ಕೆಳಗಿನ ಉದಾಹರಣೆಯ ಮೂಲಕ ಕಾಣಬಹುದು.

| | **ಏಕ ವಚನ** | **ಬಹುವಚನ** |
|---|---|---|
| **ಸ್ತ್ರೀ ಲಿಂಗ** | **ಅಮಿ/ಅವಳ್** | **ಅವರ್** |
| **ಪುಲ್ಲಿಂಗ** | **ಅಮ/ಅವನ್** | **ಅವರ್** |
| **ನಪುಂಸಕಲಿಂಗ** | **ಅದು/ಅದ್** | **ಅವ್** |

ವಚನ ಮತ್ತು ಲಿಂಗಗಳನ್ನು ಮಳವಳ್ಳಿ ಪ್ರದೇಶದಲ್ಲಿ ಹೇಗೆ ಬಳಸಲಾಗುತ್ತದೆ ಎಂಬುದನ್ನು ಉದಾಹರಣೆಯೊಂದಿಗೆ ವಿವರಿಸಲಾಗಿದೆ.

| | **ಏಕ ವಚನ** | **ಬಹುವಚನ** |
|---|---|---|
| **ಸ್ತ್ರೀ ಲಿಂಗ** | ಅಮಿ ಬಮ್ಮಿ / ಅವಳ್ ಕರಿ | ಅವರ್ |
| **ಪುಲ್ಲಿಂಗ** | ಅಮ ಸರಿಲ್ಲ / ಅವನ್ ಬಾ ಅನ್ನು | ಅವರ್ |

ನಪುಂಸಕಲಿಂಗ ಅದು ಬತ್ತಾದೆ / ಅದ್ ಬತ್ತು ಅವ್

ಈ ಎಲ್ಲಾ ಅಂಶಗಳಲ್ಲಿಯೂ ಮಳವಳ್ಳಿ ಕನ್ನಡ ತನ್ನದೇ ಆದ ಭಾಷಾ ವೈಶಿಷ್ಟ್ಯತೆಯನ್ನು ಇಂದಿಗೂ ಉಳಿಸಿಕೊಂಡಿರುವ ಅಂಶಗಳನ್ನು ಉದಾಹರಣೆಗಳೊಂದಿಗೆ ಎಲ್ಲಾ ಅಧ್ಯಾಯಗಳಲ್ಲೂ ವಿವರಿಸಿಲಾಗಿದೆ. ಅಲ್ಲದೆ ಮಳವಳ್ಳಿ ಕನ್ನಡವೂ ಆಧುನಿಕ ಕಾಲಘಟ್ಟದ ಪ್ರಭಾವಕ್ಕೆ ಒಳಗಾಗಿ ಅನೇಕ ರೀತಿಯಲ್ಲಿ ಉಚ್ಚಾರಣ ನೆಲೆಯಲ್ಲಿ, ಅರ್ಥದ ನೆಲೆಯಲ್ಲಿ, ಬಳಕೆಯ ನೆಲೆಯಲ್ಲಿ ಅದು ಕೆಲವು ಸಾರಿ ಬರಹ ಕನ್ನಡದಾಗೆ ಉಳಿಸಿಕೊಂಡಿದ್ದರೆ, ಇನ್ನೂ ಕೆಲವು ಕಡೆ ಹಳೆಗನ್ನಡ ತನವನ್ನು ಉಳಿಸಿಕೊಂಡಿದೆ, ಅದರೊಟ್ಟಿಗೆ ಮಳವಳ್ಳಿ ಪ್ರದೇಶದ ಭಾಷಾ ವೈಶಿಷ್ಟ್ಯತೆಯನ್ನು ಸಹ ಅದು ಉಳಿಸಿಕೊಂಡಿರುವುದನ್ನು ಕಾಣಬಹುದು.

ಮಳವಳ್ಳಿ ಕನ್ನಡದಲ್ಲಿ ಬಳಕೆಗೊಳ್ಳುವ ನಿರ್ದೇಶಕ ಸರ್ವನಾಮಗಳು ಬಹಳ ವಿಶಿಷ್ಟವಾದವು. ಈ ಪ್ರದೇಶದಲ್ಲಿ ಬಳಸುವ ನಿರ್ದೇಶಿತ ಸರ್ವನಾಮಗಳಲ್ಲಿ ಹೆಚ್ಚು 'ಚ' ಕಾರವನ್ನು ಬಳಸಿ ಪದಗಳನ್ನು ಉಪಯೋಗಿಸುವುದನ್ನು ಕಾಣಬಹುದು. ಬರಹ ಕನ್ನಡದಲ್ಲಿ ಬಳಸುವ ರೂಪಕ್ಕಿಂತಲೂ ವಿಭಿನ್ನವಾಗಿ ಬಳಕೆಗೊಳ್ಳುವುದನ್ನು ಕಾಣಬಹುದು.

ಅಲ್ಲಿ<ಆಚೊರಿ

ಇಲ್ಲಿ<ಈಚೊರಿ

ಬಲಗಡೆ<ಬಲ್ಚೊರಿ

ಎಡಗಡೆ<ಎಡ್ಚೊರಿ

ಒಂದು ಕಡೆ<ವಚ್ಚೊರಿ

ಮುಂದೆ<ಮುಂಚೋರಿ

ಹಿಂದೆ<ಇನ್ಚೋರಿ

ಕಡೆ<ಕಡ್ಚೋರಿ

ಎಲ್ಲಿ<ಯಾಚೋರಿ, ಎಚ್ಚೋರಿ

ಮಳವಳ್ಳಿ ಕನ್ನಡದಲ್ಲಿ ಬಳಕೆಗೊಳ್ಳುವ ಪ್ರಶ್ನಾರ್ಥಕಗಳು ಬರಹ ಕನ್ನಡಕ್ಕಿಂತ ಭಿನ್ನವಾಗಿ ಈ ಪರಿಸರದಲ್ಲಿ ಬಳಕೆಗೊಳ್ಳುವುದನ್ನು ಕಾಣಬಹುದು. ಮಳವಳ್ಳಿ ಪರಿಸರದ ಕನ್ನಡದಲ್ಲಿ ಪ್ರಶ್ನಾರ್ಥಕಗಳು ಬಳಕೆಗೊಳ್ಳುವ ಪದಮಧ್ಯ ಅಕ್ಷರಗಳು 'ಂ' ಅನುಸ್ವರದಿಂದ ಕೂಡಿರುತ್ತದೆ ಎಂಬುದನ್ನು ಉದಾಹರಣೆಗಳೊಂದಿಗೆ ಕಾಣಬಹುದು. ಈ ಅನುಸ್ವರ ಸಹಿತವಾದ ಬಳಕೆಯ ಕ್ರಮವು ಹಳೆಗನ್ನಡದ ಶಾಸನಗಳಲ್ಲಿ ಬಳಕೆಯಲ್ಲಿರುವುದನ್ನು ಕಾಣಬಹುದು. ಹಲ್ಮಿಡಿ ಶಾಸನದಲ್ಲಿ ಅನುಸ್ವಾರ ಸಮುಚ್ಚಯಗಳು ಹೆಚ್ಚು ಬಳಕೆಯಲ್ಲಿರುವುದನ್ನು ಈ ಶಾಸನದಲ್ಲಿ ಗುರುತಿಸಿದ್ದಾರೆ.

ಅದೇ ರೀತಿ ಮಳವಳ್ಳಿ ಕನ್ನಡವೂ ಕೂಡ ಅನುಸ್ವರ ಸಹಿತ ರೂಪಗಳನ್ನು ಪ್ರಶ್ನಾರ್ಥಕ ರೂಪಗಳಲ್ಲಿ ಇಂದಿಗೂ ಉಳಿಸಿಕೊಂಡಿರುವುದನ್ನು ಕೆಳಗಿನ ಉದಾಹರಣೆಗಳ ಮೂಲಕ ಕಾಣಬಹುದು.

| **ಮಳವಳ್ಳಿ ಕನ್ನಡ** | **ಬರಹ ಕನ್ನಡ** |
|---|---|
| ಅಂಗೆ | ಹಾಗೆ |
| ಇಂಗೆ | ಹೀಗೆ |
| ಯೆಂಗೆ | ಹೇಗೆ |
| ಅಂಗಾರೆ | ಹಾಗಾದರೆ |
| ಇಂಗಾರೆ | ಹೀಗಾದರೆ |

ಒಂದು ಕ್ರಿಯೆಯ ವಿಷಯದಲ್ಲಿ ವಿಧಿ ನಿಷೇಧ ಸಂಭಾವನೆಗಳನ್ನು ತಿಳಿಸುವುದಕ್ಕಾಗಿ ವಿದ್ಯರ್ಥಕ ರೂಪಗಳನ್ನು ಧಾತುಗಳಿಗೆ ಬಳಸಲಾಗುತ್ತದೆ. ಈ ವಿದ್ಯರ್ಥಕ ರೂಪಗಳು ಮಳವಳ್ಳಿ ಕನ್ನಡದಲ್ಲಿ ಹೇಗೆ ಬಳಕೆಗೊಳ್ಳುತ್ತದೆ ಎಂಬುವುದನ್ನು ಕಾಣಬಹುದು. ಮಳವಳ್ಳಿ ಕನ್ನಡದಲ್ಲಿ ವಿದ್ಯರ್ಥಕ ರೂಪಗಳು ಣ ಕಾರವಾಗಿಯೂ, ಬರಹ ಕನ್ನಡದಲ್ಲಿ ಅದು ಎ ಕಾರವಾಗಿಯು ಬಳಕೆಯಾಗುವುದನ್ನು ಕಾಣಬಹುದು. ಈ ಕ್ರಿಯೆಯು ಸಂಭಾವನಾತ್ಮಕ ಹಂತದಲ್ಲಿ ಈ ಬದಲಾವಣೆಯನ್ನು ಗುರುತಿಸಬಹುದು.

**ಣಕಾರ ಮತ್ತು ಎಕಾರ ಬಳಕೆ**

| **ಮಳವಳ್ಳಿ ಕನ್ನಡ** | **ಬರಹ ಕನ್ನಡ** |
|---|---|
| ವಾಗಾಮೆ, ವೊಗ್ಮೆ | ಹೋಗೋಣ |

| | |
|---|---|
| ಬರಾಮೆ, ಬರ್ಮೆ | ಬರೋಣ |
| ತಿನ್ನೂಮೆ, ತಿನ್ಮೆ | ತಿನ್ನೋಣ |
| ಕರಿಮೆ | ಕರೆಯೋಣ |

ಆದರೆ ನಿಷೇಧಾರ್ಥಕ ರೂಪಗಳಲ್ಲಿ ಅವು ಅಲಿ ಎಂಬ ಧಾತುವಿಗೆ ಬರುವುದನ್ನು ಕಾಣಬಹುದು. ಅದು ಬರಹ ಕನ್ನಡ ಇಲ್ಲ ಎಂದು ಬಳಕೆಗೊಳ್ಳುತ್ತದೆ. ಮಳವಳ್ಳಿ ಕನ್ನಡ ಅಲಿ ಎಂಬ ರೂಪ ಬಳಕೆಗೊಳ್ಳುವುದನ್ನು ಗಮನಿಸಬಹುದು.

| ಮಳವಳ್ಳಿ ಕನ್ನಡ | ಬರಹ ಕನ್ನಡ |
|---|---|
| ವೊಗಲಿ | ಹೋಗುವುದಿಲ್ಲ |
| ಬರಲಿ | ಬರುವುದಿಲ್ಲ |
| ತಿನ್ನಲಿ | ತಿನ್ನುವುದಿಲ್ಲ |
| ಕರ್‍ಯಲಿ | ಕರೆಯುವುದಿಲ್ಲ |

ಸಂಬೋಧನ ಪ್ರಯೋಗ ಮಳವಳ್ಳಿ ಕನ್ನಡದಲ್ಲಿ ಹೇಗೆ ಬಳಕೆಗೊಳ್ಳುತ್ತದೆ ಎಂಬುದನ್ನು ಕಾಣಬಹುದು.

ಬವ್ವಾ

ಬಮ್ಮಿ

ಓಲಾ

ಬಲಾ

ಇಂತಹ ಪದಗಳನ್ನು ಉಚ್ಚರಿಸುವಾಗ ಮೊದಲಕ್ಷರದ ಮೇಲೆ ಒತ್ತುಕೊಟ್ಟು ಕೊನೆಯಲ್ಲಿ ಒಂದು ರೀತಿಯ ಗೀತಾತ್ಮ ಎಳೆತವನ್ನು ಕಾಣಬಹುದು.

ಮೇಲ್ಜಾತಿಯವರು ಕೆಳಜಾತಿಯ ವ್ಯಕ್ತಿಗಳನ್ನು ಕರೆಯುವ ಸಂದರ್ಭದಲ್ಲಿ ಈ ಸಂಬೋಧನ ರೂಪಗಳನ್ನು ಬಳಸುತ್ತಾರೆ. ಹೆಂಗಸರನ್ನು ಬಮ್ಮಿ ಎನುತಲು, ಗಂಡಸರನ್ನು

ಬಲಾ, ಓಲಾ ಎನುತಲು ಮೇಲ್ಜಾತಿಯ ಜನರು ಕೆಳಜಾತಿಯ ಜನರನ್ನು ಏಕವಚನ ರೂಪದಲ್ಲಿ ಬಳಸುತ್ತಾರೆ.

ಕೆಳಜಾತಿಯ ಜನರು ಮೇಲ್ಜಾತಿಯ ಜನರನ್ನು ಕರೆಯುವ ಸಂದರ್ಭದಲ್ಲಿ ಬವ್ವಾ, ಬುದ್ದಿ, ಸ್ವಾಮಿ ಎಂದು ಬಹುವಚನ ರೂಪಗಳನ್ನು ಬಳಸುವುದನ್ನು ಕಾಣಬಹುದು.

ಕೆಲ್ಸಕ್ ಬರ್ದೆ ಎಲ್ಲಿಗೋಗಿದ್ದಮ್ಮಿ

ಬಮ್ಮಿ ಕೆಲ್ಸುಕ್ಕೆ

ನಮ್ ಗದ್ದೆತಕೆ ಬಲಾ

ವಲ್ತಕೆ ಓಲಾ ಅಟ್ಟಿಲ್ದಿಕಂದ್ ಎನ್ ಮಾಡಿಯೇ

ಮಳವಳ್ಳಿ ಪ್ರದೇಶದಲ್ಲಿ ಕೆಳಜಾತಿಯ ಜನರು ಮೇಲ್ಜಾತಿವರನ್ನು ಸಂಬೋಧಿಸಬೇಕಾದರೆ ಗೌರವ ಸೂಚಕವಾಗಿ **'ಏಳಿ, ಬುದ್ದಿ'** ಎಂಬ ಪದಗಳನ್ನು ಬಳಸಿ ಮಾತನಾಡುವುದನ್ನು ಕಾಣಬಹುದು.

ಅವ್ನಿಯೇಳಿ<ಇದ್ದೇನೆ ಸ್ವಾಮಿ

ಇಲ್ಲೇಳಿ< ಇಲ್ಲ ಸ್ವಾಮಿ

ವಾದಾರೇಳಿ< ಹೋಗುತ್ತಿರ

ಬತ್ತಿಮೇಳಿ<ಬರುತ್ತೇವೆ

ಆಯ್ತೇಳಿ<ಮಾಡುತ್ತೇನೆ, ಹೌದು

ನಾ ಇಲ್ಲೆ ಅವ್ನಿಯೇಳಿ

ನಾ ಎಲ್ಲೂಗ್ ವೋನ್ಲೇಳಿ

ನಾ ಕದ್ದಿಲೇಳಿ

ನಾ ತಪ್ ಮಾಡ್ನಿಲೇಳಿ

ಊರ್ಗೆ ವಾದಾರೇಳಿ

ಎಲ್ಗೆ ವಾದಾರೇಳಿ

ನಾಮ್ ಬತ್ತಿಮೇಳಿ

ನಾಮು ಅಟ್ಟಿತಕ್ಕೆ ಬತ್ತಿಮೇಳಿ

ನನ್ ಕೆಲ್ಸ ಆಯ್ತೇಳಿ

ನಂದ್ ಇಟ್ಟುಂಡು ಆಯ್ತೇಳಿ

ಮೇಲಿನ ಉದಾಹರಣೆಗಳನ್ನು ಗಮನಿಸಿದಾಗ ಮೇಲ್ಜಾತಿಯವರನ್ನು ಕೆಳಜಾತಿಯವರು ಸಂಬೋಧಿಸುವಾಗ ಇಲ್ಲಯೇಳಿ ರೂಪವನ್ನು ಬಳಕೆ ಮಾಡುತ್ತಾರೆ. ಮೇಲ್ನೋಟಕ್ಕೆ ಈ ರಚನೆ ಬಳಕೆಯ ನೆಲೆಯಲ್ಲಿ ಒಂದು ರಚನೆಯಾಗಿ ಕಂಡರೂ ಆಂತರಿಕವಾಗಿ ಇಲ್ಲ ಹೇಳಿ ಎಂದೇ ಬಳಕೆಯಲ್ಲಿರುವುದನ್ನು ಗಮನಿಸಬಹುದಾಗಿದೆ. ಇಂತಹ ರೂಪಗಳು ಕೆಳಜಾತಿಯ ಹಳೆತಲೆಮಾರಿನವರಲ್ಲಿ ಮಾತ್ರ ಬಳಕೆಯಲ್ಲಿರುವುದನ್ನು ಕಾಣಬಹುದು. ಹೊಸತಲೆಮಾರಿನವರಲ್ಲಿ ಈ ರೂಪಗಳು ಲೋಪವಾಗಿದೆ.

ಮಳವಳ್ಳಿ ಕನ್ನಡದ ಕ್ರಿಯಾಪದಗಳಲ್ಲಿ ಭೂತಕಾಲ ಮತ್ತು ಭವಿಷ್ಯತ್ ಕಾಲಗಳನ್ನು ಹೇಳುವುದಕ್ಕಾಗಿ ಬರಹ ಕನ್ನಡದಲ್ಲಿರುವಂತಹ **ದ್** ಮತ್ತು **ಉತ್ತ** ಪ್ರತ್ಯಯಗಳೇ ಬಳಕೆಯಲ್ಲಿವೆಯಾದರೂ ಅವುಗಳ ರೂಪದಲ್ಲಿ ಕೆಲವು ವ್ಯತ್ಯಾಸಗಳನ್ನು ಕಾಣಬಹುದು. ಭವಿಷ್ಯತ್‌ಅನ್ನು ತಿಳಿಸುವ **ಉತ್ತ** ಪ್ರತ್ಯಯ ಹೆಚ್ಚು ಕ್ರಿಯಾಪದಗಳೊಂದಿಗೂ **ತ** ರೂಪದಲ್ಲಿ ಬರುತ್ತದೆ.

| **ಮಳವಳ್ಳಿ ಕನ್ನಡ** | **ಬರಹ ಕನ್ನಡ** |
|---|---|
| ಬರಿತ | ಬರೆಯುತ್ತಾನೆ |
| ಕುಡಿತ | ಕುಡಿಯುತ್ತಾನೆ |
| ಮಾಡ್ತ | ಮಾಡುತ್ತಾನೆ |
| ಉಣ್ತ | ಉಣ್ಣುತ್ತಾನೆ |
| ತಿಂತ | ತಿನ್ನುತ್ತಾನೆ |

ಭೂತಕಾಲವನ್ನು ತಿಳಿಸುವ **ದ್** ಪ್ರತ್ಯಯಕ್ಕೆ ಬರಹ ಕನ್ನಡದಲ್ಲಿ ಕಾಣಿಸುವ ಹಾಗೆ ಮಳವಳ್ಳಿ ಕನ್ನಡದಲ್ಲೂ ಯಾವುದೇ ವ್ಯತ್ಯಾಸವಿಲ್ಲದಿರುವುದನ್ನು ಕಾಣಬಹುದು.

| **ಮಳವಳ್ಳಿ ಕನ್ನಡ** | **ಬರಹ ಕನ್ನಡ** |
|---|---|
| ಬಂದ | ಬಂದ |
| ತಿಂದ | ತಿಂದ |
| ಸಿಕ್ಕಿದ | ಸಿಕ್ಕಿದ |
| ವೋದ | ಹೋದ |

ಈ ಎರಡು ಬಗೆಯ ಕ್ರಿಯಾರೂಪಗಳ ಬಳಕೆಯನ್ನು ಕೆಳಗೆ ಕೊಟ್ಟಿರುವ ವಾಕ್ಯಗಳಲ್ಲಿ ಕಾಣಬಹುದು.

ನಾಮು ನಾಳ್ಗೆ ಬತ್ತಿಮಿ<ನಾವು ನಾಳೆಗೆ ಬರುತ್ತೇವೆ

ನಾಮು ಇವತು ಸರ್ನೆ ಬಂದ್ನಮೊ<ಇವತ್ತು ನಾವು ಬೇಗ ಬಂದೆವು

ಇಮ ಓದ್ತಾವ್ನೆ<ಹುಡುಗ ಓದುತ್ತಾನೆ

ಇಮ ಓಡ್ದ<ಹುಡುಗ ಓಡಿದ

ಕ್ರಿಯಾರೂಪದಲ್ಲಿ **ಕಂಡ್** ಎಂಬ ರೂಪಕ್ಕೆ **ಕೊಂಡ್** ಎಂಬ ಬೇರೆ ರೂಪವೂ ಇವೆ ಎಂಬುದನ್ನು ಕೆಳಗಿನ ಉದಾಹರಣೆಗಳಲ್ಲಿ ಕಾಣಬಹುದು.

ಅಮ ಏನ್ನೋ ಬರಕೊಂಡ್ ಕುಂತ್ವನೆ<ಅವನು ಏನನ್ನೋ ಬರೆಯುತ್ತಾ ಕೂತಿದ್ದಾನೆ

ಅಮ ನಿಮ್ಗಳ್ನೆಲ್ಲ ಬಯ್ಕೊಂಡ್ ಇರ್ತಿದ್ದ<ಅವನು ನಿಮ್ಮನ್ನೆಲ್ಲ ಬಯ್ಯುತ್ತಾ ಇದ್ದ

ಇಲ್ಲೆಲ್ಲ ಒಂದ್ಸರಿ ಗುಡ್ಸೊಂಡ್ ಹೋಗಿದ್ದ<ಇಲ್ಲೆಲ್ಲಾ ಒಮ್ಮೆ ಗುಡಿಸುತ್ತಾ ಹೋಗಿದ್ದಾರೆ

ಕ್ರಿಯಾಪದಗಳನ್ನು ನಿಷೇಧಾರ್ಥಕವಾಗಿ ಬರಹ ಕನ್ನಡದಲ್ಲಿ ಎರಡು ಬಗೆಯಲ್ಲಿ ಬಳಸಲಾಗುತ್ತದೆ. ಕ್ರಿಯಾಪದಕ್ಕೆ **ಅಲು** ಪ್ರತ್ಯಯವನ್ನು ಸೇರಿಸಿ, ಅದಕ್ಕೆ ಇಲ್ಲ ಎಂಬುದನ್ನು ಸೇರಿಸುವುದು ಒಂದು ಬಗೆ. ಈ ರೀತಿ ಹೇಳುವುದಕ್ಕೆ ಹಿಂದಿನ ಕ್ರಿಯೆಯಲ್ಲಿ ನಿಷೇಧಾರ್ಥಕದ ಅರ್ಥವಿರುವುದನ್ನು ಕಾಣಬಹುದು.

ಕ್ರಿಯಾಪದದ ನಾಮಪದರೂಪಕ್ಕೆ ಇಲ್ಲ ಎಂಬುದನ್ನು ಸೇರಿಸುವುದು ಇನ್ನೊಂದು ಬಗೆ. ಇದಕ್ಕೆ ಭವಿಷ್ಯತ್‌ಕಾಲದ ಕ್ರಿಯಾ ನಿಷೇಧಾರ್ಥಕದ ಅರ್ಥವಿದೆ (ಮಾಡುವುದಿಲ್ಲ, ಹೋಗುವುದಿಲ್ಲ)

ಸಾಮಾನ್ಯವಾಗಿ ಕ್ರಿಯಾಪದಕ್ಕೆ **ಅಲು** ಪ್ರತ್ಯಯವನ್ನು ಸೇರಿಸಿರುವ ಕ್ರಿಯಾರೂಪವನ್ನು ಬರಹ ಕನ್ನಡದಲ್ಲಿ ಭವಿಷ್ಯತ್‌ಕಾಲದ ಕ್ರಿಯೆಯನ್ನು ತಿಳಿಸುವ ಜೋಡಿ ರೂಪವಾಗಿ ಬಳಸಲಾಗುತ್ತದೆ. ಆದರೆ ಕನ್ನಡದ ಕೆಲವು ಉಪಭಾಷೆಗಳಲ್ಲಿ **ಅಲು** ಪ್ರತ್ಯಯವನ್ನು ಬಳಸಿರುವ ಕ್ರಿಯಾರೂಪವನ್ನು ಭೂತಕಾಲದ ಕ್ರಿಯೆಯನ್ನು ತಿಳಿಸುವ ಜೋಡಿ ರೂಪವಾಗಿಯೂ ಬಳಸಲಾಗುತ್ತದೆ.

ಮರಯ್ಯ ತರಕಾರಿ ತರಲು ಸಂತೆಗೆ ಹೋದ
ಮರಯ್ಯ ತರಕಾರಿ ತರಲು, ಗೌರಿ ಅಡುಗೆ ಮಾಡಿದಳು
ಮರಯ್ಯ ತರಕಾರಿ ತರಲಿಲ್ಲ.

ಮೇಲಿನ ಮೊದಲ ಉದಾಹರಣೆಯಲ್ಲಿ **ಅಲು** ಪ್ರತ್ಯಯ ಸಂತೆಗೆ ಹೋಗುವ ಕ್ರಿಯೆಯ ನಂತರ ಹೋಗುವ ಕ್ರಿಯೆಯನ್ನು ತಿಳಿಸುತ್ತದೆ. ಆದರೆ ಎರಡನೆಯ ಉದಾಹರಣೆಯಲ್ಲಿ ಅದು ಗೌರಿ ಅಡುಗೆ ಮಾಡುವ ಮೊದಲು ನಡೆಯುವ ಕ್ರಿಯೆಯನ್ನು ತಿಳಿಸುತ್ತಿದೆ. ಮೂರನೆಯ ವಾಕ್ಯದಲ್ಲಿ ಕ್ರಿಯೆಯ ನಿಷೇಧಾರ್ಥವನ್ನು ತಿಳಿಸುತ್ತಿದೆ.

ಮಳವಳ್ಳಿ ಕನ್ನಡದ ನಿಷೇಧಾರ್ಥಕ ಕ್ರಿಯಾರೂಪಗಳು ಮೇಲೆ ವಿವರಿಸಿದ ಬರಹ ಕನ್ನಡದ ರೂಪಗಳಿಂದ ಬೇರಾಗಿವೆ. ಅವುಗಳಲ್ಲಿ ಕ್ರಿಯೆಯನ್ನು ತಿಳಿಸುವ ಕ್ರಿಯಾರೂಪಗಳಿಗೆ ನೇರವಾಗಿ ಇಲ್ಲ ಮತ್ತು **ಅಲಿ** ಪದಗಳನ್ನು ಸೇರಿಸಿ ಅಂತಹ ನಿಷೇಧಾರ್ಥಕಗಳ ರೂಪವನ್ನು ಬಳಸುವುದನ್ನು ಕಾಣಬಹುದು.

ನಾನು ಕೆಲ್ಸ ಮಾಡ್ತಿನಿ<ನಾನು ಕೆಲಸ ಮಾಡುತ್ತೇನೆ

ನಾನು ಕೆಲ್ಸ ಮಾಡಲಿ<ನಾನು ಕೆಲಸ ಮಾಡುವುದಿಲ್ಲ

ನಾನು ಕೆಲ್ಸ ಮಾಡ್ದಿ<ನಾನು ಕೆಲಸ ಮಾಡಿದೆ

ನಾನು ಕೆಲ್ಸ ಮಾಡಿದ್ದಿ<ನಾನು ಕೆಲಸ ಮಾಡಿದ್ದೇನೆ

ನಾನು ಕೆಲ್ಸ ಮಾಡ್ನಿಲ್ಲ<ನಾನು ಕೆಲಸ ಮಾಡಲಿಲ್ಲ

ಮಳವಳ್ಳಿ ಕನ್ನಡದ ಎರಡನೆ ವಾಕ್ಯದಲ್ಲಿ ಭವಿಷ್ಯತ್‌ಕಾಲದ ಕ್ರಿಯೆಯನ್ನು ತಿಳಿಸುವ **ಮಾಡಲಿ** ಎಂಬ ಪದವು ನೇರವಾಗಿ ನಿಷೇಧಾರ್ಥ ಪದವನ್ನು ಸೇರಿಸಲಾಗಿದೆ. ಆದರೆ ಅದರ ಕೆಳಗೆ ಕೊಟ್ಟಿರುವ ಬರಹ ಕನ್ನಡದ ಸೊಲ್ಲಿನಲ್ಲಿ **ಮಾಡು** ಕ್ರಿಯಾಪದದ ರೂಪವಾದ ಮಾಡುವುದು ಎಂಬುದಕ್ಕೆ ಇಲ್ಲ ಪದವನ್ನು ಸೇರಿಸಲಾಗಿದೆ.

ಭೂತಕಾಲದ ಕ್ರಿಯಾಪದವನ್ನು ನಿಷೇಧಾರ್ಥಕವಾಗಿ ಮಳವಳ್ಳಿ ಕನ್ನಡದಲ್ಲಿ ಇದಕ್ಕಿಂತ ಸ್ವಲ್ಪ ಮಟ್ಟಿಗೆ ಬೇರಾಗಿ ಬಳಕೆಗೊಳ್ಳುವುದನ್ನು ಐದನೆ ಉದಾಹರಣೆಯಲ್ಲಿ ಕಾಣಬಹುದು. ಮೂರನೆಯ ಉದಾಹರಣೆಯಲ್ಲಿರುವ ಭೂತಕಾಲವನ್ನು ತಿಳಿಸುವ ಮಾಡ್ಡಿ ಎಂಬ ಕ್ರಿಯಾರೂಪಕ್ಕೆ ನೇರವಾಗಿ ಇಲ್ಲ ಎಂಬ ಪದವನ್ನು ಸೇರಿಸುವ ಬದಲು, ನಾಲ್ಕನೆಯ ಉದಾಹರಣೆಯಲ್ಲಿರುವ ಮಾಡಿದ್ದಿ ಎಂಬ ಅದೇ ಕ್ರಿಯಾಪದದ ಸಮಾಸ ರೂಪಕ್ಕೆ (ಮಾಡಿ+ಇದ್ದೆ ಎಂಬುದಕ್ಕೆ) ಈ ಇಲ್ಲ ಪದವನ್ನು ಸೇರಿಸಲಾಗಿದೆ.

ಈ ರೀತಿ ಮಳವಳ್ಳಿ ಕನ್ನಡದ ನಿಷೇಧಾರ್ಥಕ ರೂಪಗಳಲ್ಲಿ ಲಿಂಗಪ್ರತ್ಯಯಗಳು ಕೆಲವು ಕಡೆಗಳಲ್ಲಿ ಇಲ್ಲ ಪದದ ಮೊದಲು ಬರುತ್ತವೆ ಮತ್ತು ಬೇರೆ ಕೆಲವು ಕಡೆಗಳಲ್ಲಿ ಅದರ ಬಳಿಕ ಬರುತ್ತವೆ. ಉದಾಹರಣೆಗೆ ಕೆಳಗೆ ಕೊಟ್ಟಿರುವ ರೂಪಗಳಲ್ಲಿ ಕಾಣಬಹುದು.

| | **ಏಕವಚನ** | **ಬಹುವಚನ** |
|---|---|---|
| **ಉತ್ತಮಪುರುಷ** | ಕೊಡಲ್ಲಿ | ಕೊಡಲ್ಮೊ |
| **ಮಧ್ಯಮಪುರುಷ** | ಕೊಡ್ತಿಲ್ಲ | ಕೊಡಲ್ರ |
| **ಪ್ರಥಮಪುರುಷ** | ಕೊಡಲ್ನ | ಕೊಡಲ್ರು |

ಈ ಮೇಲಿನ ನಿಷೇಧಾರ್ಥಕ ಕ್ರಿಯಾರೂಪಗಳಲ್ಲಿ ಉತ್ತಮಪುರುಷ ಮತ್ತು ಮಧ್ಯಮಪುರುಷರನ್ನು ತಿಳಿಸುವ ಲಿಂಗ ಪ್ರತ್ಯಯಗಳು ಇಲ್ಲ**,** ಅಲ್ಲ ಪದಗಳ ನಂತರ ಬಂದಿವೆ ಮತ್ತು ಉಳಿದ ಲಿಂಗಪ್ರತ್ಯಯಗಳು ಇಲ್ಲ ಪದದ ಮೊದಲು ಬಂದಿದೆ.

ಭವಿಷ್ಯತ್‌ಕಾಲದ ನಿಷೇಧಾರ್ಥಕ ಕ್ರಿಯಾಪದವನ್ನು ಮಳವಳ್ಳಿ ಕನ್ನಡದಲ್ಲಿ ಈ ರೀತಿಯ ಕ್ರಿಯಾರೂಪಗಳಷ್ಟೆ ಅಲ್ಲದೆ ಬೇರೆ ನಿಷೇಧಾರ್ಥ ಕ್ರಿಯಾರೂಪಗಳು ಬಳಕೆಯಲ್ಲಿವೆ. ಇವನ್ನು ಕ್ರಿಯಾಪದಕ್ಕೆ ಲಿಂಗಪ್ರತ್ಯಯಗಳನ್ನು ನೇರವಾಗಿ ಸೇರಿಸಿ ಪಡೆಯಲಾಗುತ್ತದೆ.

ಉದಾಹರಣೆಗಾಗಿ ಮಾಡು ಕ್ರಿಯಾ ಪದಕ್ಕೆ ಉತ್ತಮಪುರುಷದ ಅಲ್ಲಿ ಪ್ರತ್ಯಯವನ್ನು ನೇರವಾಗಿ ಸೇರಿಸಿ ಮಾಡೆ ಕ್ರಿಯಾರೂಪವನ್ನು ಪಡೆಯಲು ಬರುತ್ತದೆ. ಅದಕ್ಕೆ ಮಾಡುವುದಿಲ್ಲ ಎಂಬ ಅರ್ಥ ಮಳವಳ್ಳಿ ಕನ್ನಡದಲ್ಲಿ ಬರುತ್ತದೆ.

ನಾನು ಆ ಕೆಲ್ಸ್ವ ಮಾಡಲ್ಲಿ<ನಾನು ಆ ಕೆಲಸವನ್ನು ಮಾಡುವುದಿಲ್ಲ

ನಾಮು ಆ ಕೆಲ್ಸ್ವ ಮಾಡಲ್ಮೊ<ನಾವು ಆ ಕೆಲಸವನ್ನು ಮಾಡುವುದಿಲ್ಲ

ಅವು ಆ ಕೆಲ್ಸ್ವ ಮಾಡಲ್ರು<ಅವರು ಆ ಕೆಲಸವನ್ನು ಮಾಡುವುದಿಲ್ಲ

ಈ ನಿಷೇಧಾರ್ಥಕ ಕ್ರಿಯಾರೂಪಗಳು ಉತ್ತಮ ಮತ್ತು ಮಧ್ಯಮ ಪುರುಷರೊಂದಿಗೆ ಬೇರಾಗಿರುವ ಪ್ರಥಮ ಪುರುಷನನ್ನು ತಿಳಿಸುವಲ್ಲಿ ಪುಲ್ಲಿಂಗ ಮತ್ತು ನಪುಂಸಕ ಎಂಬ ವ್ಯತ್ಯಾಸವನ್ನಷ್ಟೆ ತೋರಿಸುತ್ತವೆ. ಇದಕ್ಕಾಗಿ ಕ್ರಿಯಾಪದಗಳೊಂದಿಗೆ ಪುಲ್ಲಿಂಗವನ್ನು ತಿಳಿಸಲು **ಅಮ** ಪ್ರತ್ಯಯವನ್ನು ನಪುಂಸಕಲಿಂಗವನ್ನು ತಿಳಿಸಲು ಅದು ಎಂಬ ಪ್ರತ್ಯಯವನ್ನು ಬಳಸಲಾಗುತ್ತದೆ.

ಅಮ ಯಲ್ಲೂಗ್ಗಿ ವೋಗಲ್ನ<ಅವನು ಎಲ್ಲಿಗೂ ಹೋಗುವುದಿಲ್ಲ

ಅದು ಯಲ್ಲೂಗ್ಗಿ ವೋಗಲ್ದು<ಅದು ಎಲ್ಲಿಗೂ ಹೋಗುವುದಿಲ್ಲ

ಅವ್ವ ಯಲ್ಲೂಗ್ಗಿ ವೋಗಲ್ಲು<ತಾಯಿ ಎಲ್ಲಿಗೂ ಹೋಗುವುದಿಲ್ಲ

ಬರಹ ಕನ್ನಡದಲ್ಲಿ ಮೂರು ಬಗೆಯ ವಿಶೇಷಣರೂಪಗಳು ಬಳಕೆಯಲ್ಲಿವೆ. ಭೂತಕಾಲದ ಕ್ರಿಯೆಯನ್ನು ತಿಳಿಸುವ **ಮಾಡಿದ, ತಂದ, ಕೊಟ್ಟ, ಕೇಳಿದ** ಮೊದಲಾದವು. ಭವಿಷ್ಯತ್‌ಕಾಲದ ಕ್ರಿಯೆಯನ್ನು ತಿಳಿಸುವ **ಮಾಡುವ, ತರುವ, ಕೊಡುವ, ಕೇಳುವ** ಮೊದಲಾದವು ಮತ್ತು ನಿಷೇಧಾರ್ಥಕ ಕ್ರಿಯೆಯನ್ನು ತಿಳಿಸುವ **ಮಾಡದ, ತಾರದ, ಕೊಡದ, ಕೇಳದ** ಮೊದಲಾದವು.

ಮಳವಳ್ಳಿ ಕನ್ನಡದಲ್ಲಿಯೂ ಇಂತಹ ಮೂರು ರೀತಿಯ ವಿಶೇಷಣರೂಪಗಳು ಬಳಕೆಯಾಗುತ್ತವೆ ಎಂಬುದನ್ನು ಕೆಳಗೆ ಕೊಟ್ಟಿರುವ ಉದಾಹರಣೆಯ ಮೂಲಕ ಕಾಣಬಹುದು.

ಪಳ್ಗೆ ಓದ ಅಯ್‌ಕ್ಳು<ಶಾಲೆಗೆ ಹೋದ ಹುಡುಗರು

ಪಳ್ಗೆ ಓಗ್ವ ಅಯ್‌ಕ್ಳು<ಶಾಲೆಗೆ ಹೋಗುವ ಹುಡುಗರು

ಪಳ್ಗೆ ಓಗ್ದ ಅಯ್‌ಕ್ಳು<ಶಾಲೆಗೆ ಹೋಗದ ಹುಡುಗರು

ಬರಹ ಕನ್ನಡ ಮತ್ತು ಮಳವಳ್ಳಿ ಕನ್ನಡಗಳಲ್ಲಿ ಬಳಕೆಯಲ್ಲಿರುವ ಈ ಮೂರು ಬಗೆಯ ವಿಶೇಷರೂಪಗಳ ನಡುವೆ ಕೆಳಗೆ ತಿಳಿಸಿದ ಹಾಗೆ ಎರಡು ಮುಖ್ಯವಾದ ವ್ಯತ್ಯಾಸಗಳಿವೆ.

ಭವಿಷ್ಯತ್‌ಕಾಲವನ್ನು ತಿಳಿಸುವ **ವ್** ಪ್ರತ್ಯಯಕ್ಕೆ ಮಳವಳ್ಳಿ ಕನ್ನಡದಲ್ಲಿ **ಮ್** ಎಂಬ ರೂಪ ಕಾಣಿಸಿಕೊಳ್ಳುತ್ತದೆ. ಅವು ಈ ವಿಶೇಷರೂಪದಲ್ಲೂ ಕಾಣಿಸಿಕೊಳ್ಳತ್ತವೆ ಎಂಬುದು ಒಂದು ವಿಶಿಷ್ಟತೆ. ಬರಹ ಕನ್ನಡದಲ್ಲಿ ಇದು ಬಹಳ ಕಡೆಗಳಲ್ಲೂ **ವ್** ಎಂಬ ಒಂದೇ

ರೂಪದಲ್ಲಿ ಬರುತ್ತದೆ. ಆದರೆ ಇದು ಮಳವಳ್ಳಿ ಕನ್ನಡದಲ್ಲಿ **ಮ್** ಎಂಬ ಬೇರೆ ರೂಪ ಬಳಕೆಯಾಗುವುದನ್ನು ಕಾಣಬಹುದು.

| **ಮಳವಳ್ಳಿ ಕನ್ನಡ** | **ಬರಹ ಕನ್ನಡ** |
| --- | --- |
| ಕೊಡ್ಮ | ಕೊಡುವ |
| ಏಳ್ಮ | ಹೇಳುವ |
| ಓಗ್ಮ | ಹೋಗುವ |
| ಬರ್ಮ | ಬರುವ |
| ತಿನ್ಮ | ತಿನ್ನುವ |
| ಕಾಣ್ಮ | ಕಾಣುವ |

ನಿಷೇಧಾರ್ಥಕ ವಿಶೇಷಣರೂಪವನ್ನು ಪಡೆಯುವುದಕ್ಕಾಗಿ ಬರಹ ಕನ್ನಡದಲ್ಲಿ **ಅದ** (ಅದ್+ಅ) ಪ್ರತ್ಯಯವನ್ನು ಬಳಸಲಾಗುತ್ತದೆ. ಆದರೆ ಮಳವಳ್ಳಿ ಕನ್ನಡದಲ್ಲಿ **ಅಲಿ** ಪ್ರತ್ಯಯ ಬಳಕೆಯಾಗುವುದನ್ನು ಕಾಣಬಹುದು.

| **ಮಳವಳ್ಳಿ ಕನ್ನಡ** | **ಬರಹ ಕನ್ನಡ** |
| --- | --- |
| ಮಾಡಲಿ | ಮಾಡದ |
| ಓಗಲಿ | ಹೋಗದ |
| ಕೇಳಲಿ | ಕೇಳದ |
| ತಿನ್ನಲಿ | ತಿನ್ನದ |

ಇದಲ್ಲದೆ ಕೆಳಗೆ ಕೊಟ್ಟಿರುವ ಬೇರೆಯೂ ಎರಡು ವ್ಯತ್ಯಾಸಗಳು ಮಳವಳ್ಳಿ ಕನ್ನಡಕ್ಕೂ ಬರಹ ಕನ್ನಡಕ್ಕೂ ಇರುವ ವ್ಯತ್ಯಾಸವನ್ನು ತಿಳಿಸುತ್ತವೆ.

ಕ್ರಿಯಾಪದಗಳ ಭವಿಷ್ಯತ್‌ಕಾಲದ ವಿಶೇಷರೂಪದದೊಂದಿಗೆ **ಗಂಟ** ಎಂಬುದನ್ನು ಸೇರಿಸಿ ಅವು ತಿಳಿಸುವ ಕ್ರಿಯಾಪದ ಜರುಗುವ ವರೆಗೆ ಎಂಬ ಅರ್ಥವನ್ನು ಮಳವಳ್ಳಿ

ಕನ್ನಡದಲ್ಲಿ ತಿಳಿಯಬಹುದು. ಬರಹ ಕನ್ನಡದಲ್ಲಿ ಇದಕ್ಕಾಗಿ **ವರೆಗೆ** ಎಂಬುದೇ ಬಳಕೆಯಾಗುತ್ತಿರುವುದನ್ನು ಕಾಣಬಹುದು.

ಅಮ ಬರುಗಂಟ ಕುಂತ್ಕೊ<ಅವನು ಬರುವವರೆಗೆ ಕುಳಿತುಕೊ

ಈ ಜಂಬ್ರ ಮುಗಿಗಂಟ ಯಾರು ಏಳೊಂಗಿಲ್ಲ<ಈ ಕೆಲಸ ಮುಗಿಯುವವರೆಗೆ ಯಾರು ಏಳಬಾರದು

ಮಳವಳ್ಳಿ ಕನ್ನಡದಲ್ಲಿ ಕ್ರಿಯಾಪದಗಳ ವಿಶೇಷರೂಪಕ್ಕೆ **ಓನು, ಓಳು** ಮತ್ತು **ಓರು** ಪ್ರತ್ಯಯಗಳನ್ನು ಸೇರಿಸಿ ಅವುಗಳ ನಾಮರೂಪಗಳನ್ನು ಪಡೆಯಲು ಬರುತ್ತದೆ. ಆದರೆ ಬರಹ ಕನ್ನಡದಲ್ಲಿ ಇದಕ್ಕಾಗಿ ಈ ವಿಶೇಷರೂಪಗಳೊಂದಿಗೆ **ಅವನು, ಅವಳು** ಮತ್ತು **ಅವರು** ಎಂಬ ಸರ್ವನಾಮಗಳನ್ನು ಬಳಸಬೇಕಾಗುತ್ತದೆ.

ಮಳವಳ್ಳಿ ಕನ್ನಡದಲ್ಲಿ ಕ್ರಿಯಾಪದಗಳ ವಿಶೇಷರೂಪಕ್ಕೆ **ಓನು, ಓಳು** ಮತ್ತು **ಓರು** ಪ್ರತ್ಯಯಗಳನ್ನು ಸೇರಿಸಿ ಅವುಗಳ ನಾಮಪದರೂಪಗಳನ್ನು ಪಡೆಯಲು ಬರುತ್ತದೆ. ಆದರೆ ಬರಹ ಕನ್ನಡದಲ್ಲಿ ಇದಕ್ಕಾಗಿ ಈ ವಿಶೇಷರೂಪಗಳೊಂದಿಗೆ **ಅವನು, ಅವಳು** ಮತ್ತು **ಅವರು** ಎಂಬ ಸರ್ವನಾಮಪದಗಳನ್ನು ಬಳಸಲಾಗುತ್ತದೆ.

ಪಳ್ಗೆ/ಇಸ್ಕೂಲ್ಗೆ ಒಗ್ದೋನು ಎಲ್ಲಿ ಕುಂತಿದಾನು?<ಶಾಲೆಗೆ ಹೋಗದವನು ಎಲ್ಲಿ ಕುಳಿತಿದ್ದಾನೆ

ಪ್ಯಾಟ್ಗೋದೋಳು ಇನ್ನೂವೆ ಬಂದೆಯಿಲ್ಲ<ಪೇಟೆಗೆ ಹೋದವಳು ಇನ್ನೂ ಬರಲಿಲ್ಲ

ಆಟಕ್ಕೆ ಒದೋರು ತಿರ್ಗ ಬರ್ವಾಗ ಬೆಳ್ಗಾಯ್ತು<ಆಟಕ್ಕೆ ಹೋದವರು ಹಿಂದಿರುಗಿ ಬರುವಾಗ ಬೆಳಗಾಗಿದೆ

ಮನುಷ್ಯರನ್ನು ಹೊರತುಪಡಿಸಿ ಉಳಿದ ವಿಚಾರಗಳನ್ನು ತಿಳಿಸುವಾಗ ಮಾತ್ರ ಮಳವಳ್ಳಿ ಕನ್ನಡದಲ್ಲಿ **ಇದು** ಮತ್ತು **ಅಲ್ಲೊ** ಎಂಬ ಸರ್ವನಾಮಪದಗಳೇ ಬಳಕೆಯಾಗುತ್ತವೆ. ಆದರೆ ಬರಹ ಕನ್ನಡದಲ್ಲಿ ಇದಕ್ಕೆ **ಉದು** ಮತ್ತು **ಅವು** ಸರ್ವನಾಮಪದಗಳು ಬಳಕೆಯಲ್ಲಿರುವುದನ್ನು ಕಾಣಬಹುದು.

ನೀನು ಬರಿದು ಯಾವಾಗ?<ನೀನು ಬರೆಯುವುದು ಯಾವಾಗ?

ನಮ್ ದನ್ಗಳು ಉಲ್ಲು ತಿನ್ನಲ್ಲೊ<ನಮ್ಮ ಹಸುಗಳು ಹುಲ್ಲು ತಿನ್ನುವುದಿಲ್ಲ

ಮಳವಳ್ಳಿ ಕನ್ನಡದಲ್ಲಿ ಮೇಲಿನ ಉದಾಹರಣೆಗಳಿಗೆ ಹಲವಾರು ಅಪವಾದಗಳೂ ಇವೆ. ಇವುಗಳಲ್ಲಿ ಮುಖ್ಯವಾದುವನ್ನು ಕೆಳಗೆ ಕೊಡಲಾಗಿದೆ.

ಭವಿಷ್ಯತ್ ಕಾಲವನ್ನು ತಿಳಿಸುವ ರೂಪಗಳಲ್ಲಿ **ವ್** ಪ್ರತ್ಯಯದ ಹಿಂದೆ ಉಕಾರವಿದೆಯಾದರೆ, ಕ್ರಿಯಾಪದಕ್ಕೆ ನೇರವಾಗಿ **ದು** ಪ್ರತ್ಯಯ ಸೇರುತ್ತದೆ.

| **ಮಳವಳ್ಳಿ ಕನ್ನಡ** | **ಬರಹ ಕನ್ನಡ** |
| --- | --- |
| ಆಡುದು | ಹಾಡುವುದು |
| ಕೊಡುದು | ಕೊಡುವುದು |
| ಏಳುದು | ಹೇಳುವುದು |
| ಕಟ್ಟುದು | ಕಟ್ಟುವುದು |

ಎಕಾರ ಮತ್ತು ಇಕಾರಗಳಲ್ಲಿ ಕೊನೆಗೊಳ್ಳುವ ಕ್ರಿಯಾಪದಗಳ ಭೂತಕಾಲದ ರೂಪಗಳೊಂದಿಗೆ ದ ಪ್ರತ್ಯಯ ಬರುತ್ತದೆ. ಆದರೆ ಈ ಪ್ರತ್ಯಯ ಸೇರಿದಾಗ ವಿಶೇಷರೂಪದ ಕೊನೆಯ ಅಕಾರ ಇಲ್ಲವಾಗುತ್ತದೆ.

| **ಮಳವಳ್ಳಿ ಕನ್ನಡ** | **ಬರಹ ಕನ್ನಡ** |
| --- | --- |
| ಬರ್ದು | ಬರೆದುದು |
| ಎಳ್ದು | ಎಳೆದುದು |
| ಕುಣ್ದು | ಕುಣಿದುದು |
| ಮುಗ್ದು | ಮುಗಿದುದು |

ಬರಹ ಕನ್ನಡದ ಹಾಗೆ ಮಳವಳ್ಳಿ ಕನ್ನಡದಲ್ಲೂ ವಿಶೇಷಣ ಪದಗಳು ನಾಮಪದಗಳಿಗಿಂತ ಬೇರಾಗಿರುವ ಒಂದು ಗುಂಪಿನಲ್ಲಿ ಬರುತ್ತವೆ. ಆದರೆ ಅವುಗಳ ಬಳಕೆಯಲ್ಲಿ ಕೆಲವು ವ್ಯತ್ಯಾಸಗಳು ಕಾಣಿಸುತ್ತಿದ್ದು ಅವುಗಳಲ್ಲಿ ಮುಖ್ಯವಾದ ಕೆಲವನ್ನು ಕೆಳಗೆ ಕೊಡಲಾಗಿದೆ.

ನಾಮಪದಗಳೊಂದಿಗೆ ಬರುವ ನಾಮವಿಶೇಷಣ ಪದಗಳನ್ನು, ಕ್ರಿಯಾಪದಗಳೊಂದಿಗೆ ಬರುವ ಕ್ರಿಯಾವಿಶೇಷಣ ಪದಗಳಾಗಿ ಮಾರ್ಪಡಿಸಲು ಬರಹ ಕನ್ನಡದಲ್ಲಿ **ಅಗೆ** ಪ್ರತ್ಯಯವನ್ನು ಸೇರಿಸಲಾಗುತ್ತದೆ. ಮಳವಳ್ಳಿ ಕನ್ನಡದಲ್ಲಿ ಈ ಪ್ರತ್ಯಯಕ್ಕೆ **ಗೆ** ರೂಪವನ್ನು ಬಳಸಲಾಗುತ್ತದೆ.

| **ಮಳವಳ್ಳಿ ಕನ್ನಡ** | **ಬರಹ ಕನ್ನಡ** |
| --- | --- |
| ಬೆಳಿ–ಬೆಳ್ಗೆ | ಬಿಳಿ–ಬೆಳ್ಳಗೆ |
| ಕರಿ–ಕರ್ಗೆ | ಕರಿ–ಕರ್ರಗೆ |
| ಬಿಸಿ–ಬೆಚ್ಗೆ | ಬಿಸಿ–ಬೆಚ್ಚಗೆ |

| | |
|---|---|
| ಮೆದು–ಮೆತ್ಗೆ | ಮಿದು–ಮೆತ್ತಗೆ |
| ತೆಳು–ತೆಳ್ಗೆ | ತೆಳು–ತೆಳ್ಳಗೆ |

ವಿಶೇಷಣಪದಗಳನ್ನು ನಾಮಪದಗಳ ಜಾಗದಲ್ಲಿ ಬಳಸುವುದಕ್ಕಾಗಿ ಬರಹ ಕನ್ನಡದಲ್ಲಿ ಅವುಗಳೊಂದಿಗೆ ಅವನು, ಅವಳು, ಅವರು ಮತ್ತು ಅವು ಎಂಬ ಸರ್ವನಾಮಪದಗಳನ್ನು ಬಳಸಲಾಗುತ್ತದೆ.

ಮಳವಳ್ಳಿ ಕನ್ನಡದಲ್ಲಿ ಇದಕ್ಕಾಗಿ **ಅಮ, ಓಳು** ಮತ್ತು **ಅವು** ಎಂಬ ಪ್ರತ್ಯಯಗಳು ಬಳಕೆಯಾಗುತ್ತವೆ. ಆದರೆ **ಅದು** ಮತ್ತು **ಅವು** ಎಂಬ ಪ್ರತ್ಯಯಗಳು ಮಾತ್ರ ಬದಲಾಗದೆ ಹಾಗೆಯೇ ಉಳಿಯುತ್ತವೆ. ಈ ಪ್ರತ್ಯಯಗಳನ್ನು ಕ್ರಿಯಾಪದಗಳ ವಿಶೇಷಣರೂಪಗಳೊಂದಿಗೆ ಬಳಸಲಾಗುತ್ತದೆ.

ದೊಡ್ಡಮ ಎಲ್ಗ್ ಹೋದ್ನಾ?<ದೊಡ್ಡವನು ಎಲ್ಲಿಗೆ ಹೋಗಿದ್ದಾನೆ

ಮಜ್ಗ್ ಬಂದೋಳು ಬೆಣ್ಣೆ ಕೇಳ್ದುಲು<ಮಜ್ಜಿಗೆಗೆ ಬಂದವಳು ಬೆಣ್ಣೆ ಕೇಳಿದಳು

ಅವು ದೊಡ್ಡವು<ಅವು ದೊಡ್ಡವು

ಕ್ರಿಯಾಪದಗಳ ಬಳಕೆಯಲ್ಲಿ ಕಾಣುವ ಲಿಂಗ ಮತ್ತು ವಚನ ಸಂಬಂಧಕ್ಕೂ, ವಿಶೇಷಣಪದಗಳ ನಾಮಪದರೂಪಗಳಲ್ಲಿ ಕಾಣಿಸುವ ಈ ಲಿಂಗ ಮತ್ತು ವಚನಗಳ ಸಂಬಂಧಗಳಿಗೂ ವ್ಯತ್ಯಾಸವಿದೆಯೆಂಬುದನ್ನು ಗಮನಿಸಬಹುದು. ವಿಶೇಷಣಪದಗಳಲ್ಲಿ ಬಳಕೆಯಾಗುವ ನಾಮಪದಗಳಲ್ಲಿ ಎರಡು ಬಹುವಚನ ರೂಪಗಳಿವೆ. ಆದರೆ ಕ್ರಿಯಾರೂಪಗಳಲ್ಲಿ ಒಂದು ಬಹುವಚನ ರೂಪವಷ್ಟೆ ಇದೆ.

| | | |
|---|---|---|
| ದೊಡ್ಡೋನು | ದೊಡ್ಡೋರು | ಬಂದ, ಬಂದವು |
| ದೊಡ್ಡೋಳು | ದೊಡ್ಡೋರು | ಬಂದ, ಬಂದವು |
| ದೊಡ್ಡದು | ದೊಡ್ಡವು | ಬಂತು, ಬಂದವು |

ಮಳವಳ್ಳಿ ಕನ್ನಡ ಕೇವಲ ಬರಹ ಕನ್ನಡ ಬಳಕೆಯ ಕ್ರಮಕ್ಕೆ ಮಾತ್ರ ಹೋಲಿಸದೆ ಜನಪದ ಸಾಹಿತ್ಯ ರೂಪಗಳಾದ ಗಾದೆ, ಕುಲ ಕಸುಬು, ಸ್ಥಳನಾಮಗಳಲ್ಲಿ, ಬಯ್ಗಳದಲ್ಲಿ ಯಾವ ರೀತಿಯ ಭಾಷಿಕ ರಚನೆಯನ್ನು ಉಳಿಸಿಕೊಂಡಿದೆ ಎನ್ನುವುದನ್ನು ವಿವರಿಸಲಾಗಿದೆ. ಮ್ಯಾದರು, ಬೆಸ್ತರು, ಕುಂಬಾರ ಸಮುದಾಯದಲ್ಲಿ ಬಳಸುವ ವಿಶೇಷ ಪದ ಮತ್ತು ಅವುಗಳ ಅರ್ಥ, ಬಳಕೆಯ ಹಿನ್ನೆಲೆಯನ್ನು ಕಾಣಬಹುದು.

ಸಾಮಾಜಿಕ ಭಾಷಾ ಅಧ್ಯಯನದ ವಿಧಾನವನ್ನು ಇಲ್ಲಿ ಬಳಸಿ ವಿವಿಧ ಜಾತಿ, ಕುಲ ಕಸುಬುಗಳಲ್ಲಿ ಬಳಕೆಗೊಳ್ಳುವ ಭಾಷಿಕ ಭಿನ್ನತೆ ಮತ್ತು ವೈಶಿಷ್ಟ್ಯತೆಯನ್ನು ಇಲ್ಲಿ ವಿವರಿಸಲಾಗಿದೆ. ಮಳವಳ್ಳಿ ಕನ್ನಡ ಕಾಯ್ದುಕೊಂಡಿರುವ ಭಿನ್ನತೆಯನ್ನು ಈ ಮೇಲಿನ ಎಲ್ಲಾ ಅಂಶಗಳಿಂದ ಗಮನಿಸಬಹುದು.

## ಪರಾಮರ್ಶನ ಗ್ರಂಥಗಳು


| | | |
|---|---|---|
| ಎಸ್.ಎಸ್.ಅಂಗಡಿ– | ೨೦೦೨ | ಸಂಬಂಧ ವಾಚಕಗಳು ಮತ್ತು ಸಂಬೋಧನೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲ, ಹಂಪಿ, ವಿದ್ಯಾರಣ್ಯ |
| | ೨೦೦೦ | ಸಂಕೀರ್ಣ ವೃತ್ತಿಪದಕೋಶ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ |
| | | ಕುಂಬಾರ ವೃತ್ತಿ ಪದಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲ, ಹಂಪಿ, ವಿದ್ಯಾರಣ್ಯ |
| | | ಶಂಬಾ ಜೋಶಿ ಭಾಷಿಕ ವಿವೇಚನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ |
| ಅನಂತರಾಮು.ಕೆ– | ೧೯೭೭ | ಕನ್ನಡ ಭಾಷಾ ಸ್ವರೂಪ, ಕನ್ನಡ ಸಾಹಿತ್ಯ ಚರಿತ್ರೆ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು |
| ಎ.ಎಸ್.ಆಚಾರ್ಯ– | ೧೯೭೧ | ಬಾರ್ಕೂರು(ಶಿವಳ್ಳಿ) ಕನ್ನಡ, ಡೆಕ್ಕನ್ ಕಾಲೇಜು, ಪೂನಾ |
| ಎ.ಎಸ್.ಆಚಾರ್ಯ– | ೧೯೬೭ | ಹಾಲಕ್ಕಿ ಕನ್ನಡ, ಡೆಕ್ಕನ್ ಕಾಲೇಜು, ಪೂನಾ |

| | | |
|---|---|---|
| ಯು.ಪಿ.ಉಪಾಧ್ಯಾಯ | ೧೯೭೧ | ಕೂರ್ಗ್(ಜೇನುಕುರುಬ)ಕನ್ನಡ ಡೆಕ್ಕನ್ ಕಾಲೇಜು, ಪೂನಾ |
| ಕೆ.ಆರ್.ಉಮಾದೇವಿ | ೨೦೧೦ | ಕನ್ನಡ ಗಾದೆಗಳ ಸಾಂಸ್ಕೃತಿಕ ಅಧ್ಯಯನ, ಬೆಂಗಳೂರು ವಿಶ್ವವಿದ್ಯಾಲಯ |
| ಕೆ. ಕೆಂಪೇಗೌಡ | ೨೦೧೨ | ಮೂಲ ಕನ್ನಡ ಭಾಷೆ, ವಿಜಯಲಕ್ಷ್ಮೀ ಪ್ರಕಾಶನ, ಕುವೆಂಪು ನಗರ, ಮೈಸೂರು |
| ಕುಶಾಲಪ್ಪಗೌಡ | ೧೯೮೬ | ಕನ್ನಡ ಭಾಷೆ ಮತ್ತು ವ್ಯಾಕರಣಗಳ ಒಂದು ಅಧ್ಯಯನ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ |
| ಜೆ.ಎಸ್.ಕುಳ್ಳಿ | ೧೯೬೮ | ಆಧುನಿಕ ಭಾಷಾ ವಿಜ್ಞಾನ, ಧಾರವಾಡ, ಕರ್ನಾಟಕ ವಿಶ್ವವಿದ್ಯಾಲಯ |
| ಜೆ.ಎಸ್.ಕುಳ್ಳಿ | ೧೯೭೧ | ವರ್ಣನಾತ್ಮಕ ಭಾಷಾ ವಿಜ್ಞಾನ, ಸಿರಿಗನ್ನಡ ಪ್ರಕಾಶನ, ಧಾರವಾಡ |
| ಜೆ.ಎಸ್.ಕುಳ್ಳಿ | ೧೯೭೩ | ಐತಿಹಾಸಿಕ ಭಾಷಾ ವಿಜ್ಞಾನ ಸಿರಿಗನ್ನಡ ಪ್ರಕಾಶನ, ಧಾರವಾಡ |
| ಜೆ.ಎಸ್.ಕುಳ್ಳಿ | ೧೯೭೨ | ಭಾಷಾ ಸೌಧ ಸಿರಿಗನ್ನಡ ಪ್ರಕಾಶನ, ಧಾರವಾಡ |
| ಎಂ.ಎಚ್.ಕೃಷ್ಣಯ್ಯ | ೧೯೯೩ | ಸಂಕ್ಷಿಪ್ತ ಕನ್ನಡ ಭಾಷೆಯ ಚರಿತ್ರೆ ಸುವಿದ್ಯಾ ಪ್ರಕಾಶನ, ಬೆಂಗಳೂರು |
| ಕೃಷ್ಣಪರಮೇಶ್ವರ ಭಟ್ಟ | ೨೦೧೩ | ಭಾಷೆ ಮತ್ತು ಸಾಮಾಜಿಕ ಸಂದರ್ಭ, ಅಭಿನವ ಪ್ರಕಾಶನ, ಬೆಂಗಳೂರು |

| | | |
|---|---|---|
| ಕೃಷ್ಣಮಾಚಾರಿ | ೧೯೮೮ | ಹೊಸಗನ್ನಡನುಡಿಗನ್ನಡಿ ಎಂಬ ಹೊಸಗನ್ನಡ ವ್ಯಾಕರಣ, ಏಷ್ಯನ್ ಎಜುಕೇಷನಲ್ ಸರ್ವಿಸ್, ನ್ಯೂವ್ ದೆಹಲಿ |
| ಡಾ.ಕೆ.ವಿ.ಪುಟ್ಟಪ್ಪ(ಸಂ) | ೨೦೦೪ | ಪಂಪಭಾರತಂ ಎಂಬ ವಿಕ್ರಮಾರ್ಜುನ ವಿಜಯಂ ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ |
| ತಮಿಳ್ ಸೆಲ್ವಿ | ೨೦೦೬ | ದ್ರಾವಿಡ ಮೂಲ-ಕನ್ನಡ ತಮಿಳು ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು |
| ತೀ.ನಂ.ಶ್ರೀಕಂಠಯ್ಯ | ೨೦೧೨ | ಕನ್ನಡ ಮಧ್ಯಮ ವ್ಯಾಕರಣ, ಗೀತಾ ಬುಕ್ ಹೌಸ್: ಮೈಸೂರು |
| ರಾ.ಯ.ಧಾರವಡಕರ | ೧೯೯೮ | ಕನ್ನಡ ಭಾಷಾಶಾಸ್ತ್ರ, ಗೀತಾ ಬುಕ್ ಹೌಸ್, ಮೈಸೂರು |
| ಡಾ.ಡಿ.ಎಲ್.ನರಸಿಂಹಾಚಾರ್(ಸಂ) ೧೯೫೧ | | ಕೇಶಿರಾಜ ವಿರಚಿತ ಶಬ್ಧಮಣಿ ದರ್ಪಣಂ ಡಿ.ವಿ.ಕೆ.ಮೂರ್ತಿ ಪ್ರಕಾಶನ, ಮೈಸೂರು |
| ಕೆ.ವಿ.ನಾರಾಯಣ, ಮೇಟಿ ಮಲ್ಲಿಕಾರ್ಜುನ, ಆರ್.ಚಲಪತಿ(ಸಂ)- | ೨೦೧೬ | ಕನ್ನಡ ನುಡಿಯ ಆಕರ ಕೋಶ ಕುವೆಂಪು ಭಾಷಾ ಭಾರತಿ, ಬೆಂಗಳೂರು |
| ಕೆ.ವಿ.ನಾರಾಯಣ | ೨೦೧೧ | ಕನ್ನಡ ಆಡುನುಡಿಯ ಸೊಲ್ಲರಿಮೆ, ಪ್ರಗತಿ ಗ್ರಾಫಿಕ್ಸ್, ಹಂಪಿನಗರ, ಬೆಂಗಳೂರು |

ಕೆ.ವಿ.ನಾರಾಯಣ ೨೦೧೬ ಚಾಮ್‌ಸ್ಕಿ ಜೊತೆಗೆ ಎರಡು ಹೆಜ್ಜೆ ಅಹರ್ನಿಶಿ ಪ್ರಕಾಶನ, ಶಿವಮೊಗ್ಗ

ಕೆ.ವಿ.ನಾರಾಯಣ ೨೦೧೪ ಬಳಕೆಯ ಸಂಸ್ಕೃತ ಪದಗಳಿಗೆ ಕನ್ನಡ ಪದಗಳು, ಪ್ರಗತಿ ಗ್ರಾಫಿಕ್ಸ್, ಹಂಪಿನಗರ, ಬೆಂಗಳೂರು

ಎಂ. ನಂಜುಂಡಸ್ವಾಮಿ ೨೦೧೧ ಭಾರತದ ಮೊದಲ ದೊರೆಗಳು ಮಾಳವ ಫಿಲೊಲಾಜಿಕಲ್ ಅಕಾಡೆಮಿ, ಬೆಂಗಳೂರು

ಎಂ. ನಂಜುಂಡಸ್ವಾಮಿ ೨೦೧೧ ಹೊಲೆಯರು–ಮಾದರು–ರಾಜರು ಮಾಳವ ಫಿಲೊಲಾಜಿಕಲ್ ಅಕಾಡೆಮಿ, ಬೆಂಗಳೂರು

ವ್ಹಿ.ಜಿ.ಪೂಜಾರ ೨೦೧೨ ಕನ್ನಡ ಭಾಷಾ ವಿವೇಚನೆ, ಚೇತನ ಪ್ರಕಾಶನ, ಗುಲ್ಬರ್ಗ

ಎಚ್.ಎಸ್.ಬಿಳಿಗಿರಿ ೧೯೯೬ ಆಲೋಕ, ಕಾಮಧೇನು ಪ್ರಕಾಶನ, ಬೆಂಗಳೂರು

ಬಸವರಾಜ ಕುಂಚೂರು ೨೦೦೬ ಕುಂಬಾರಿಕೆ ವೃತ್ತಿ ಪದಕೋಶ, ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು

ಬಸವರಾಜ ಕೋಡಗುಂಟಿ೨೦೧೧ ಕನ್ನಡ ವಿಬಕ್ತಿ ರೂಪಗಳ ಅಯ್ತಿಹಾಸಿಕ ಬೆಳವಣಿಗೆ, ಬಂಡಾರ ಪ್ರಕಾಶನ, ಮಸ್ಕಿ

ಎಚ್.ಎಸ್.ಬಿಳಿಗಿರಿ ೧೯೬೦ ವರ್ಣಾನಾತ್ಮಕ ವ್ಯಾಕರಣ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

ಎಚ್.ಎಸ್.ಬಿಳಿಗಿರಿ ೧೯೯೫ ವರಸೆಗಳು, ಕನ್ನಡ ಸಂಘ ಕ್ರೈಸ್ತ ಕಾಲೇಜು, ಬೆಂಗಳೂರು

ಪಿ.ಮಹಾದೇವಯ್ಯ ೨೦೧೪ ಕನ್ನಡ ನುಡಿ ಬಳಕೆಯ ನೆಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಮಲ್ಲೇಪುರಂ ಜಿ.ವೆಂಕಟೇಶ ೨೦೦೩ ದ್ರಾವಿಡಶಾಸ್ತ್ರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಕೆ.ಎಂ.ಮೇತ್ರಿ ೨೦೧೨ ಮರಗು ಭಾಷೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಕೆ.ಎಂ.ರಾಘವ ನಂಬಿಯಾರ್ ೨೦೧೨ ದ್ರಾವಿಡ ನಾಡು–ನುಡಿ, ಅಂಕಿತ ಪುಸ್ತಕ ಪ್ರಕಾಶನ, ಬಸವನಗುಡಿ, ಬೆಂಗಳೂರು

ಎಚ್.ಎಸ್.ರಾಜ್ ೨೦೧೨ ಕನ್ನಡಿಗರೂ ದ್ರಾವಿಡರೆ, ನವಕರ್ನಾಟಕ ಪ್ರಕಾಶನ, ಬೆಂಗಳೂರು

ರಾಜೇಶ್ವರಿ ಮಹೇಶ್ವರಯ್ಯ ೨೦೧೧ ಆಧುನಿಕ ವರ್ಣನಾತ್ಮಕ ಭಾಷಾವಿಜ್ಞಾನ, ಸಮಾಜ ಪುಸ್ತಕಾಲಯ, ಧಾರವಾಡ

ಬಿ.ಬಿ.ರಾಜಪುರೋಹಿತ ೨೦೧೨ ಭಾಷಾವಿಜ್ಞಾನ ತತ್ವ ಇತಿಹಾಸ ಮತ್ತು ಅನುಷ್ಠಾನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಡಿ.ಎನ್.ಶಂಕರ ಬಟ್ ೨೦೦೬ ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ, ಭಾಷಾ ಪ್ರಕಾಶನ, ಹೆಗ್ಗೋಡು

ಡಿ.ಎನ್.ಶಂಕರ ಬಟ್ ೧೯೯೫ ಕನ್ನಡ ಭಾಷೆ ಕಲ್ಪಿತ ಚರಿತ್ರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

| | | |
|---|---|---|
| ಡಿ. ಎನ್. ಶಂಕರ್ ಭಟ್ | ೨೦೦೯ | ಕನ್ನಡ ನುಡಿ ನಡೆದು ಬಂದ ದಾರಿ, ಬಾಶಾ ಪ್ರಕಾಶನ, ಹೆಗ್ಗೋಡು, ಸಾಗರ |
| ಡಿ. ಎನ್. ಶಂಕರ್ ಭಟ್ | ೨೦೦೬ | ಕನ್ನಡ ಬರಹವನ್ನು ಸರಿಪಡಿಸೋಣ, ಬಾಶಾ ಪ್ರಕಾಶನ, ಹೆಗ್ಗೋಡು, ಸಾಗರ |
| ಡಿ. ಎನ್. ಶಂಕರ್ ಭಟ್ | ೧೯೯೯ | ಕನ್ನಡ ಪದಗಳ ಒಳರಚನೆ, ಬಾಶಾ ಪ್ರಕಾಶನ, ಹೆಗ್ಗೋಡು, ಸಾಗರ |
| ಡಿ.ಎನ್.ಶಂಕರ್ ಭಟ್ | ೨೦೧೧ | ಮಾತು ಮತ್ತು ಬರಹದ ನಡುವಿನ ಗೊಂದಲ, ಬಾಶಾ ಪ್ರಕಾಶನ, ಹೆಗ್ಗೋಡು, ಸಾಗರ |
| ಷ.ಶೆಟ್ಟರ್ | ೨೦೧೨ | ಶಂಗಂ ತಮಿಳಗಂ ಮತ್ತು ಕನ್ನಡ ನಾಡು–ನುಡಿ, ಅಭಿನವ ಪ್ರಕಾಶನ, ಬೆಂಗಳೂರು |
| ತೀ. ನಂ. ಶ್ರೀಕಂಠಯ್ಯ | ೨೦೧೨ | ಕನ್ನಡ ಮಧ್ಯಮ ವ್ಯಾಕರಣ, ಗೀತಾ ಬುಕ್ ಹೌಸ್, ಮೈಸೂರು |
| ಶಾಲಿನಿ ರಘುನಾಥ | ೧೯೭೯ | ಉಪಭಾಷಾ ಅಧ್ಯಯನ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ |
| ಸೋಮಶೇಖರೇಗೌಡ | ೧೯೮೧ | ಭಾಷಾ ವಿಜ್ಞಾನ ವಿವಕ್ಷೆ, ಸಹೃದಯ ಪ್ರಕಾಶನ, ಮೈಸೂರು |
| ಸೋಮಶೇಖರಗೌಡ | ೧೯೮೦ | ಆಡುಮಾತಿನ ಕನ್ನಡ, ಕನ್ನಡ ಸಾಹಿತ್ಯ ಪತ್ರಿಕೆ, ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ,ಬೆಂಗಳೂರು |
| ಸಾಂಬಮೂರ್ತಿ | ೨೦೦೬ | ಕನ್ನಡದಲ್ಲಿ ಪ್ರತ್ಯಯಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ |

ಸಂಗಮೇಶ ಸವದತ್ತಿಮಠ೧೯೯೮ ಕನ್ನಡಭಾಷಾ ಪ್ರಭೇದಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಹಂಪ ನಾಗರಾಜಯ್ಯ ೨೦೧೩ ದ್ರಾವಿಡ ಭಾಷಾವಿಜ್ಞಾನ, ಡಿ.ವಿ.ಕೆ ಮೂರ್ತಿ ಪ್ರಕಾಶನ, ಮೈಸೂರು

## ಇಂಗ್ಲೀಷ್ ಗ್ರಂಥಗಳು


1. Kannad phonetics reader-U.P.Upadyaya-೧೯೭೨, CIIL, Mysore
2. Halakki kannada-A.S.Achary-೧೯೬೭, Deccan college, Poona
3. Gowda kannada-Kusalappagowda-೧೯೭೦, Annamalai University
4. Mysore District Kannada Dialects-A Comparative Study-Manjulakshi.L, Unpublished Ph.D, University Of Mysore-೧೯೯೬
5. Nanjangud Kannada (vakkaliga dialect)-U.P.Upadhyaya, Deccan College, Poona-೧೯೬೮
6. The Havyaka Dialect Of North Kanara-Shastri.K.G-Karnataka University, Dharwad
7. History of Kannada Language-R .Narasimhacharya-೧೯೬೯, ಗೀತಾ ಏಜೇನ್ಸಿ ಬಳೆಪೇಟೆ, ಬೆಂಗಳೂರು
8. Four Dialect of Kannada- U.P.Upadaya, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು
9. An outline grammar of HAVYAKA-D.N.Shankar Bhat-೧೯೭೧-Deccan College, poona
10. A Descriptive Grammar Of Harijan Dialect B.NAM. Chandaraiah, sharth prakashana, mysore

## ಪ್ರಸ್ತುತ ಅಧ್ಯಯನಕ್ಕೆ ಪರಾಮರ್ಶಿಸಲಾದ ಪಿಎಚ್.ಡಿ ಮಹಾಪ್ರಬಂಧಗಳು

೧. ಆದಿ ಜಾಂಬವರ ಕನ್ನಡ ಒಂದು ವಿವರಣಾತ್ಮಕ ಅಧ್ಯಯನ–ಪಾಂಡುರಂಗ ಬಾಬು (ಅಪ್ರಕಟಿತ) ಮೈಸೂರು ವಿಶ್ವವಿದ್ಯಾಲಯ, ಮೈಸೂರು–೧೯೯೫

೨. ಆದೋನಿ ಕನ್ನಡ–ಓಂಪ್ರಕಾಶ್ ನಾಯಕ(ಅಪ್ರಕಟಿತ) ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ–೨೦೦೭

೩. ಕನ್ನಡ ಬಯ್ಗುಗಳ ಅಧ್ಯಯನ–ಸಿ.ಪಿ.ನಾಗರಾಜ (ಅಪ್ರಕಟಿತ) ಬೆಂಗಳೂರು ವಿಶ್ವವಿದ್ಯಾಲಯ–೧೯೯೩

೪. ಬೀದರ್ ಕನ್ನಡ ಸಾಮಾಜಿಕ ಮತ್ತು ಪ್ರಾದೇಶಿಕ ಪ್ರಭೇದಗಳು ಭಾಷಾಶಾಸ್ತ್ರೀಯ ಅಧ್ಯಯನ–ಶ್ರೀನಿವಾಸ ಬೇಂದ್ರೆ (ಅಪ್ರಕಟಿತ) ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ–

೫. ಡಿಸ್ಕಿಕ್ ಅನಾಲಿಸಿಸ್ ಆದಿಕರ್ನಾಟಕ ಕನ್ನಡ ಸ್ಪೋಕನ್ ಬೈ ಮಂಡ್ಯ ಡಿಸ್ಟಿಕ್–ಬಿ.ಮಲ್ಲಿಕಾರ್ಜುನ(ಅಪ್ರಕಟಿತ)–ಮೈಸೂರು ವಿಶ್ವವಿದ್ಯಾಲಯ–೨೦೦೨

೬. ಜನಭಾಷೆ ಮತ್ತು ಪ್ರಭುತ್ವ ಭಾಷೆಗಳ ಸಂಘರ್ಷ–(ಪ್ರಕಟಿತ)ರಂಗನಾಥ ಕಂಟನಕುಂಟೆ–ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ–೨೦೧೦

೭. ಮಸ್ಕಿ ಕನ್ನಡ–ಒಂದು ಭಾಷಿಕ ಅಧ್ಯಯನ–ಜೋಗಿನಕಟ್ಟೆ ಮಂಜುನಾಥ (ಅಪ್ರಕಟಿತ)ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ–೨೦೧೨

೮. ಕನ್ನಡ ಗಾದೆಗಳ ಸಾಂಸ್ಕೃತಿಕ ಅಧ್ಯಯನ–ಕೆ.ಆರ್.ಉಮಾದೇವಿ(ಅಪ್ರಕಟಿತ) ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು–೨೦೧೦

## ಪತ್ರಿಕೆಗಳು

(ಅರ್ಧವಾರ್ಷಿಕ ಪತ್ರಿಕೆಗಳು)

೧. ದ್ರಾವಿಡ ಅಧ್ಯಯನ-ಸಂಪುಟ೧, ಸಂಚಿಕೆ೧-ಡಿಸೆಂಬರ್-, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

೨. ದ್ರಾವಿಡ ಅಧ್ಯಯನ-ಸಂಪುಟ೨, ಸಂಚಿಕೆ೧-ಜನವರಿ-ಜೂನ್-ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩.

೩. ದ್ರಾವಿಡ ಅಧ್ಯಯನ-ಸಂಪುಟ೩, ಸಂಚಿಕೆ೨-ಜುಲೈ-ಡಿಸೆಂಬರ್-ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,೨೦೦೪.

೪. ದ್ರಾವಿಡ ಅಧ್ಯಯನ-ಸಂಪುಟ೪, ಸಂಚಿಕೆ೨-ಜುಲೈ-ಡಿಸೆಂಬರ್-ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,೨೦೦೫.

೫. ದ್ರಾವಿಡ ಅಧ್ಯಯನ-ಸಂಪುಟ೫, ಸಂಚಿಕೆ೨-ಜುಲೈ-ಡಿಸೆಂಬರ್-ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,೨೦೦೬

**ಅನುಬಂಧ**

ದತ್ತಾಂಶಗಳನ್ನು ನೀಡಿದ ಪ್ರಮುಖ ವಕ್ತೃಗಳ ಸಹಾಯ ಮತ್ತು ಸಹಕಾರವೇ ಪ್ರಸ್ತುತ ವಿಶ್ಲೇಷಣೆ. ಪ್ರಸ್ತುತ ಸಂಶೋಧನ ಕಾರ್ಯದಲ್ಲಿ ನೆರವಾದ ವಕ್ತೃಗಳ ವಿವರವನ್ನು ಅನುಂಧದ ರೂಪದಲ್ಲಿ ಈ ಕೆಳಗಿನಂತೆ ನೀಡಲಾಗಿದೆ.

| | ಹೆಸರು | ವಯಸ್ಸು | ಗ್ರಾಮ | ವೃತ್ತಿ | ವಿದ್ಯಾಭ್ಯಾಸ |
|---|---|---|---|---|---|
| ೧. | ಕರಿಯಯ್ಯ | ೫೦ | ಬಂಡೂರು | ಕೂಲಿ | ಇಲ್ಲ |
| ೨. | ಕಾಳಿಂಗಣ್ಣ | ೪೫ | ಚೊಟ್ಟನಹಳ್ಳಿ | ವ್ಯವಸಾಯ | ಇಲ್ಲ |
| ೩. | ಮರಿಯಣ್ಣು | ೪೫ | ಧನಗೂರು | ಕೂಲಿ | ಇಲ್ಲ |
| ೪. | ರುಕ್ಕಮ್ಮ | ೪೦ | ನೆಟ್ಕಲ್ | ವ್ಯವಸಾಯ | ಇಲ್ಲ |
| ೫. | ನಾಗಣ್ಣ | ೫೫ | ದಡಮಳ್ಳಿ | ವ್ಯವಸಾಯ | ಇಲ್ಲ |
| ೬. | ಮರಣ್ಣ | ೬೫ | ದಬ್ಬಹಳ್ಳಿ | ವ್ಯವಸಾಯ | ಇಲ್ಲ |
| ೭. | ಮರಯ್ಯ | ೭೦ | ಕೋಡಿಪುರ | ವ್ಯವಸಾಯ | ಇಲ್ಲ |
| ೮. | ರಾಕಯ್ಯ | ೭೦ | ಗಾಣಾಳು | ಕೂಲಿ | ಇಲ್ಲ |
| ೯. | ಸಿದ್ಧಯ್ಯ | ೬೦ | ರಾವಣಿ | ವ್ಯವಸಾಯ | ಇಲ್ಲ |
| ೧೦. | ಮರಯ್ಯ | ೬೫ | ನೆಲಮಾಕನಹಳ್ಳಿ | ಕೂಲಿ | ಇಲ್ಲ |
| ೧೧. | ಮಾಳಿಗೆ | ೫೫ | ಗಾಜನೂರು | ಕೂಲಿ | ಇಲ್ಲ |
| ೧೨. | ಕೆಂಪಮ್ಮ | ೫೨ | ಮಾಗನೂರು | ಕೂಲಿ | ಇಲ್ಲ |
| ೧೩. | ರಾಚಮ್ಮ | ೬೫ | ಅಂಚೇದೊಡ್ಡಿ | ವ್ಯಾಪರ | ಇಲ್ಲ |
| ೧೪. | ಜವನಮ್ಮ | ೬೮ | ಅಂತರಹಳ್ಳಿ | ಕೂಲಿ | ಇಲ್ಲ |
| ೧೫. | ಕೆಂಪಯ್ಯ | ೭೦ | ದಾಸನದೊಡ್ಡಿ | ವ್ಯಾಪರ | ಇಲ್ಲ |
| ೧೬. | ಜವರಯ್ಯ | ೬೮ | ಶಿಂಷಾಪುರ | ಕೂಲಿ | ಇಲ್ಲ |
| ೧೭. | ಕೆಂಚಯ್ಯ | ೭೮ | ಚಿಲ್ಲಾಪುರ | ಇಲ್ಲ | ಇಲ್ಲ |
| ೧೮. | ಕಾಳಿರಯ್ಯ | ೫೫ | ಯತ್ತಂಬಾಡಿ | ಕೂಲಿ | ಇಲ್ಲ |
| ೧೯. | ಕುಳ್ಳಯ್ಯ | ೬೫ | ಕಲ್ಕುಣಿ | ಇಲ್ಲ | ಇಲ್ಲ |
| ೨೦. | ಮರಿಮಾದಯ್ಯ | ೭೫ | ಗಾಜನೂರು | ಇಲ್ಲ | ಇಲ್ಲ |

| | | | | | |
|---|---|---|---|---|---|
| ೨೨. | ಬಸವೇಗೌಡ | ೬೦ | ಕಂಸಾಗರ | ವ್ಯವಸಾಯ | ಇಲ್ಲ |
| ೨೩. | ಜೋಗಯ್ಯ | ೭೦ | ನಿಡಘಟ್ಟ | ಇಲ್ಲ | ಇಲ್ಲ |
| ೨೪. | ದಾಸಯ್ಯ | ೬೦ | ಹಲಗೂರು | ವ್ಯಾಪರ | ಇಲ್ಲ |
| ೨೫. | ಸರೋಜಮ್ಮ | ೫೫ | ಗುಂಡಾಪುರ | ವ್ಯಾಪರ | ಇಲ್ಲ |
| ೨೬. | ಚಿಕ್ಕನಂಜಮ್ಮ | ೪೨ | ಬೆಳಕವಾಡಿ | ಕೂಲಿ | ಇಲ್ಲ |
| ೨೭. | ಮುದ್ದೇಗೌಡ | ೫೦ | ಪೂರಿಗಾಲಿ | ಕೂಲಿ | ಇಲ್ಲ |
| ೨೮. | ಈರೇಗೌಡ | ೪೮ | ದಳವಾಯಿಕೋಡಳ್ಳಿ | ಕೂಲಿ | ಇಲ್ಲ |
| ೨೯. | ಮಂಚಯ್ಯ | ೫೨ | ತೊರೆಕಾಡನಹಳ್ಳಿ | ಕೂಲಿ | ಇಲ್ಲ |
| ೩೦. | ಮಂಟೇಸ್ವಾಮಿ | ೩೮ | ಬಾಣಸಮುದ್ರ | ಕೂಲಿ | ಇಲ್ಲ |

ಇಲ್ಲಿ ನೀಡಿರುವ ಹೆಸರಿನ ಮಾಹಿತಿ ಕೆಲವರನ್ನು ಮಾತ್ರ ನೀಡಲಾಗಿದೆ. ಸಂದರ್ಶನ ಮಾಡಿದ ಎಲ್ಲರ ಹೆಸರನ್ನು ಇಲ್ಲಿ ನೀಡಲಾಗಿಲ್ಲ. ಇವರಲ್ಲದೇ ಇನ್ನು ಅನೇಕ ಜನರು ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ದತ್ತಾಂಶ ಸಂಗ್ರಹ ಕಾರ್ಯದಲ್ಲಿ ಸಹಕಾರಿಯಾಗಿದ್ದಾರೆ. ದತ್ತಾಂಶ ಸಂಗ್ರಹ ಹಾಗೂ ನನ್ನ ಸಂಶೋಧನ ಅಧ್ಯಯನಕ್ಕೆ ಸಹಕರಿಸಿದ ಎಲ್ಲರಿಗೂ ಕೃತಜ್ಞತೆಯನ್ನು ಹೇಳಲು ಬಯಸುತ್ತೇನೆ.